# ಒಂಟಿ

## ಸಣ್ಣ ಕಥೆಗ



ಬಿ.ಆರ್. ಜೋಯಪ್ಪ

# ಚಾಂಪಾ

## ಸಣ್ಣ ಕಥೆಗ

ಬಿ. ಆರ್. ಜೋಯಪ್ಪ




ಪ್ರಕಾಶಕರ್
ಕೊಡಗು ಗೌಡ ವಿದ್ಯಾಸಂಘ,
ಗುಡ್ಡೆಮನೆ ಅಪ್ಪಯ್ಯಗೌಡ ದಾರಿ,
ಮಡಿಕೇರಿ, ಕೊಡಗು ಜಿಲ್ಲೆ.

**CHAMPA** Short stories by *B. R. Joy appa,* Principal,
Made Maheshwara Jr. college, Made Post - 571201,
Madikeri Taluk, Kodagu Dist., published by Kodagu Gowda
Vidya Sangha (Regd.), Guddemane Appaiah Gowda Road,
Madikeri - 571201, Kodagu District.

No. of Pages : XIV+100

First Impression 2003



ಮುಖ ಪುಟ ವಿನ್ಯಾಸ ಮತ್ತು ರೇಖಾ ಚಿತ್ರಗಳು : *ಕು. ಚರಿತಾ,*
ಮನೆ ಸಂ. 1255, ಪಡುವಣ 4ನೇ ಅಡ್ಡ ರಸ್ತೆ,
ಕುವೆಂಪು ನಗರ, ಮೈಸೂರು.

ಬೆಲೆ : 50 ರೂಪಾಯಿಗಳು

ಮುದ್ರಣ : ಶ್ರೀದೇವಿ ಪ್ರಿಂಟರ್ಸ್,
ಮಂಗಳೂರು ರಸ್ತೆ,
ಮಡಿಕೇರಿ.
ದೂರವಾಣಿ - 228499



## ಅರ್ಪಣೆ

ಕಣ್ಮರೆಯಾದ ಹಿರಿಯ ಚೇತನಗಳಿಗೆ
ಮತ್ತೆ
ಅತೀ ಕಿರಿಯ ವಯಸ್‌ಲೇ ತೀರಿಕಂಡ
ನನ್ನ ವಿದ್ಯಾರ್ಥಿ, ವಿದ್ಯಾರ್ಥಿನಿಗಳಿಗೆ
ನನ್ನ ಈ ಕೃತಿನ ಅರ್ಪುಸ್ತಾ ಒಳೆ.



# ಕೊಡಗು ಗೌಡ ವಿದ್ಯಾಸಂಘ (ರಿ.)

## ಆಡಳಿತ ಸಮಿತಿ

ಅಧ್ಯಕ್ಷರ್ :
ಶ್ರೀ ಹೊಸೂರು ರಮೇಶ್

ಕಾರ್ಯದರ್ಶಿ :
ಶ್ರೀ ಕುಡೆಕಲ್ಲು ಆರ್. ವಿದ್ಯಾಧರ

ಉಪಾಧ್ಯಕ್ಷರ್ :
ಶ್ರೀ ಸೂರ್ತಲೆ ಸೋಮಣ್ಣ

ಸಹ ಕಾರ್ಯದರ್ಶಿ :
ಶ್ರೀ ಅಂಬೆಕಲ್ಲು ನವೀನ್ ಕುಶಾಲಪ್ಪ

ಖಜಾಂಚಿ :
ಶ್ರೀ ಪೊನ್ನಚ್ಚನ ಸೋಮಣ್ಣ

ನಿರ್ದೇಶಕರ್ :

ಶ್ರೀ ಕೋಡಿ ಚಂದ್ರಶೇಖರ್
ಡಾ|| ಕುಯ್ಯಮುಡಿ ಅಪ್ಪಾಜಿ
ಶ್ರೀಮತಿ ಯಾಲದಾಳು ಸಾವಿತ್ರಿ
ಶ್ರೀಮತಿ ಅಮೆ ಕಮಲಾ ಗಣಪತಿ
ಶ್ರೀ ಸೂದನ ಈರಪ್ಪ

ಶ್ರೀ ಕುಕ್ಕನೂರು ನಾಣಯ್ಯ
ಶ್ರೀ ಪರ್ಲಕೋಟಿ ಕಾವೇರಪ್ಪ (ಕಾಂತ)
ಶ್ರೀ ಬೆಪ್ಪುರನ ಮೇದಪ್ಪ
ಶ್ರೀ ಮೊಟ್ಟೇರ ಬಾಲಕೃಷ್ಣ (ಉಲ್ಲಾಸ)
ಶ್ರೀ ಪಾಣತ್ತಲೆ ಬಾಲಕೃಷ್ಣ



# ಪ್ರಕಾಶಕರ ಮಾತ್

ಕೊಡಗು ಗೌಡ ವಿದ್ಯಾಸಂಘ ಜ್ಞಾನದ ವಿಕಸನಕ್ಕಾಗಿ ಕೆಲಸ ಮಾಡ್ತಿರುವ ಒಂದ್ ಸಂಸ್ಥೆ. 1908ನೇ ಇಸವಿಲಿ ನಮ್ಮ ಸಂಸ್ಥೆ ಸ್ಥಾಪನೆಯಾದಲ್ಲಿಂದ ಇಲ್ಲಿವರೆಗೆ ನಮ್ಮ ಸಮುದಾಯದೊಳಗೆ ಶೈಕ್ಷಣಿಕ ಪ್ರಗತಿಗಾಗಿ ಶ್ರಮ ಪಡ್ತಾ ಬಂದುಟು. ನಮ್ಮ ಹಿರಿಯರ್ ಹಾಕಿ ಕೊಟ್ಟ ಕೈತಾಂಗ್ ಹಿಡ್ದ್ ನಡಿವ ಕಾರ್ಯನ ಇಂದ್‌ನ ಪೀಳಿಗೆನ ನಾವು ಮುಂದುವರ್ಸ್‌ವ ಪ್ರಯತ್ನಲಿ ಒಳ್ಳೊ.

ಶಿಕ್ಷಣ ಅಂತ ಹೇಳುವ ಪರಿಭಾಷೆ ಇಂದ್ ತುಂಬ ವಿಶಾಲ ಅರ್ಥನ ಪಡ್ಕಂಡುಟ್ಟು; ಸಾಂಪ್ರದಾಯಿಕ ಕಟ್ಟ್‌ಪಾಡ್‌ಗಳ ಅದ್ ಮೀರಿ ನಡ್ದುಟು. ಇಂಥ ಸಂದರ್ಭಲಿ ಸಮಕಾಲೀನ ಒತ್ತಡ, ಆಶಯಗಳಿಗೆ ಪ್ರತಿಕ್ರಿಯೆ ಕೊಡಕಾದದ್ ನಮ್ಮ ಜವಾಬ್ದಾರಿಂತ ಹೇಳ್ಬ ಸಂಘದ ಒಟ್ಟು ಗ್ರಹಿಕೆ. ಈ ಹಿನ್ನೆಲೆಲಿ, ಒಳ್ಳದ್‌ಂತ ನಾವ್ ತಿಳ್ಕಂಡಿರುವ, ಕೆಲವ್ ಕಾರ್ಯಚಟುವಟಿಕೆಗಳ ಮಾಡಿಕೆ ನಮಿಗೆ ಸಾಧ್ಯ ಆಗುಟು. ಪುಸ್ತಕ ಪ್ರಕಟಣೆ ಮಾಡುವ ಧೈರ್ಯ ಸಹ ಇದೇ ಕಾರಣಕ್ಕೆ ನಮ್ಮೊಳಗೆ ಹುಟ್ಟಿಕಂಡದ್.

ಕಳ್ದ ಕೆಲವು ವರ್ಷಗಳ್‌ಂದ ಶ್ರೀ ಬಾರಿಯಂಡ ಆರ್. ಜೋಯಪ್ಪನವು ನಮ್ಮ ಭಾಷೆಲಿ ಸಾಹಿತ್ಯ ರಚನೆ ಮಾಡ್ತಾ ಒಳ್ಳೊ. ಅರೆಕನ್ನಡ ಭಾಷೆನ ಗದ್ಯ ಸಾಹಿತ್ಯ ಇಲ್ಲಿವರೆಗೆ ಸಂಕಲನ ರೂಪಲಿ ಹೊರಗೆ ಬಾತ್ಲೆ. ಸಾಹಿತ್ಯ ಅಂದರೆ ಅದೊಂದು ಮಾಯಾಮೃಗ ಅಲ್ಲ, ನಮ್ಮ ಮನೆ ಕೈಯಾಲೆ, ಕೋಂಬರೆಗಳಲ್ಲಿನೂ ಅದ್ ಹುಟ್ಟುದು, ನಮ್ಮ ಮನೆಮಾತ್‌ಲಿ ಅದ್ ಅಭಿವ್ಯಕ್ತಿ ಪಡ್ಕಂಬುದು ಅಂತ ನಾವು ತಿಳ್ಕಂಡೊಳ್ಳೊ. ಹಾಂಗೆ ಶ್ರೀ ಬಾರಿಯಂಡ ಆರ್. ಜೋಯಪ್ಪನವರ ಬರಹಗಳ ಸಂಕಲನ ತಾವ ಜವಾಬ್ದಾರಿಗೆ ನಾವ್ ಕೈ ಹಾಕೊಳ್ಳೊ. ಈ ಕೃತಿ ನಮ್ಮ ಸಮುದಾಯದ ಜನರಿಗೆ, ಅದರ್ಲಿನೂ ಹೊಸ ತಲೆಮಾರ್‌ನವ್ಕೆ ಸಾಹಿತ್ಯದ ಮೇಲೆ ಆಸಕ್ತಿ, ಪ್ರೀತಿ ಹೆಚ್ಚಸಲೀಂತ ನಮ್ಮ ಹಂಬಲ.

*ಶ್ರೀ ಬಾರಿಯಂಡ ಆರ್. ಜೋಯಪ್ಪ*ನವು ಮದೆನಾಡ್‌ನ ಮದೆ ಮಹೇಶ್ವರ ಜೂನಿಯರ್ ಕಾಲೇಜ್‌ಲಿ ಪ್ರಿನ್ಸಿಪಾಲರಾಗಿ ಸೇವೆ ಸಲ್‌ಸ್ತಾ ಒಳ್ಳೊ. ಇವು 1998ರ್ಲಿ ಬರ್ದ 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು' ಪುಸ್ತಕ ತುಂಬಾ ಹೆಸ್‌ರ್ ಪಡ್ದುಟು. ಈಗ ಇವು ಬರ್ದ ಈ ಎರಡನೇ ಪುಸ್ತಕ ಈ ನಾಡಿಗೆ ಸಲ್ಲುವ ಮತ್ತೊಂದು ಅಮೂಲ್ಯ ಕಾಣಿಕೆ. 'ಚಾಂಪಾಂ'ತೇಳುವ ಸಣ್ಣ ಕಥೆಗಳ ಈ ಪುಸ್ತಕನ ಕೊಡಗು ಗೌಡ ವಿದ್ಯಾಸಂಘ ಹೊರ ತರ್ತಾ ಇರ್ದು ಹೆಮ್ಮೆನ ವಿಚಾರ. ಶ್ರೀ ಜೋಯಪ್ಪನವುಕ್ಕೆ ನಾವು ಋಣಿ ಆಗೊಳ್ಳೊ. ಅವು ಇನ್ನೂ ಸನ ಬರೆಯೊಕು. ಆ ಭರವಸೆ ನಾವಿಗುಟ್ಟು. ಜೋಯಪ್ಪನವುಕೆ ನಮ್ಮ ಅಭಿನಂದನೆಗ.

*ಹೊಸೂರು ರಮೇಶ್ ಜೋಯಪ್ಪ*
ಅಧ್ಯಕ್ಷರ್
ಮತ್ತೆ
ಸದಸ್ಯರ್
ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ, ಕೊಡಗು ಜಿಲ್ಲೆ.

# ಮುನ್ನುಡಿ

ಶ್ರೀ ಬಾರಿಯಂಡ ಆರ್. ಜೋಯಪ್ಪನವು ನಮ್ಮ ಪರಿಸರದ, ನಮ್ಮ ಸಮುದಾಯದ ವಿಶಿಷ್ಟ ಲೇಖಕ. ಕನ್ನಡ ಭಾಷೆಲಿ ಬರವಣಿಗೆ ಆರಂಭ ಮಾಡ್ದ ಅವು ಬರ್ದ 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು' ಸಂಕಲನದ ಮೂಲಕ ಕನ್ನಡ ಸಾಹಿತ್ಯಲೋಕದ ಹೊಸ ಸಂವೇದನೆಯಾಗಿ ಕಾಣ್ಸಿಕಂಡೊ. ಆ ಕೃತಿನ ಕ್ರೈಸ್ಟ್ ಕಾಲೇಜ್, ಬೆಂಗಳೂರು ಇದರ 'ಕನ್ನಡ ಸಂಘ' 1998ನೇ ವರ್ಷಲಿ ಬೆಳ್ಳಿಹಬ್ಬದ ಕೊಡುಗೆಯಾಗಿ ಪ್ರಕಟ ಮಾಡ್ತ್. ಆ ಸಂಕಲನನ ಕನ್ನಡದ ವಿಮರ್ಶಕರ್ 'ಮೃಗಯಾ ಸಾಹಿತ್ಯ' ಪ್ರಕಾರದ ಹೊಸ ಸ್ವರೂಪ ಅಂತ ಗುರ್ತಿಸಿದೊ. ಹಾಂಗೆನೇ ಕುವೆಂಪು ಕೃತಿಗಳಲ್ಲಿ ಕಾಂಬಕೆ ಸಿಕ್ಕುವ ಬೇಟೆ ವಿವರಣೆ, ಅಲ್ಲದೆ ಜಿಂ ಕಾರ್ಬೆಟ್ ಮತ್ತು ಕೆದಂಬಾಡಿ ಜತ್ತಪ್ಪ ರೈಗಳಲ್ಲಿ ನೋಡುವ ಬೇಟೆ ಅನುಭವಗಳೊಟ್ಟಿಗೆ ತುಲನೆ ಮಾಡಿಕೆ ಸುರ್ ಮಾಡ್ದೊ. ಒಂದ್ ಹಂತದವರೆಗೆ ಇದ್ ಬಿ. ಆರ್. ಜೋಯಪ್ಪನವ್ಕೆ ಒಂದ್ 'ಗುರುತಿಸುವಿಕೆ' ಮತ್ತು ಉತ್ತೇಜನ ಕೊಟ್ಟದ್ ನಿಜ. ಆದರೆ 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು' ಒಂದ್ ಮಾನವೀಯ ನೆಲೆನ ಹೃದಯಸ್ಪರ್ಶಿ ಪ್ರಸಂಗಗಳ ಸಂಗ್ರಹ ಆಗಿತ್. ಸಂಕಲನದ ಪ್ರತಿಯೊಂದು ಪ್ರಸಂಗಗಳೂ ಓದುಗನ ಎದೆ ಕಲಕುವ, ಕರಗ್‌ಸುವ ಅಪೂರ್ವ ಮಾದರಿಗ ಆಗಿದ್ದೊ. ಅತ್ಯಂತ ಸ್ವಂತಿಕೆನ ಮಾತ್ ಏನ್‌ಂತ ಹೇಳ್ರೆ ದಟ್ಟ ಕಾಡ್‌ನ, ಅದರೊಟ್ಟಿಗೆ ಕರುಳಬಳ್ಳಿ ಸಂಬಂಧದ ಮಾನವ ಮತ್ತು ಮೃಗದ ಕತೆಗಳೇ ಎಲ್ಲ ಪ್ರಸಂಗಗಳ ಸ್ಥೂಲ ಸ್ವರೂಪ ಆಗಿತ್. ಭಾಷೆನ ಅದ್ಭುತ ನವಿರಾದ ಬಳಕೆ ಸಹ ಆ ಸಂಗ್ರಹದ ಹೆಗ್ಗಳಿಕೆನ ಅಂಶ ಆಗಿತ್. ಇಂಥದೊಂದ್ ಮಾದರಿನ ಅಲ್ಲಿವರೆಗೆ ಕನ್ನಡ ಸಾಹಿತ್ಯಲೋಕ ಕಂಡದ್ ಇಲ್ಲೆ. ಈ ರೀತಿ ಬರ್ದ ಶ್ರೀ ಬಿ. ಆರ್. ಜೋಯಪ್ಪ ಅವರ ಮಾತೃಭಾಷೆಲೇ ಬರ್ದರೆ ಹೇಂಗಿರ್ದು...! ?

ಅಲ್ಲಿ ಇಲ್ಲಿ ಕೇಳ್ದರ, ಕಣ್ಣ್‌ಗೆ ಕಂಡದರ ಎದೆಗೆ ಬಾಣ ನೆಟ್ಟಷ್ಟ್ ವಿಹ್ವಲತೆಂದ ಕನ್ನಡಲಿ ಬರ್ದ ಶ್ರೀ ಬಿ. ಆರ್. ಜೋಯಪ್ಪ ಅರೆಕನ್ನಡಲಿ ಬರ್‍ಯಕನ ತಮ್ಮ ಶೈಲಿ, ತಂತ್ರ, ಉದ್ದೇಶ ಎಲ್ಲದರ್‍ೂ ಸ್ವಲ್ಪ ಬದಲಾಯಿಸಿದಂಗೆ ಕಂಡದೆ. ಹಾಂಗೆನೇ ಈ ಕೃತಿ 'ಚಾಂಪಾ' ಮತ್ತು 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು' ಸಂಕಲನ ಇವುಗಳ ನಡುವೆ ಸಾಕಷ್ಟ್ ವ್ಯತ್ಯಾಸನ ನೋಡಕ್. 'ಯಾರ ಬೇಟೆ......' ಪ್ರಸಂಗಗಳ ಅಂತಿಮ ಪರಿಣಾಮದ ಬಳಕೆ ಇಲ್ಲಿನ ಕತೆಗಳಲ್ಲಿ ಇಲ್ಲೆ. ಆದರೆ ಇಲ್ಲಿ ಮುಖ್ಯವಾಗಿ ಕಾಂಬೊದು ಹಾಸ್ಯದ ಲೇಪನ, ವ್ಯಂಗ್ಯದ ನೋಟ. 'ಚಾಂಪಾ' ಸಂಕಲನದ ಕತೆಗಳಲ್ಲಿ ಲೇಖಕರ್ ಬದ್‌ಕ್‌ನ ಅಂಕ್‌ಡೊಂಕ್‌ಗಳತ್ತ, ಓರೆಕೋರೆಗಳತ್ತ ಗಮನ ಕೊಟ್ಟೊಳೊ. ಅದರ್‌ಂದಲೂ ಮುಖ್ಯವಾಗಿ ಗ್ರಾಮೀಣ ಬದ್‌ಕ್‌ನ ಕೆಲವ್ ಲಘು ಸಂದರ್ಭಗಳ, ಅರಿವು ನಂಬಿಕೆಗಳ ಅತಿರೋಚಕ ಕಲ್ಪನೆಗಳ, ಈ ಎಲ್ಲಾ ವಿಷಯಗಳ ಅದ್ ಪಡ್ಕಂಡಿರುವ ಭಾಷೆಲಿನೇ ಬರ್ದದ್ ಒಂದ್ ಅಪೂರ್ವ ಲೋಕಕ್ಕೆ ನಮ್ಮ ಕರ್ಕಂಡ್ ಹೋದೆ. ಈ ಅದ್ಭುತ ಪ್ರಪಂಚದ

ಪರಿಚಯ ಇದ್ದವ್ಕೆ ಅದರ ಪುನರ್ ನಿರ್ಮಾಣ ಆಶ್ಚರ್ಯ, ಸಂತೋಷ ಕೊಟ್ಟರೆ, ಅದರ ಪರಿಚಯ ಇಲ್ಲದವ್ಕೆ ಹೊಸತೊಂದು ನಿಗೂಢ, ಅಮೂರ್ತ, ಅಚ್ಚರಿನ ಲೋಕಕ್ಕೆ ಕೈ ಹಿಡ್ದ್ ದಾಟಿದಾಂಗೆ ಆದು ಖಂಡಿತ.

ಅರೆಕನ್ನಡಲಿ ಇಲ್ಲಿವರೆಗೆ ಸಾಹಿತ್ಯದ ರಚನೆ ನಡ್ದದ್ ತುಂಬ ಕಡಿಮೆ. ಬಾಯ್ದಾರೆ ತಲೆಮಾರ್‌ಗಳಾಚೆ ಪ್ರವಹಿಸ್‌ತಾ ಬಂದ ಗಾದೆ, ನುಡಿಗಟ್, ಚುಟುಕು, ಹಾಡ್, ಸೋಬಾನೆಗ ಇದ್ದರೂ ನಮ್ಮ ಭಾಷೆಲಿ ಲಿಖಿತ ಸಾಹಿತ್ಯದ ಸೃಷ್ಟಿ ಎದ್ ಕಾಂಬಾಂಗೆ ಆತೇ ಇಲ್ಲೆ. ದಿ. ಕೂಡಕಂಡಿ ಪೊನ್ನಪ್ಪ ಹಾಗೂ ಶ್ರೀ ಹೊದ್ದೆಟ್ಟಿ ಭವಾನಿಶಂಕರ ಇವು ಅರೆಕನ್ನಡಲಿ ಪದ್ಯ ಬರ್‍ಯಕೆ ಮುಂದೆ ಸುರ್ ಮಾಡ್‌ದವು. ಬೆಂಗಳೂರ್‌ನ 'ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ' ಹೊರತಂದ ಸ್ಮರಣ ಸಂಚಿಕೆಗ ಅರೆಕನ್ನಡಲಿ ಬರ್‍ಯವ್ಕೆ ಒಂದ್ ವೇದಿಕೆ ಆತ್. ಬಹುಶಃ ಅರೆಕನ್ನಡದ ಲಿಖಿತ ಸಾಹಿತ್ಯದ ಇತಿಹಾಸ ಅಲ್ಲಿಂದ ಸುರ್ ಆತ್‌ಂತ ಕಂಡದೆ. ಅದಾದ ಮೇಲೆ ಶ್ರೀ ಸೂದನ ಈರಪ್ಪ 'ಗೌಡದೊನಿ' ನಿಯತಕಾಲಿಕನ ಮಾಡ್‌ದೊ. ಇತ್ತೀಚೆಗೆನ ವರ್ಷಗಳ್ಳಿ ಶ್ರೀಮತಿ ಪಟ್ಟಡ ಶೀಲಾಮಣಿಯವರ ಸಂಪಾದಕತ್ವದ 'ಕೊಡಗು ಸಂಗಾತಿ' ಪತ್ರಿಕೆ ನಮ್ಮ ಭಾಷೆಲಿ ಬರಿಯವ್ಕೆ ಹೆಚ್‌ನ ಪ್ರೋತ್ಸಾಹ ಕೊಡ್‌ತಾ ಉಟ್ಟು. ಹಾಂಗಿದ್ದರೂ ಅರೆಕನ್ನಡಲಿ ಸಾಹಿತ್ಯ ರಚನೆನ ಗಂಭೀರ ರೀತಿಲಿ ತೆಕಂಡವರ ಸಂಖ್ಯೆ ಭಾರೀ ವಿರಳ; ಬರ್ದದರ ಪುಸ್ತಕ ರೂಪಲಿ ಪ್ರಕಟಣೆ ಮಾಡ್ದ್ ಇನ್ನೂ ಕಮ್ಮಿ. ಈ ವರ್ಷ ಮಾತ್ರ ಅರೆಕನ್ನಡ ಸಾಹಿತ್ಯದ ಅದೃಷ್ಟ. ಹೊಸ ತಲೆಮಾರ್‌ನ ಭರವಸೆನ ಕವಿ ಶ್ರೀ ಯಶವಂತ ಕುಡೆಕಲ್ಲು ಅವರ 'ತೊಂಬರ' ಅರೆಕನ್ನಡದ ಪ್ರಥಮ ಕವನ ಸಂಕಲನ ಅಂತ ಹೇಳುವ ಖ್ಯಾತಿನೊಟ್ಟಿಗೆ ಬೊಳ್ಪ್ ಕಂಡರೆ, ಅದಾಗಿ ಸ್ವಲ್ಪ ದಿನಲೇ ಅರೆಕನ್ನಡ ಕಾವ್ಯದ ಹರಿಕಾರ ಶ್ರೀ ಹೊದ್ದೆಟ್ಟಿ ಭವಾನಿಶಂಕರನವರ ಪದ್ಯಗಳ ಸಂಗ್ರಹ 'ಸಂತೃಪ್ತಿ' ಸಹ ಪ್ರಕಟ ಆತ್. ಈಗ ಈ ಭಾಷೆನ ಸುರ್‌ನ ಕಥಾಸಂಕಲನ 'ಚಾಂಪಾ' ಸರದಿ.

'ಚಾಂಪಾ' ಸಂಕಲನಲಿ ಒಟ್ಟ್ ಮೂವತ್ ಕತೆಗ ಒಳೊ. ಈಗಾಗಲೇ ಹೇಳ್ದಾಂಗೆ ಎಲ್ಲ ಕತೆಗಳಲ್ಲಿನೂ ಸ್ಥಾಯಿಯಾಗಿ ಎದ್ದ್ ಕಾಂಬೊದು ತೆಳುಹಾಸ್ಯದ ಸ್ಪರ್ಶ. ಈ ಶೈಲಿನ ಕಾರಣಂದಾಗಿ ಕತೆಗ ಆಸಕ್ತಿಂದ ಓದ್ಸಿಕಂಡ್ ಹೋದವೆ. ಆದರೆ ಹಾಸ್ಯದ ಹೊರ ಕವಚದೊಳಗೆ ಬದ್‌ಕ್‌ನೊಳಗೆನ ಕ್ರೌರ್ಯ, ಅಜ್ಞಾನ, ದಾರಿದ್ರ್ಯ ಮೊದಲಾದ ವಿಷಯಗಳ ಗಾಢ ವಿವರಗಳ ನಾವ್ ನೋಡಕ್. 'ಬೀರ' ಕತೆಲಿ ಅಜ್ಞಾನದ ಪೊರೆನ ಒಡ್ಯಕೆ ಪ್ರಯತ್ನ ಪಡುವ ಕತೆಗಾರರ್ 'ಕಾರ್ತಿಂಗಳ ದೆವ್ವ'ತರಹದ ಕತೆಗಳ್ಳಿ ಗ್ರಾಮೀಣ ಸಮುದಾಯದ ನಂಬಿಕೆ, ಆ ನಂಬಿಕೆನ ಹಿನ್ನೆಲೆಲಿ ರೂಢಿಗತ ಆಗಿ ಬಂದ ಆಚರಣಾ ಸ್ವರೂಪ, ಆ ಆಚರಣಾ ಸ್ವರೂಪದ ಹಿನ್ನೆಲೆಲಿ ಕೌಟುಂಬಿಕ ಬದ್‌ಕ್‌ನ ಸಹನೀಯಗೊಳ್‌ಸುವ ಜೀವನ್ಮುಖಿ ಪ್ರಕ್ರಿಯೆ, ಹೀಂಗೆ ಇರುವ ಅಂತರ್‌ಸಂಬಂಧಗಳ ಅತ್ಯಂತ ತಾಳ್ಮೆನ ಮನ್‌ಸ್‌ಂದ, ವಿಶ್ಲೇಷಕ ದೃಷ್ಟಿಂದ ಮತ್ತು ಮಾನವೀಯ ಸ್ಪರ್ಶಂದ

ನೋಡ್ದು ಇನ್ನಷ್ಟ್ ಅಪ್ಯಾಯಮಾನ. ಇಲ್ಲಿನ ಕತೆಗಳ್ಳಿ ಚಪ್ಪಾಂಗಿ ನಾಣೆ, ಪುಟ್ಟು ಹೈದ, ವೆಂಕು, ನೀಲಮ್ಮಾಂಟಿ, ತಕುಪುಕು ಹೈದ ಪುಟ್ಟಯ್ಯ ಹೀಂಗೆ ಗ್ರಾಮೀಣ ಪರಿಸರದ ವಿಭಿನ್ನ ವ್ಯಕ್ತಿತ್ವಗಳ ಸೃಷ್ಟಿ ಉಟ್ಟು. ಈ ಎಲ್ಲವೂ ನಮ್ಮ ಸುತ್ತ ಇರುವ ಜನಗಳ ಹಾಂಗೇ ಒಳೊ. ಇಂಥ ವ್ಯಕ್ತಿತ್ವಗಳ ಚಿತ್ರಣನ ಕತೆಗಾರರ್ ಕಣ್ಣಿಗೆ ಕಟ್ಟಿದ ಹಾಂಗೆ ಮಾಡ್ಯೊಳೊ. ಒಣಗಂಭೀರ ಜನರ ನಡುಲಿ ಈ ತರಹದ ವ್ಯಕ್ತಿತ್ವಗ ಎಲ್ಲ ಕಾಲಲೂ ಎಲ್ಲ ಸಮುದಾಯಲಿನೂ ಇದ್ದವೆ. ಹಾಂಗೆ ಅವು ವರ್ಣರಂಜಿತ ಮತ್ತು ಆಕರ್ಷಕ ಆಗಿ ಮನ್ಸ್‌ನ ಸೆಳ್ದವೆ. 'ಚಟ್ಟ ಹತ್ತುವ ಮುಟ್ಟ ಹಠ!' ಕತೆನ ಹಠಮಾರಿ ಗಂಡ ಚಂಗಪ್ಪ ಹಾಗೂ ಅವನ ಹೆಣ್ಣ್ ಅಮ್ಮವ್ವ ಇವರ ದಾಂಪತ್ಯ ಅಸಮ ಅಂತ ಕಂಡರೆನೂ ಕಡೆಗೆ ಅದ್ ಮೇಲ್ನೋರಿಕೆಗೆ ಕಾಂಬ ವಿಚಾರ ಮಾತ್ರ, ನಿಜವಾದ ಸಂಬಂಧ ಅಂತಃಕರಣ ಎಲ್ಲ ಬೇರೆನೇ, ಅದ್ ಪರಸ್ಪರ ಅನ್ಯೋನ್ಯತೆಂದ ಕೂಡ್ದ್‌ಂತ ಕತೆನ ಆಂತರ್ಯಲಿ ಮಾನವ ಸಂಬಂಧಗಳ ಸೂಕ್ಷ್ಮಗಳ ಹುಡ್ಕುದರ ನಾವು ಕಂಡವೆ. ಪಟ್ಟಣ-ಹಳ್ಳಿ, ಯೌವನ-ವೃದ್ಧಾಪ್ಯ, ಆಧುನಿಕತೆ-ಪರಂಪರೆ ಈ ತರಹದ ವೈರುಧ್ಯ, ಸಂಘರ್ಷಗ ಈ ಸಂಗ್ರಹದ ಕತೆಗಳ್ಳಿ ಮುಖ್ಯವಾಗಿ ಕಾಂಬ ಅಂಶ. ಇಂಥ ಸಂದರ್ಭಗಳ ಸೃಷ್ಟಿ ಮಾಡಿಕಾಕನ ಕತೆಗಾರರ್ ಆದಷ್ಟ್ ನಿರ್ಭಾವುಕತೆಂದ ನೋಡಿ, ನಿಷ್ಪಕ್ಷಪಾತಂದ ಬರ್‌ದವೆ. 'ಚಾಂಪಾ' ಮತ್ತು 'ಚಾಮವ್ವನಕ್ಕಲೆ ನಾಕ್ ಮಾತ್' ಕತೆಗಳ್ಳಿ ತಲೆಮಾರ್‌ಗಳ ನಡುನ ಅಂತರದ ವಿಷಯನ ಇವ್ ತುಂಬ ಲಾಯ್ಕ್‌ಲಿ ನಿರ್ವಹಿಸಿಯೊಳೊ.

ಈ ಸಂಕಲನದ ಅಷ್ಟೇನೂ ಪ್ರಮುಖ ಅಲ್ಲದ 'ಅಕ್ಕಾ ಕೂಸ್ ಬಸ್ ಲೇ........' ಕತೆನ "ಆ ಕೂಸ್ನಪ್ಪಂಗೆ ಜೈ" ಅಂತ ಮುಕ್ತಾಯಗೊಳ್ಳುವ ರೀತಿ ಕತೆಗಾರ ಶ್ರೀ ಬಾರಿಯಂಡ ಆರ್. ಜೋಯಪ್ಪನವರ ಸೃಜನಶೀಲತೆಗೆ ಸಾಕ್ಷಿ.

ಶ್ರೀ ಬಾರಿಯಂಡ ಜೋಯಪ್ಪನವರ ಹಾಸ್ಯ ಪ್ರಜ್ಞೆ ಶ್ರೇಷ್ಠ ಮಟ್ಟದ್. 'ಕಾರ್ತಿಂಗಳ ದೆವ್ವ' ಕತೆಲಿನ ಅವರ ಅತಿರಂಜನೆನ ಶೈಲಿನ ಒಂದ್ ಮಾದರಿನ ನೋಡಿ,

> ".......ಅವ್ವ ಕೋಳಿನ ಎಡಗೈಲಿ ಹಿಡ್ಕಂಡತ್. .ಬಲಗೈಲಿ ಕುತ್ತಿಗೆ ಹಿಡ್ಕಂಡ್ ಕೊಸ್ಕ್ ಕೊಸ್ಕ್‌ತ ಕೊಸ್ಕಿತ್. ಕೋಳಿಗೆ ಏನೂ ಆತ್‌ಲೆ. .ಇನ್ನ್ ಮೆಲ್ಲ ಮೆಲ್ಲ ಕುತ್ತಿಗೆನೆ ತಿರ್ಪಿನೇಂತ ತಿರ್ಪಿತ್. ಕುತ್ತಿಗೆ ತುಂಡಾಕೆ ಬತ್ತ್. .ಹಂಗೂ ಹಿಂಗೂ ತಿರ್ಪಿ ನೆಲಕೆ ಬಡ್ಕತ ಹಾಕಿತ್. ಹಾಂಗೆ ನೆಲಕ್ಕೆ ಕೋಳಿ ಬೀತೋ ಇಲ್ಲೆಯೋ ಕೋಳಿದ್ ಕುತ್ತಿಗೆ ತಿರ್ಗಿ ಹೋತ್. ಮನೆ ಕಡೆ ತಲೆ, ತೋಟ ಕಡೆ ಕಾಲ್. ಹೀಂಗೆ ಕೋಳಿ ಮನೆನ ನೋಡಿಕಂಡ್ ತೋಟ ಕಡೆ ಓಡಿ ಹೋತು ......... ಅಷ್ಟೊತ್ತಿಗೆ ಒಬ್ಬ ಕೋಳಿ ಹಿಂದೆ ಓಡ್ತ್. ಆ ಕೋಳಿ ತೋಟಕಡೆಂದ ಇತ್ತ ಓಡಿ ಬಾತ್. ಈಗ ಅದರ ತಲೆ ತೋಟ ಕಡೆ. ಕಾಲ್ ಮನೆ ಕಡೆ!....."

ಅದೇ ರೀತಿ 'ಮಾಸ ಒಟ್ಟಿಗೆ ಕೊಲೆ ಬಂದದೆ ಗಡ' ಕತೆಲಿ,

> "........ನಡು ಇರ್‌ಲ್‌ಲಿ ಅಪ್ಪ ಎದ್ ಹೈದನ ಕರ್ತ್. ಹೈದ ಮಸ್‌ಗಿತ್‌ಲೆ. ಅರೆ! ಇವಂಗೇನಾತ್ ಏಯ್ ಏಳ್‌ನೇಂತ ಹೇಳಿರೂ ಹೈದ ಅಲ್ಲಾಡ್ತ್‌ಲೆ. ದೀಪ ಹೋಸಿ

ನೋಡಿರೆ ಜೀವವೇ ಇಲ್ಲದಂಗೆ ಮಲ್ಗಿಟು. ಹಾ! ಶಿವ್ನೇ ಇವಂಗೇನಾತ್ತ ದಡಬಡ ಓಡಾಡ್ತ್....... ಸೀದಾ ಅಡ್ಗೆ ಮನೆಗೆ ಹೋತು. ಮಾಸ ಗೈಪುದು ಬಾವಡೆ ತೆಗ್ತ್. ಮತ್ತೆ ಓಡಿ ಬಂದ್ ನೋಡಕನ ಹೈದ ಉಸ್‌ರಾಡ್ತಾ ಇತ್ತ್!! ಅಂದರೆ ಆ ಹೈದನ ಉಸ್‌ರ್ ಎಲ್ಲಿತ್? ಆ ಆಸೇಂತೇಳುವ ಉಸ್‌ರ್ ಚೆಟ್ಟಿಯೊಳಗೆ ಇತ್‌ಂತ ಹೇಳುವ ಕತೆನ ನೀವೂ ಕೇಳಿರುವರಿ......" ಅಂತ ಬರ್‌ದಿದ್ರ್ ಶ್ರೀ ಬಾರಿಯಂಡ ಜೋಯಪ್ಪನವ್‌ಕೆ ದಕ್ಕಿರುವ ಕತೆಗಾರಿಕೆಗೆ ಒಂದ್ ಸಾಕ್ಷಿ.

ಈ ಪುಸ್ತಕದ ಹೆಸರ್ 'ಚಾಂಪಾ' ತುಂಬ ಅರ್ಥಪೂರ್ಣ. ಚಾಮಿ ಮತ್ತ್ ಅಪ್ಪ ಅಂತ ಎರಡ್ ಪದಗ ಸೇರಿ ಚಾಂಪ ಆಗುಟು. ಚಾಮಿ ಪದದ ಮೂಲ ಸ್ವಾಮಿ. ಅಂದರೆ ಚಾಂಪ ದೇವರ ಸಮಾನದ ಸ್ಥಾನನ ಪಡ್ಕಂಡವ್. ಇಂಥ ಚಾಂಪ ಒಂದು ಸಮಾಜದ ಸ್ಥಿತ್ಯಂತರ ಪರಿಸ್ಥಿತಿನ ಸಂಕೇತ ಕೂಡ. ನಿಜಕ್ಕೂ ಪ್ರತಿಯೊಂದ್ ಕಾಲ ಸಹ ಅಂದ್‌ನ ಜನಕ್ಕೆ ಒಂದ್ ಸಂಕ್ರಮಣ ಕಾಲಘಟ್ಟ ಆಗಿ ಕಂಡದೆ. ಪ್ರತಿಯೊಬ್ಬ ಮನುಷ್ಯನೂ ಅವನ ಬದ್‌ಕ್‌ನ ಸಮಯದ ಬದಲಾವಣೆಗಳ ಎಲ್ಲ ಸುಖಗಳ, ಐಷಾರಾಮುಗಳ ಅನುಭವಿಸಿಕಂಡೇ ನಾಸ್ಟಾಲ್ಜಿಕ್ ಸಹ ಆಗಿದ್ದದೆ. ಕಳ್ಕಂಡದೇ ಹೆಚ್ಚಿಗೆ ಬೆಲೆಬಾಳುವಂತದ್ ಅಂತ ಹೇಳುವ ಬೇನೆ ಎದೆಯೊಳಗೆ ನಿರಂತರ ಇದ್ದದೆ. ಹಾಂಗೇ ಮುಂದೆನ ತಲೆಮಾರ್‌ನ ಜನರೊಟ್ಟಿಗೆ ಹೊಂದಾಣಿಕೆ ಕಷ್ಟ ಆದೆ. ಇಂಥದೊಂದ್ ಗಂಭೀರ ವಿಷಯದ ವಿವರಗ 'ಚಾಂಪಾ' ಕತೆಲಿ ಒಳೊ. ಈ ಕತೆನ ಶೀರ್ಷಿಕೆನ ಇಡೀ ಸಂಕಲನಕ್ಕೆ ಇಸಿದ್ ಪುಸ್ತಕಕ್ಕೆ ಹೆಚ್ಚ್‌ನ ಮೌಲ್ಯ ತಂದ್ ಕೊಟ್ಟುಟು.

'ಚಾಂಪಾ' ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಅದ್ ಒಳಗೊಂಡಿರುವ ಭಾಷಾ ಸಮೂಹದ ಒಂದು ಸಣ್ಣ ಉಡುಗೊರೆ. ಕನ್ನಡದ ಒಟ್ಟು ಭಾಷಾಪ್ರಭೇದಗಳ ಕೆಲವೊಂದ್ ಭಾಷೆಗಳಾದರೂ ಶ್ರೀ ಬಾರಿಯಂಡ ಜೋಯಪ್ಪನವರ ಪ್ರಯತ್ನಂದ ಸ್ಪೂರ್ತಿ ಪಡ್ದರೆ ಅದೊಂದು ದೊಡ್ಡ ಸಾಧನೆಯಾಗಿ ದಾಖಲಾದರ್ಲಿ ಸಂಶಯ ಇಲ್ಲೆ. ಇಂದ್ ನಮ್ಮ ಸರಕಾರಗ ಕನ್ನಡ ಸಹಿತ ಯಾವುದೇ ಭಾಷೆ ಕುರಿತಾಗಿ ನಿಜವಾದ ಕಾಳಜಿ ತೋರ್ಸ್‌ತಾ ಇಲ್ಲೆ. ಭಾಷೆ, ಸಂಸ್ಕೃತಿಗಳ ಬಗ್ಗೆ ಬರೀ ಮೇಲ್ತೋರಿಕೆನ ಪ್ರೀತಿನ ಮಾತ್ರ ನಾವು ನೋಡಕ್. ಹೆಚ್ಚ್‌ನ ಸರ್ತಿ ಈ ಬೊಮ್ಮಣ ದುಡ್ ಮಾಡ್ವ ಒಂದ್ ವಿಧಾನ ಮಾತ್ರ; ಕೆಲವೊಮ್ಮೆ ಓಟ್‌ನ ರಾಜಕಾರಣ, ಅದ್ ಹಾಕ್‌ವ ಒತ್ತಡ ಅರೆಬೆಂದ ತೀರ್ಮಾನಗಳಿಗೆ ಕಾರಣ ಆದೆ.

1974ನೇ ವರ್ಷ ಬ್ರಿಟನ್ ಮತ್ತು ಐರ್‌ಲ್ಯಾಂಡ್ ಮಧ್ಯೆ ಇರುವ 'ಮ್ಯಾನ್' ದ್ವೀಪದ **ನೆಡ್ ಮಾಡ್ರೆಲ್** ಸತ್ ಹೋತ್. ಅವನೊಟ್ಟಿಗೆ ಸೆಲ್ಟಿಕ್ ಭಾಷಾಸಮೂಹದ 'ಮ್ಯಾಂಕ್ಸ್' ಭಾಷೆ ಮಾತಾಡುವ ಕೊನೇ ವ್ಯಕ್ತಿನ ಈ ಭೂಲೋಕ ಕಳ್ಕಂಡತ್ತ್. ಹಾಂಗೆ, ಸಾವಿರಾರ್ ವರ್ಷಗಳಷ್ಟ್ ಕಾಲ ಸಮುದಾಯ ಒಂದರ ಸಂವೇದನೆಗಳಿಗೆ ಜೀವವಾಗಿ ಸಂವಹನ ನಡ್‌ಸ್ತಾ ಪ್ರವಹಿಸ್‌ತಾ ಇದ್ದ ಭಾಷೆ ಕಣ್ಮರೆಯಾಗಿ ಹೋತ್...... ನಿಜ,

ಸಂಸ್ಕೃತಿಯಾಗಲೀ ಭಾಷೆಯಾಗಲೀ ನಿತ್ತ ನೀರಲ್ಲ. ಆದರೆ ಆರ್ಥಿಕ ಮತ್ತು ಆ ಮೂಲಕ ಸಾಮಾಜಿಕ ಪ್ರಾಬಲ್ಯದ ಕಾರಣಂದ ಒಂದ್ ಭಾಷೆ ಯಜಮಾನಿಕೆನ ಒತ್ತಡ ಹಾಕಿ ಇನ್ನೊಂದ್ ಭಾಷೆನ ಉಸ್‌ರ್ ಕಟ್ಟಿಸಿ ಕೊಲ್ಲುದು ಉಟ್ಟಲ್ಲ ಅದ್ ಅಮಾನವೀಯ. ಈಗ ಈ ಭೂಮಂಡಲಲಿ ಕನಿಷ್ಠ 6,809 ಭಾಷೆಗ ಜೀವಂತ ಒಳೊ. ಅದರ್ಲಿ 357 ಭಾಷೆಗಳ ಬರೀ ಐವತ್ತ್ ಅಥವಾ ಅದರ್‌ಂದಳೂ ಕಡಿಮೆ ಜನ ಮಾತಾಡಿವೆ. ನ್ಯೂಯಾರ್ಕ್‌ನ ಕಾರ್ನೆಲ್ ವಿಶ್ವವಿದ್ಯಾಲಯದ ಭಾಷಾವಿಜ್ಞಾನಿಗಳ ಅಧ್ಯಯನದ ಪ್ರಕಾರ ಈಗಾಗಲೇ ನಾವು ಸುಮಾರ್ ಮುನ್ನೂರಕ್ಕೂ ಹೆಚ್ಚ್ ಭಾಷೆಗಳ ಕಳ್ಕಂಡೊಳೊ. ಅದ್ ವಿಷಯ ಅಲ್ಲ. ಈ ಅಧ್ಯಯನದ ಪ್ರಕಾರ ಈಗನ ತಲೆಮಾರ್‌ನ ಜನರ ಜೀವಿತಾವಧಿಲೇ ನೂರಕ್ಕೆ ತೊಂಬತ್ತರಷ್ಟ್ ಭಾಷೆಗ ಸತ್ತ್ ಹೋದವೆ. ಹಾಂಗೆ ಸಾಯುವ ಭಾಷೆ ನಮ್ಮದಾಗಿರುವ ಅಥವಾ ಅಲ್ಲದಿರುವ ಸಾಧ್ಯತೆ ನಮ್ಮ ಸಾಮುದಾಯಿಕ ಇಚ್ಛಾಶಕ್ತಿಗೆ ಸೇರ್‌ದ ವಿಷಯ!

ನಾ ಮೇಲೆ ಹೇಳ್ದಾಂಗೆ ಓಟ್‌ನ ರಾಜಕೀಯದ ಒತ್ತಡ, ಆಮಿಷಗಳ ಕಾರಣ ಕೆಲವ್ ಭಾಷಾ ಅಕಾಡೆಮಿಗಳ ರಚನೆನ ನಮ್ಮ ಸರಕಾರಗ ಮಾಡಿರ್ವೊ. ಅದರ್‌ಂದಾಗಿ ನಮ್ಮೊಳಗೆನ ಸಂಕೀರ್ಣ ಭಾಷಾ ಸಂಬಂಧಕ್ಕಾಗಲೀ, ಸಾಂಸ್ಕೃತಿಕ ವ್ಯವಸ್ಥೆಗಾಗಲೀ ಯಾವುದೇ ಪುರೋಗಾಮಿ ಬದಲಾವಣೆ ಸಾಧ್ಯವಾಗುವ ಬದಲಿಗೆ ಒಟ್ಟು ಸಮಾಜದ ಆರೋಗ್ಯಕ್ಕೆ ಹಾನಿ ಆದ್ದೇ ಹೆಚ್ಚಿಗೆ. ಸರಕಾರಗಳ ಅವೈಜ್ಞಾನಿಕ ತೀರ್ಮಾನಗಳ ವಿರುದ್ಧ ಭಾಷಾಸಮೃದ್ಧಿನ ಕೊಡಗ್‌ನಂಥ ಪ್ರದೇಶಲಿ 'ಚಾಂಪಾ' ದಂಥ ಸೃಜನಶೀಲ ಸಾಹಿತ್ಯದ ಸೃಷ್ಟಿ ರಚನಾತ್ಮಕ ಪ್ರತಿರೋಧ ಆದೆ. ಉದ್ದೇಶಪೂರ್ವಕವಾಗಿರ್ಲಿ ಅನೈಚ್ಛಿಕವಾಗಿರ್ಲಿ ಇಂಥ ಒಂದು ಪ್ರಕ್ರಿಯೆಗೆ ನಾಂದಿ ಹಾಡ್ದ್ ಈ 'ಚಾಂಪಾ' ಕೃತಿನ ಹೆಗ್ಗಳಿಕೆ.

ಶ್ರೀ ಬಾರಿಯಂಡ ಆರ್. ಜೋಯಪ್ಪನವರ ಸಾಹಿತ್ಯದ ದಾರಿ ಇನ್ನಷ್ಟ್ ಉಜ್ವಲ ಆಗಿರ್ಲಿ; ಹಾಂಗೇ ಅವರ ಮೂಲಕ ಅರೆಕನ್ನಡ ಭಾಷೆ ಮಾತಾಡುವ ಸಮುದಾಯದ ಸಾಂಸ್ಕೃತಿಕ ಲೋಕದ ಇನ್ನಷ್ಟ್ ಒಳವಿವರಗ ಸಾಂದ್ರರೂಪಲಿ ಅನಾವರಣ ಆಗುವ ಹಾಂಗಾಗಲೀಂತ ನನ್ನ ಹಾರೈಕೆ.

ಮಡಿಕೇರಿ.
ತಾ. 31-8-2003

**ಕೆ. ಆರ್. ವಿದ್ಯಾಧರ**

# ನನ್ನ ಮಾತ್

ಕಂಡದ್, ಕೇಳ್ದ್, ಅನುಭವ್ಸಿದ್‌ರ ದಾಖಲೆ ಮಾಡೊಕು. ಯಾವ ರೂಪಲಿ ದಾಖಲೆ ಮಾಡ್ದು? ಕಾದಂಬರಿ ರೂಪಲೋ, ಕಥೆಗಳ ರೂಪಲೋ, ಲೇಖನ, ಕವನ, ನಾಟಕ ರೂಪಲೋ? ನಾ ಸಣ್ಣ ಕಥೆಗಳ ರೂಪಲಿ ದಾಖಲೆ ಮಾಡೊಕುತ ಗ್ಯಾನ ಮಾಡ್ದೆ. ಆ ಗ್ಯಾನನ ಬರಹ ರೂಪಲಿ ಸುರು ಮಾಡ್ದೆ. ಸುರು ಮಾಡಕನೇ ಗೊತ್ತು-ಗ್ಯಾನ ಮಾಡ್ದು ಮತ್ತೆ ಮಾತಾಡ್ದು ಭಾರೀ ಸುಲುಭಂತ! ನಡ್ದರೆತನೆ ಎಡ್ಗುದು. ಬರೆಕೆ ಕುದ್ದೇಬುಟ್ಟೆ. ಪೆನ್‌ದ್ ಓಟ ನಿಧಾನ ಆತ್. ನಿತ್ತೇ ಹೋತೇನೋಂತ ಆಬುಡ್ತ್. ಇಲ್ಲೆ, ಹೊರ್ಬ್ಮೇಲೆ ಗುರಿ ಮುಟ್ಟೊಕು. ಹಂಗೆ ಬರ್ದೆ . ಬರ್ದ್ವೆಲ್ಲಾ ಆತ್. ಬರ್ದರ ಏನ್ ಮಾಡ್ದು? ಹೂ ಗಮ ಬರೊಕರೆ ಮೊಗ್ಗು ಅರುಳೊಕು, ಗಾಳಿ ಬೀಸೊಕಲ್ಲ? ಹಂಗೆ ಕೆಲವು ಕಥೆಗಳ 'ಗೌಡ ದೊನಿ'ಗೆ ಕಳ್ಸಿದೆ. ಮತ್ತೆ ಕೆಲವು ಕಥೆಗಳ 'ಕೊಡಗು ಸಂಗಾತಿ'ಗೆ ಕಳ್ಸಿದೆ. ಅವು ತುಂಬಾ ಪ್ರೋತ್ಸಾಹ ಕೊಟ್ರೊ-ಮುದ್ರಿಸಿದೊ. ಅದರ ನೀವ್ ಓದಿರುವರಿ. ಕೆಲವು ಜನ ಕಾಗದ ಬರ್ದ್ 'ಒಳ್ಳದುಟ್ಟು, ನೀವ್ ಬರೆಸಿ'ತ ಹುಮ್ಮಸ್ ತೋರ್ರೊ. ಇನ್ ಕೆಲವು ಕಂಡಲ್ಲಿ ಆ ವಿಚಾರ ಮಾತಾಡಿ ಲಾಯ್ಕ ಉಟ್ಟುತ ಹೇಳ್ರೊ. ಮತ್ತೆ ಕೆಲವು 'ದೂರವಾಣಿ' ಮಾಡಿ ಹೇಳ್ರೊ. ಕೆಲವು ಪತ್ರಿಕೆಗೆ ಕಾಗದ ಬರ್ದ್ ಪ್ರೋತ್ಸಾಹ ಕೊಟ್ರೊಳೊ. ನಾ ಮತ್ತೆ ಬರವಣಿಗೆ ಮುಂದ್‌ವರ್ಸಿದೆ. ಹೊಸಾ ಕಥೆಗಳ ಬರ್ದ್ ಹಂಗೇ ಇಸಿದೆ.

ನನ್ನ ಕೆಲವು ಸಿನೇತರ್ ಎಲ್ಲನೂ ಒಟ್ ಮಾಡಿ ಒಂದ್ ಪುಸ್ತಕ ರೂಪಲಿ ತನ್ನಿತ ಅಭಿಪ್ರಾಯಪಟ್ರೊ. ಆ ಎಲ್ಲಾ ಪ್ರೀತಿಯ ಒತ್ತಾಯಕ್ಕೆ ನಾ ಆದುತ ತಲೆ ಆಡ್ಸಿನೆ. ಅದರ ಫಲ ನಿಮ್ಮ ಕೈ ಮೇಲೆ ಕುದ್ದ "ಚಾಂಪಾ"! ಈ ಚಾಂಪನ ಕಾಪಾಡ್ದು ನಿಮ್ಮ ಹೊಣೆ. ಇಲ್ಲಿ ಬರುವ ಕಥೆಗಳ ಮನುಷ್ಯರ್ ಯಾರ್‍ಯಾರೊ. ನಾನೇ ಆಗಿರುವೆ, ನೀವೂ ಆಗಿರ್‌ವರಿ. ಇಂಥವೇತ ಖಂಡಿತವಾಗಿ ಬೆಟ್ ಮಾಡಿಕೆ ಆದ್ಲೆ. ಹಂಗೆ ತಪ್ಪು ತಿಳ್ಕಂಬಕೂ ಅವಕಾಶ ಇಲ್ಲೆ. ಕಥೆಗ ನಿಮ್ಮ ಮನೆದ್, ನಿಮ್ಮ ಊರ್‌ದ್‌ತ ಅಲ್ಲ-ಮನುಷ್ಯರ್ ಎಲ್ಲೆಲ್ಲಿ ಒಳೊ ಅಲ್ಲೆಲ್ಲಾ.........

'ನೀಲಮ್ಮಾಂಟಿ' ಥರದವು, ನಾಣಿಯಂಥಾ ಚಪ್ಪಾಂಗಿ, ದೆವ್ವಗಳ ಕಥೆಹೇಳವು, ಹಠಮಾರಿಗ, ಪುಟ್ಟಯ್ಯನಂಥಾ ಪುಕ್ಕುಲ, ಚೆನ್ನಿಗೂಡೆಯಂಥಾ ಮುಗುದೆಗ...........ನಮ್ಮ ನಿಮ್ಮ ನಡುಲಿ ಒಳೊ. ಮುಖ್ಯ ಕಥೆ 'ಚಾಂಪಾ' ಒಬ್ಬ ಅನುಭವಿ.

ನಾವ್ ಯಾಗೋಳು ದುಡಿಯವ್. ನಾವಿಗೆ ಮನರಂಜನೆ ಬ್ಯಾಡನಾ? ಟಿ. ವಿ. ಇರ್ದು, ರೇಡಿಯೋ ಇರ್ದು. ಆದರೆ ಬುದ್ಧಿಗೆ ಸಾಣೆ ಹಿಡಿಯೊದು ಪುಸ್ತಕ! ನಿಮ್ಮ ಹಿಟಿಯೊಳಗೆ ಒಂದ್ ಪುಸ್ತಕಾಂತ ಇದ್ದರೆ ನೀವ್ ಓದಿಕಂಡ್ ನಗಾಡ್ವ ಅವಕಾಶ ನೀವಿಗೆ ಬ್ಯಾಡನಾ? ನಿಮ್ಮ ದುಕ್ಕನ ಹಣನಾರ್ ಮರೆಕೆ ಬೊತ್ತಾ? ಹಂಗೆ ಇಲ್ಲಿ ಕೆಲವ್ ಹಾಸ್ಯ ಇರ್ದುತ ನನ್ನ ಅಂದಾಜಿ.

ನನ್ನ ಶ್ರಮ ಪುಸ್ತಕ ರೂಪಲಿ ಬಾಕೆ ಕಾರಣ ಆದವ್ 'ಕೊಡಗು ಗೌಡ ವಿದ್ಯಾಸಂಘ'. ಪ್ರಕಾಶನದಂಥಾ ಜವಾಬ್ದಾರಿ ಕೆಲಸ ವಹಿಸಿಕಂಡ್ ಸಕಾಲಲಿ ಪುಸ್ತಕ ಹೊರಬರ್ವಲ್ಲಿ ಅವ್‌ಪಟ್ಟ

ಶ್ರಮ ಅಪ್ಪಿಷ್ಟಲ್ಲ. ಇದ್ ಸಂಘದ ಸುರೂನ ಸಾಹಿತ್ಯಪರ ಪುಸ್ತಕ. ನನ್ನ ಬೆನ್‌ತಟ್ಟಿ ಪ್ರೋತ್ಸಾಹ ನೀಡ್ದ ವಿದ್ಯಾಸಂಘದ ಅಧ್ಯಕ್ಷರ್, ಉಪಾಧ್ಯಕ್ಷರ್, ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ, ಖಜಾಂಚಿ, ಮತ್ತೆ ಎಲ್ಲಾ ನಿರ್ದೇಶಕರ್, ನಿರ್ದೇಶಕಿಗಳಿಗೆ ನಾ ಋಣಿ ಆಗೊಳೆ.

ಸುರೂಲಿ ನನ್ನ ಕಥೆಗಳ ಓದಿ 'ಇದ್ ಆದುತ' ಹೇಳಿ ಪುಸ್ತಕದ ಆಯ್ಕೆ ಮಾಡ್ಡ ವಕೀಲ ಶ್ರೀ ಕೆ. ಆರ್. ವಿದ್ಯಾಧರ ಇವುಕೆ ನಾ ಆಭಾರಿ ಆಗೊಳೆ. 'ನಂಗೊಮ್ಮೆ ಓದೊಕು, ವಿಷಯ ಎಂತಾತ ಗೊತ್ತಾಕು. ನೀವ್ ಬರ್ದ್ದರ ಕೊಡಿತ' ನನ್ನ ಕೈಂದ ಕೇಳಿಕಂಡ್ ಓದಿ ಪುಸ್ತಕದ ಬಗ್ಗೆ ಒಳ್ಳ ಅಭಿಪ್ರಾಯ ಕೊಟ್ಟ ಶ್ರೀ ಸೂದನ ಈರಪ್ಪನವುಕೆ ನನ್ನ ಕೃತಜ್ಞತೆಗ.

ನನ್ನ ಮೂಲ ಬರವಣಿಗೆನ 'ಮತ್ತೊಂದ್ ಪ್ರತಿ' ಮಾಡ್ದ ಕುಮಾರಿ ಬಿ. ಎಂ. ಪ್ರಮೀಳಂಗೆ ನನ್ನ ಧನ್ಯವಾದಗ.

ಆಕರ್ಷಕ ಮುಖ ಪುಟ, ಮತ್ತೆ ಒಳ ಪುಟಗಳ ರೇಖಾಚಿತ್ರ ಬರ್ದ ಕುಮಾರಿ ಚರಿತಾಂಗೆ ನನ್ನ ಕೃತಜ್ಞತೆಗ.

ಸಲಹೆ ಕೊಟ್ಟ ಅಕ್ಕ ಶ್ರೀಮತಿ ಗೋಪಮ್ಮ, ಕಥೆ ಬರ್ದಂಗೆ ಬರ್ದಂಗೆ ಓದಿಸಿಕಂಡ್ ನಗಾಡ್ದ ನನ್ನ ಹೆಣ್ ಶ್ರೀಮತಿ ಭಾರತಿ, ಮಗುಳು ಕುಮಾರಿ ದಿವ್ಯಾ, ಮಜ ಕುಮಾರ ದೀಪಕ್ ಇವುಕೆಲ್ಲಾ ನಾ ಋಣಿ ಆಗೊಳೆ.

'ಕೊಡಗು ಸಂಗಾತಿಯ' ಗೌರವ ಸಂಪಾದಕ ಶ್ರೀ ಪಟ್ಟಡ ಪ್ರಭಾಕರ, ಸಂಪಾದಕಿ ಶ್ರೀಮತಿ ಶೀಲಾಮಣಿ-ಇವುಕೆ ನನ್ನ ವಂದನೆಗ.

ಸಕಾಲಲಿ ಮುದ್ರಣ ಮಾಡ್ದ ಶ್ರೀದೇವಿ ಪ್ರಸ್‌ನ ಮಾಲೀಕ ಶ್ರೀ ರಾಘವಯ್ಯನವುಕೆ ಮತ್ತೆ ಅವರ ಬಳಗಕ್ಕೆ ನನ್ನ ಧನ್ಯವಾದಗ.

ಪುಸ್ತಕ ಪ್ರಕಟಿಸಿಕೆ ಅನುಮತಿ ಕೊಟ್ಟ ಮದೆ ಮಹೇಶ್ವರ ವಿದ್ಯಾ ಸಂಘಕ್ಕೆ ಮತ್ತೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ನಾ ಆಭಾರಿ ಆಗೊಳೆ.

ಪುಸ್ತಕದ ಒಟ್ಟು ರಸನ ಹಿಂಡಿ ಮುನ್ನುಡಿ ಬರ್ದ್ ಪುಸ್ತಕಕ್ಕೊಂದ್ ಚೌಕಟ್ ಕಟ್ಟಿದ ಶ್ರೀ ಕೆ. ಆರ್. ವಿದ್ಯಾಧರನವುಕೆ ನನ್ನ ಅನಂತ ವಂದನೆಗ.

'ಚಾಂಪನ' ಕೈಮೇಲಿ ಇಸಿಕಂಡ್ ಓದಿಕೆ ಕುದ್ದ ನೀವ್‌ಗೆ ನಾ ಋಣಿ ಆಗೊಳೆ

ಬಿ. ಆರ್. ಜೋಯಪ್ಪ.

ಮದೆ ಗ್ರಾಮ,
ಮದೆ ಅಂಚೆ,
ಮಡಿಕೇರಿ ತಾಲ್ಲೂಕು,
ಕೊಡಗು ಜಿಲ್ಲೆ - 571201
ದೂರವಾಣಿ - 958272-236584

# ಪರಿವಿಡಿ


| | | | |
|---|---|---|---|
| 1 | ಬೀರ | ..... | 1 |
| 2 | "ಶಾರೀ..........ಓ ಶಾರಿ, ಶಾರದಾ..........." | ..... | 3 |
| 3 | 'ಮೇಡಂ, ನಮ್ಮಜ್ಜಿ ತೀರಿಹೋದ್ರು' | ..... | 4 |
| 4 | ಮನೆ ಮೇಲೆ ಮರ ಬೀತ್! | ..... | 8 |
| 5 | ಪುಟ್ಟು ಹೈದನ ಹೊಟ್ಟೆ ಬೇನೆ | ..... | 11 |
| 6 | ಚಟ್ಟ ಹತ್ತುವ ಮುಟ್ಟ ಹಠ! | ..... | 13 |
| 7 | ಅಕ್ಕಾ, ಕೂಸು ಬಸ್‌ಲೇ | ..... | 19 |
| 8 | ಕಾರ್ತಿಂಗಳ ದೆವ್ವ | ..... | 21 |
| 9 | ಅಕ್ಕಯ್ಯಾ, ತಲೆ ಸ್ಪೀಡಾಗಿ ಓಡ್ತೆ | ..... | 25 |
| 10 | ಅಪ್ಪಂಗೆ ತರಾ...... ಅವ್ವಂಗೆ ಕುರಾ...... | ..... | 28 |
| 11 | ಅಪ್ಪನ ರಂಪಾಟ | ..... | 29 |
| 12 | ಅಣ್ಣ ತಮ್ಮ | ..... | 32 |
| 13 | ಅಕ್ಕಾ ನೀವ್ ರೆಸ್ಟ್ ತಕಣಿ | ..... | 36 |
| 14 | ಮಾಸದ ಒಟ್ಟಿಗೆ ಕೊಲೆ ಬಂದದೆ ಗಡ | ..... | 39 |
| 15 | ಎರ್ಡ್ ತಲೆ ಕೋಳಿ | ..... | 41 |
| 16 | ಚೆನ್ನಿ ಗೂಡೆ | ..... | 44 |
| 17 | ಜಾಣ ಪೆದ್ದ ವೆಂಕು | ..... | 46 |
| 18 | ಪುಟ್ಟಯ್ಯನೂ ಹೆಣ್‌ನೂ | ..... | 47 |
| 19 | ನೀಲಮ್ಮಾಂಟಿ | ..... | 53 |
| 20 | ಚಿಣ್ಕ್ ಮಿಣ್ಕ್ ಸೊಸೆ | ..... | 56 |
| 21 | ಚಾಂಪಾ | ..... | 58 |
| 22 | ಕಾಮುಣಿ ಗೂಡೆದ್ ಕಂಬುಳಿ ಹರ್‍ದೋತ್ ಗಡ | ..... | 76 |
| 23 | ಹ್ವಾಂವೇ | ..... | 77 |
| 24 | ಸೋಮಣ್ಣನ ಆಸೆ | ..... | 83 |
| 25 | ಹೇಂಟೆಗೆ ಮೀಸೆ! | ..... | 85 |
| 26 | ಚಾಮೆವ್ವನಕ್ಕಲೆ ನಾಕ್ ಮಾತ್ | ..... | 87 |
| 27 | ಅರ್ಧಕ್ಕೆ ಬುಟ್ಟ ಮೀನ್ ಬೇಟೆ | ..... | 90 |
| 28 | ಚಪ್ಪಾಂಗಿ ನಾಣಿ | ..... | 92 |
| 29 | ಮಣಿನ ಹಂದಿ ಮರಿ | ..... | 95 |
| 30 | ಗುಡ್‌ನೈಟ್! | ..... | 98 |


* ಕೆಲವು ಪದಗಳ ಅರ್ಥ ಈ ಪುಸ್ತಕದ ಕಡೇ ಹಾಳೆಲಿ ಉಟ್ಟು.

# 1. ಬೀರ

**ಒಂದಿನ** ಜಡಿಮಳೆ ಹೊಡಿತಾ ಇತ್. ಆ ಸಾಯಂಕಾಲ ಅಪ್ಪ, ಅವ್ವ, ಮಕ್ಕ ಎಲ್ಲ ಬೆಂಕಿ ಕಾಸಿಕಂಡ್ ಒಲೆ ಮುಂದೆ ಕುದ್ದಿದ್ದೊ. ಅವ್ವ ಬೆಳಿಗ್ಗೆದ್ ರೊಟ್ಟಿನ ಕಾಸ್ತಾ ಇತ್. ಲಾಯ್ಕ ಕಾದ ರೊಟ್ಟಿ ಕರ್ರುಂಕುರ್ರುಂತ ಹೇಳಂಗಾತ್. ಹಂಗೆ ಕಾಸಿಕಂಡ್ ತಿಂತಾ ಇರಕನ ಒಬ್ಬ ಮಜ ಕೇಳ್ತ್ :

"ಅಪ್ಪಾ, ಬೀರಾಂತ ಹೇಳಿವೆಯಲ್ಲಾ ಅದೆಂತಾ? ಇಸ್ಕೂಲ್‌ಲಿ ಮಕ್ಕ ಗುಸು ಗುಸು ಮಾತಾಡ್ತಾ ಇದ್ದೊ. ನಿಂಗೇನಾರ್ ಗೊತ್ತುಟಾ?"

"ಓ! ಅದ್ ದೊಡ್ಡ ಕಥೆ. ಅಂಥದರೆಲ್ಲಾ ಮಕ್ಕ ಕೇಳಿಕಾಗದ್. ಯವ್ವನಲಿರಕನೇ ಬಾಯಿಗೆ ನೀರಿಲ್ಲದೆ ಸತ್ತವೆಲ್ಲಾ ಅವೇ ಬೀರ ಆದು." ಆಗ ಇನ್ನೊಬ್ಬ ಮಜ ಹಣ್ಣಿ ಹತ್ರ ಬಂದ್ ಅವ್ವಂಗೆ ಅಂಟಿ ಕುದ್ದತ್.

"ಹಂಗೆ ಯಾರಾರ್ ಆಗೊಳನಾ?" ಹೆದ್ರಿ ಹೆದ್ರಿ ಕೇಳ್ತ್.

"ಓ! ಭಾಳಾ ಒಳೊ. ಮರ ಹತ್ತಿ ಕೊಂಬೆ ಕಡೆಕನೋ, ಜೇನ್ ಕೊಯ್ಯಕನೋ ಬಿದ್ ಕಾಲ್ ಕೈ ಮುರ್ಕಣ್ಡ್ ಸತ್ತಿದ್ದವೆ. ಕೆಲವು ಸೊಂಟ ಮುರ್ಕಣ್ಡ್ ಸತ್ತವೆ. ಮತ್ತೆ ಕೆಲವು ನೇಣಾಕಂಡವೆ. ಇನ್ ಕೆಲವು ವಿಷ ತಕ್ಕಂಡ್ ಸತ್ತವೆ. ಬೇಟೆಗೋದಲ್ಲಿಯೋ ಹಾವು ಕಚ್ಚಿಸಿಕಂಡೋ ಸತ್ತವೆ. ಅಂಥವೆಲ್ಲಾ ಬೀರಗಳೇ. ರಾತ್ರಿ ಆದಂಗೆ ಅವೆಲ್ಲಾ ಓಡಾಟ ಸುರು ಮಾಡಿವೆ. ಕೆಲವು ರೌಡಿಗ ಆಗಿದ್ದವು ಸತ್ತರಂತೂ ಅಂತವು ಬೀರ ಆಗಿ ಭಯಂಕರ ರೀತಿಲಿ ಕೊರ್ಬಿವೆ. ಅಮಾಸೆ ಇರ್ಲ್‌ಲಿ ಜಾಸ್ತಿ. ಕೊಟ್ಟಿಗೆಗೆ, ಮನೆಗೆ, ಬೇಲಿಗೆ, ಗೇಟ್‌ಗೆಲ್ಲಾ ಕಲ್ ಹೊಡ್ಕಂಡ್ ವ್ಹಾ ವ್ಹಾ ವಾವ್‌ತ ಕಿರಿಚ್ಚಿಕಂಡ್ ಓಡಾಡಿವೆ."

"ಅಲ್ಲ ಅಪ್ಪಾ , ಕಾಲೋ ಕೈಯೋ ಮುರ್ಕಂಡ್ ಸತ್ತವು ಬೀರ ಆಕನ ಕಾಲ್ ಕೈ ಸರಿಯಾಗಿದ್ದದನಾ?"

"ಇದ್ದದೆಗಡಾ! ಕಾಲ್ ಹಿಂದಕೆ ತಿರ್ಗಿದ್ದದೆಗಡ. ನೆಲಂದ ಎರಡ್ ಅಡಿ ಮೇಲೆ ನಡ್ದವೆ ಗಡ!"

"ಬೀರಂಗ ಯಾವ ಭಾಷೆಲಿ ಮಾತಾಡಿವೆಪ್ಪಾ"

"ಅದೆಂತ ಭಾಷೆನೋ ಅದೆಲ್ಲಾ ಗೊತ್ಲೆ. ಕಿರ್ಚಿಕಂಡ್ ಹೋಗವುಕೆ ಯಾವ ಭಾಷೆ ಆದರೇನ್‌ಗಡ. ಅವರ ಯುವ್ವನ ಮುಗಿಯುವುಟ್ಟ, ಹಂಗೆ ಕಿರ್ಚಿಕಂಡ್ ಉಗ್ರರೂಪಾಗಿದ್ದವೆ. ಮತ್ತೆ ಕಾಂಬದ್‌ಲೆ."

ಮಿಲ್ಟ್ರಿಲಿ ಕೆಲವು ಯುವ್ವನಲೇ ಸತ್ತೋದವೆಲಾ, ಕೆಲವು ಯುವ್ವನದ ಉಗ್ರಗಾಮಿಗೆಲ್ಲಾ ಸತ್ತವೆ. ಆಗ ಅಲ್ಲಿ ಬರೀ ಬೀರಂಗಳೇ ಇರುವೊ ಅಲ್ಲಪ್ಪಾ."

"ಇರುವೊ"

"ಹಂಗಾರೆ ಹೆಣ್ ಬೀರಿಗ ಇಲ್ಲೆನಾ?"

"ಇಲ್ಲಿವರೆಗೂ ಹೆಣ್ ಬೀರಿಗಳ ಕಂಡತ್‌ಲೆ. ಕೆಲವು ಹೆಣ್ ಮಕ್ಕಳಿಗೆ 'ಗಂಡು-ಬೀರಿ'ತ ಬಯ್ದುವೆ."

"ಬಾಂಬ್ ಸಿಡ್ದ್, ವಾಹನ ಅಪಘಾತ, ಭೂಕಂಪ, ಚಂಡಮಾರುತ ಇಂಥಾ ಅನಾಹುತಲಿ ಸತ್ತವೆಲ್ಲಾ ಬೀರಗಳೇ ಆಗಿರುವೊ, ಅಲ್ಲಪಾ?"

"ಆಗಿರುವೊ".

"ಅಪ್ಪಾ ನೀ ಬೀರಗಳ ನೊಡ್ಯೋಳಾ?"

"ನಾ ನೋಡ್ತ್‌ಲೆ. ನಂಗೆ ನನ್ನ ಅಪ್ಪ ಹೇಳ್ದ್. ಅಪ್ಪಂಗೆ ಅಪ್ಪನ ಅಪ್ಪ ಹೇಳ್ದ್‌ಗಡ."

"ಅಂದರೆ ಇದೆಲ್ಲಾ ಗಡಾ ಸುದ್ದಿ, ಗ್ಯಾರಂಟಿ ಅಲ್ಲ."

"ಅಯ್ಯೋ ಯಾರ್ ಕಂಡವು ಇಲ್ಲೆ."

ಒಮ್ಮೆ ಅಮಾವಾಸೆ ಅಮಾಸೆಲಿ ರಂಪ ಮಾಡ್ತಾ ಇದ್ದ ಬೀರನ ಸರಿ ಮಾಡ್ಬೊಗಡಾ. ಒಂದಿಬ್ಬರ್ ಹೈದಂಗ ಅಮ್‌ತ್ ಕುದ್ದಿದ್ದೊಗಡ. ಒಬ್ಬ "ಟೈಟ್" ಆದಂವ ಈ ಕಡೆ ನೋಡಿ ಕಿರ್ಚಿತ್‌ಗಡ. ಕಲ್ ಎತ್ತಿ ಇನ್ನೇನ್ ಮನೆಕಡೆ ಹೊಡೆಕೂಂತಿರಕನ ಈ ಹೈದಂಗ ಹಿಂದೆಂದ ಹೋಗಿ ಕುತ್ಗೆಪಟ್ಟಿ ಹಿಡ್ದೊಗಡ. 'ನಿಮ್ಮ ದಮ್ಮಯ್ಯ ಇನ್ ನಾ ನಿಮ್ಮ ಸುದ್ದಿಗೆ ಬಾಕಿಲೆಂತ' ಕಾಲಿಗೆ ಬೀತ್‌ಗಡ. ಹೈದಂಗ ಅವಂಗೆ 'ಚಿರ್ಕ್ಂತ' ರಟು ನಂಗೆ ಬುಟ್ಬೊಗಡ. ಅಲ್ಲಿಂದ ಮುಂದೆ ಆ ದಾರಿಲಿ "ಬೀರ" ನಾಪತ್ತೆ ಆಗೋತುಗಡಾ-



# 2. "ಶಾರೀ, ಓ ಶಾರಿ...... ಶಾರದಾ......"

**ಪೂವಣ್ಣಂಗೆ** ಕಾಟ್ಲಾ ಮೀನ್‌ಂತೇಳಿರೆ ಪ್ರಾಣ! ಒಂದಿನ ಗೋಣಿಕೊಪ್ಪದ ಮಾರ್ಕೆಟ್ಟಿಗೆ ಹೋಗಿತ್. ಅಂದ್ ದೊಡ್ಡ ದೊಡ್ಡ ಕಾಟ್ಲಾ ಮೀನ್ ಬೇರೆ ಮಾರ್ಕೇಟ್ಟಿಗೆ ಬಂದಿತ್. ಇನ್ ಪೂವಣ್ಣನ ಕೇಳೊಕಾ? ಮೂರು ಕಿಲೋ ತೂಕದ ಮೀನ್‌ನೇ ತಕ್ಕಂಡತ್. ಸೀದ ಮನೆಕಡೆ ಬಾತ್. ಬಂದಂಗೆ ಅವನೇ "ಅಚ್‌ಕಟ್ " ಮಾಡಿಕೆ ಕುದ್‌ಕಂಡತ್. ಸಾಮಾನ್ಯಾಗಿ ಗಂಡ್ ಜನ ಅಂಥ ಕೆಲ್ಸಕ್ಕೆಲ್ಲ ಕೂರ್‌ದ್‌ಲೆ. ಆದರೆ ಪೂವಣ್ಣ ಹಂಗಲ್ಲ. ಹೆಣ್ಣಿಗೆ ಕಷ್ಟ ಕೊಡಿಕಾಗದ್‌ಂತೇಳುವ ಪೈಕಿ. ಸರಿ, ಅಚ್‌ಕಟ್ಟೆಲ್ಲ ಆದ ಮೇಲೆ ಹೆಣ್‌ಗೆ ಹೇಳ್ತ್: "ನೋಡು ಇದರ್ಲಿ ಅರ್ಧನ ಹುಳ್ಳಂಗಾಗಿ ಗೈಪು ಮಾಡ್. ಬಾಕಿ ಇರ್‌ದರ್‍ನ ಹೈಕ್ಲಾಸಾಗಿ ಹೊರಿ". ಹಿಂಗೆ ಹೇಳಿ ಪೂವಣ್ಣ "ಪ್ಯಾಕೆಟ್ " ಅಂಗ್ಡಿಗೆ ಹೋತು.

ಎರಡ್ ಪ್ಯಾಕೇಟ್ "ಕಾಟಿ" ಏರಿಸಿದ ಪೂವಣ್ಣ ಮನೆಗೆ ಬಾತ್. ಮನೆಗೆ ಬಾಕನ ಅಲ್ಲಿ ಸುತ್ತಮುತ್ತೆಲ್ಲಾ ಮೀನ್‌ಗೈಪುದ್ ಗಮನ ಬಾಕನ ಇಂವನ ಬಾಯಿ ತುಂಬಾ ನೀರ್ ತುಂಬಿಕಂಡತ್. ಇನ್ ಹೊರ್ದ ಮೀನ್‌ನ ಗಮನಂತೂ ಆಹಾ! ಗಮನ ಮೂಗಿಗೆ ಬಡೀತಿದ್ದಂಗೆ ಹೊಟ್ಟೆ ತುಂಬಿ ಕಂಡ್ ಬಂದಂಗಾತ್. ಹೆಣ್ಣಿಗೆ ಹೇಳ್ತ್ " ನಾ ತೋಟಕೆ ಹೋಗಿ ಎರಡ್ ನಿಂಬುಳಿ ತನ್ನೆ. ನೀ ಆಗ ನಾಕ್ ರೊಟ್ಟಿ ಮೆತ್ತಿ ಬುಡು" ಹೆಣ್ಣ್ ಆತ್ ಮಾಡಿನೆಂತ ಹೇಳ್ತ್. ತೋಟಲಿ ಕರ್ಟ್ ನಿಂಬುಳಿನೇ ಇದ್ದದ್. ಅಂತೂ ಅದರ್ನೇ ಕೊಯ್ಕಂಡ್ ಬಾತ್. ಬಂದಂಗೆ ಆ ನಿಂಬುಳಿನ ನೀಂಬಿ ನೀಂಬಿ ನೀರ್ ಮಾಡ್ತ್. ಆ ನಿಂಬುಳಿ ಗಮನ, ಈ ಮೀನ್ ಗೈಪುದು ಗಮನ, ಅಲ್ಲಿ ಪೊಕ್ಕಳ ರೊಟ್ಟಿ ಅದೆಲ್ಲಾ ಕಂಡಾಕನ ಪೂವಣ್ಣಂಗೆ ಹೆಣ್‌ನ ಮೇಲೆ ಪ್ರೀತಿ ಹೆಚ್ಚಾತ್.

"ಶಾರೀ, ಓ ಶಾರಿ, ಶಾರದಾ...... ನೀನ್ ನಂಗೆ ಹೇಳಿ ಮಾಡ್ಸಿದ ಹೆಣ್‌ನೆ. ನೀನ್ ನನ್ನ ಚಿನ್ನನೇ. ನಿನ್ನ ಕೈಗೆ ಕೊಟ್ಟದ್ದೆಲ್ಲಾ ವಜ್ರ ಆಬುಟ್ಟದೆನೆ. ನೀನ್ ನನ್ನ ಬಂಗಾರಿನೆ" ಹಿಂಗೆ ಹೆಣ್‌ನ ಹೊಗಳ್ತಾ ಇರಕನ ಹೆಣ್‌ನ ಮುಖ ಮೊಟ್ಟೆ, ಹೆಂಟೆದ್ ಮುಖ ಕೆಂಪಾದೆಲ್ಲ ಹಂಗೆ ಕೆಂಪಾತ್. ಒಂದ್‌ಕಡೆಂದ ಗಂಡನ ಹೊಗಳಿಕೆ, ಇನ್ನೊಂದ್ ಕಡೆಂದ ಬೆಂಕಿದ್ ಕಾಚಲ್. " ನೀವ್ ಸುಮ್ಮನಿರಿ ಒಮ್ಮೆ"ಂತ ಹೆಣ್ಣ್ ಹೇಳಿಕಂಡ್ ರೊಟ್ಟಿದ್ ಬೂದಿನ್ನೆಲ್ಲಾ ದಡ್ ಬಡ್‌ತ ಹೊಡ್ಡ್ ರಟ್ಟಿಸಿತ್. ಒಂದರ ಮೇಲೊಂದ್ ರೊಟ್ಟಿನ ತಂದ್ ಮೇಜದ ಮೇಲೆ ಇಸಿತ್. ಗೈಪು ಚೆಟ್ಟಿನೂ, ಹೊರ್ಪ ಮೀನ್‌ನೂ ತಂದ್ ಇಸಿತ್. ನಿಂಬುಳಿನೂ ಕೊಯ್ದ್ ಇಸಿತ್. ಪೂವಣ್ಣನ ಬಟ್ಲಿಗೆ ಇಕ್ಕಿತ್. ಅವುಳೂ ಇಕ್ಕಿಕಂಡತ್. ನಿಂಬುಳಿನ ಲಾಯ್ಕಾಗಿ ಎಲ್ಲಾ ತುಂಡುಗಳಿಗೂ ಹನಿಕಿಸಿಕಂಡೋ. ಪೂವಣ್ಣ ಬರೀ ಬಾಯಿಗೆ ಒಂದ್ ತುಂಡ್‌ನ ಇಸಿತ್. "ಆಹಾ! ಎಷ್ಟ್ ರುಚಿಯಾಗಿ ಮಾಡಿಯೊಳಾ." ಹಿಂಗೆ ಹೇಳಿಕಂಡ್ ಇಬ್ಬರೂ ಊಟ ಮಾಡ್ತಾ ಇದ್ದೊ. ಸಾಮಾನ್ಯಾಗಿ ಗದ್ದಾಳದ ಅಡುಗೆ

ಮಾಡ್ವ ದಿನ ಉಂಬಕೆ ಕೂರ್‌ಕನ ಒಂದೊ ಗಂಡ, ಇಲ್ಲೆ ಹೆಣ್ ಕಾಲ್‌ಕೆರ್ಕಂಡ್ ಜಗಳ ಶುರು ಮಾಡಿವೆ. ಅಂದ್‌ನ ಊಟ ಅರ್ಧಲೇ ಆಗಿ ಜಗಳಲೇ ಊಟ ಕೊನೆ ಆದೆ. ಆದರೆ ಪೂವಣ್ಣನ ಮನೇಲಿ ಹಂಗೆ ಆತ್‌ಲೆ. ರೊಟ್ಟಿ ಪೂರಾ ಮುಗಿತಾ ಇರ್‌ಕನ ಕಡೇಗೊಂದ್ ತುಂಡ್ ಹೊರ್ದ ಮೀನ್‌ನ ಪೂವಣ್ಣ ತಿಂತಾ ಇತ್. ತಿಂಬಕನ ಏನಾತ್'! ಒಂದ್ ಮುಳ್ಳು ಇವನ ದೊಂಡೆಗೆ ಕಂತಿಕಂಡತ್. ಇಂವ ಬೆರಳ್ ಹಾಕಿತ್. ಮುಳ್ಳು ಇನ್ನೂ ಒಳಗೆ ಕಂತಿಕಂಡತ್. ಹೆಣ್ ಅನ್ನನ ಮುದ್ದೆ ಮಾಡಿ ನುಂಗಿಕೆ ಕೊಟ್ಟತ್. ಇಂವ ಅದರ್‌ರೂ ನುಂಗಿತ್. ಆದರೂ ಮುಳ್ಳು ಬಲಾಗಿ ಕಂತಿಕಂಡತ್. ಪೂವಣ್ಣಂಗೆ ಮೂರು ಲೋಕ ಕಾಂಬಂಗಾತ್. ಏನೇನೋ ಆಗ್ತಾ ಉಟ್ಟು. ದಮ್‌ಕಟ್ಟಿದಂಗೆ ಆತ್. ಉಸ್‌ರೇ ನಿತ್‌ಹೋದಂಗೆಲ್ಲಾ ಆಗಿ ಜೋರಾಗಿ ಅಯ್ಯೋತ ಕಿರ್‌ಚಿಬುಟ್ಟದೆ.

"ಅಯ್ಯೋ ಇದೆಂತಾ ಕನ್‌ಸ್? ಕೆಸನ ಗೈಪು ತಿಂದ್ ನಿಲ್‌ಗಿದ ನಂಗೆ ಈ ರೀತಿ ಕನ್ಸ್ ಕಾಂಬೊಕಾ? ಹೆಣ್ಣ್ ಜಗಳಾಡಿಕಂಡ್ ತೌರು ಮನೆಗೆ ಹೋದವ್ಳು ಅಲ್ಲೇ ಕುಕ್ಕುರು ಬಡ್ಡಟ್ಟು. ದರ್ವೇಸಿ"ಂತ ಹೆಣ್ಣಿಗೆ ಬಯ್ಕಂಡ್ ಹಲ್ಲುಜ್ಜಿತ್. ರಾತ್ರೆದ್ ಕೆಸನ ಗೈಪು ಹಾಕಂಡ್ ತಂಗಳ ಊಟ ಮಾಡಿ ಗದ್ದೆ ಕಡೆ ಹೋತು.



# 3. "ಮೇಡಂ, ನಮ್ಮಜ್ಜಿ ತೀರಿಹೋದ್ರು......!

**ಕೂಸುನ** ಮೀಸಿ, ಚಂಡಿ ತೆಗ್ದ್, ಒಲೆ ಮುಂದೆ ಕುದ್ ಉಪ್ಪುಕಲ್‌ನ ತಲೆಸುತ್ತ ತಂದ್ ಒಲೆಗೆ ಹಾಕಿ, ಒಲೆ ಮಸಿನ ಬೊಟ್ಟು ಹಾಕಿ, ನೆತ್ತಿಗೆ ಮೈಗೆ ಪೂರಾ ಪೌಡರ್ ಹಾಕಿ, ತೊಟ್ಲ್ ಕೆಳಗೆ ಧೂಪ ಹೊಗೆ ಹಾಕಿ, ಹಾಲ್‌ಕುಡ್ಸಿ ಮಲ್‌ಗಿಸಿರೆ ಆ ಕೂಸಿಗೆ ನಿದ್ದೆಯೋ ನಿದ್ದೆ. ಸಕ್ಕರೆಯ ಸವಿನಿದ್ದೆ. ಆ ನಿದ್ದೆಲಿ ಆ ಕೂಸು ನಗಾಡುವ ಪೊರ್ಲುನ ನೋಡೊಕು. 'ಕೂಸು ದೇವ್ರೊಟ್ಟಿಗೆ ಮಾತಾಡ್ತಾ ಉಟ್ಟು. ಆ ದೇವ್ರು ಈ ಕೂಸುನ ನಗಾಡ್‌ಸ್ತಾ ಉಟ್ಟು'ತ ಅಜ್ಜಿಕ ಮಾತಾಡುದರ ನೀವೂ ಕೇಳಿರುವರಿ. ಹಿಂಗೆ ನಿದ್ದೆ ಮಾಡ್ವ ಕೂಸು ಬೇಗ ಎದ್ದರೆ ಅವ್ವನ ಗೋಳು. ಮನೆ ಕೆಲ್ಸ ಅರ್ಧಂಬರ್ಧ ಆಗಿದ್ದದೆ. ಅಂತೂ ಜಾಣೆ ಅವ್ವ ಹೆಂಗಾರ್ ಕೂಸುನ ನೋಡಿಕಂಡ್, ಮನೆ ಕೆಲ್ಸ ಮಾಡಿಕಂಡ್ ಅತ್ತೆಗೆ ಜವಾಬು ಕೊಟ್‌ಕಂಡ್ ಸುಧಾರಿಸಿಬುಟ್ಟದೆ. ಕೂಸು ಎದ್ ದಮ್‌ಕಟ್ಟಿ ಮರ್‌ಡಕನ ಅವ್ವ ಓಡಿ ಬಂದ್ ಕೂಸುನ ಸಮಾಧಾನ ಮಾಡುವ ಪೊರ್ಲುನ ಕೇಳಿಕೆ ಇನ್ನೂ ಪೊರ್ಲಾಗಿದ್ದದೆ.

ಕೂಸು ಎಚ್ಚರಾಗಿ ಹೆಂಗೆ ಮರ್ಪದೆ ಹೇಳಿ? ಕಾಲ್‌ಬಡ್ಕಂಡ್ ತಲೆ ಕುದೋಲುನ

ಮುಷ್ಠಿ ಮಾಡಿ ಎಳ್ಕಂಡ್, ಮುಖನ ಕೆಂಪು ಮಾಡಿಕಂಡ್, ಹಾಸಿಗೆನೆಲ್ಲಾ ಚೆಂಡಿ ಮಾಡಿಕಂಡ್ ಕರ್ನಾಟಕ ಶಾಸ್ತ್ರೀಯ ಸಂಗೀತನೋ, ಹಿಂದೂಸ್ತಾನಿ ಸಂಗೀತನೋ ಅಭ್ಯಾಸ ಮಾಡುವಂಗೆ ಮರ್ರ್ಬದೆ. ಹಿಂಗಿರಕನ ಅವ್ವ ಓಡಿ ಬಂದ್: "ಓ ಓ ಓ ಆರಪ್ಪಾ ಮರುಡುದೂ.....ಇಟ್ ಬ್ಯಾಗ ಎದ್‌ಬುಟ್ರೀ ಉಲ್ಲೆಪ ಉಲ್ಲೆ ಉಲ್ಲೆ..... ಇಂದಾ ಬೋಬು ಕುಡಿ..... ಬ್ಯಾಡಾ? ಆಕಪ್ಪಾ ಬ್ಯಾಡಾ......? ಸುಟ್‌ಬಂದ್ ಬುಡ್ತಾ..... ಉಲ್ಲೆಪ್ಪ ಉಲ್ಲೆ..... ಉಕ್ಕು ಉಂಡಿಯಾ? ಬ್ಯಾಡಾ? ಆಕಪ್ಪಾ ಬ್ಯಾಡಾ.....? ನಿಂಗೆ ಆರಪ್ಪಾ ಬಯ್ದುವು? ಓ ! ಇವುಳಾ? ನಿಂಗೆ ನಿಂಗೆ..... ಅಬ್ಬಾ! ಈ ಕೂಸಿಗೆ ನೀ ಬೊಯ್ಯ ಕಾಗೊಳಾ! ನಿಲ್ ನಿಲ್, ಕೂಸುನ ಸುಮ್ಮಸುಮ್ಮಂಗೆ ಮರ್ಡ್ಸಿಯಲಾ"-ಹಿಂಗೆ ಹೇಳಿಕಂಡ್ ದೊಡ್ಡ ಗೂಡೆಗೆ ಬಯ್ಕಂಡ್ ಆ ಗೂಡೆ ಬೆನ್ನಿಗೆ ಸುಮ್ಮನೆ ಗುದ್ದಿದಂಗೆ ಮಾಡಕನ ಈ ಕೂಸು ಮರ್ಡುದರ ನಿಲ್ಸಿದೆ, ನಗಾಡ್ದೆ.

ಎಷ್ಟೋ ಮನೆಲಿ ಕೂಸುನ ನೋಡಿಕಂಬವೇ ಇರುದುಲೆ. ಅಪ್ಪನೂ ಅವ್ವನೂ ಗೆಯ್ಯಕೆ ಗದ್ದೆಗೋ, ತೋಟಕೊ ಹೋದರೆ ಕೂಸ್ನಕ್ಕಲೆ ಯಾರೂ ಇಲ್ಲದೆ ಅದ್ ಏಕಾಂಗಿಯಾಗಿ ಬೆಳಿತಾ ಇದ್ದದೆ. ಎಲ್ಲೊ ಒಂದ್ ಕಡೆ ಒಂದ್ ಕೂಸುನ 'ಮುಚ್ಚಿ ಹಾಕಿ' ಕೆಲ್ಸಕ್ಕೆ ಹೋತಿದೊಗಡ! ಇನ್ನೊಂದ್ ಕಡೆ ಕೂಸುನ ಸೊಂಟಕೆ ಬಳ್ಳಿಹಾಕಿ ಕುರ್ಚಿ ಕಾಲಿಗೋ, ಏಣಿ ಕಾಲಿಗೋ, ಕಟ್ಲ್ ಕಾಲಿಗೋ ಕಟ್ಟಿ ಹೋತಿದೊ ಗಡ. ಬಂದ್ ನೋಡಕನ ಆ ಕೂಸು ಪೂರಾ ಗಲೀಜಿ ಮಾಡಿಕಂಡ್, ಮೈ ಕೈ ಬಾಯಿ ಪೂರಾ......ಅಯ್ಯಯ್ಯೋ.....!! ಅಷ್ಟಗಲ ಸಾರ್ರಿ ಬುಟ್ಟಿದ್ದದೆ. ಆ ನೊಣಗಳೋ.....!! ಅವ್ವ ಬಂದ ಮೇಲೆ ಅದರೆಲ್ಲಾ ಎತ್ತಿ, ತೊಳ್ದ್, ಮೀಸಿ, ಉಣ್ಸಿ ಆಕನ ಅವ್ವನ ಸೊಂಟ ಸೋಬಾನೆ ಹೇಳ್ತಿತ್. ಈಗ ಬುಡಿ ಲೆಪ್ಟ್‌ರೈಟ್ ಬೇಬಿಸಿಟಿಂಗ್. ಅದಿಲ್ಲರೆ ಪೀಚೇಮೂಡ್ ಅಂಗನವಾಡಿ ಸಿಟಿಂಗ್ !

ಒಂದ್ ಕೂಸು ಯಾಗ ನೋಡಿರೂ ಅವ್ವ ಬಾಕೆ ಮುಂದೆ ಹಾಸಿಗೆನ ಚಂಡಿ ಮಾಡ್ತಿತ್‌ಗಡ. ಎಷ್ಟಂತ ಬಟ್ಟೆ ಬದಲಾಯಿಸುದು? ಅದ್ಕೆ ಅವುಳು ಒಂದ್ ಉಪಾಯ ಮಾಡ್ತ್‌ಗಡ. ಹೆಂಗೂ ಅದ್ ಗಂಡ್‌ಕೂಸು. ಉಚ್ಚೆ ಒಯ್ಯೊದುರ ತಡೆದು ಸುಲುಭ! ಹೆಂಗೆಂತೇಳಿ? ಕೆಲ್ಸಕೆ ಹೋಕೆ ಮುಂದೆ ಆ ಕೂಸುನ 'ಪೈಪ್'ಗೆ ನೂಲು ಕಟ್ಟಿತ್‌ಗಡ. ಹಂಗೆ ಕಟ್ಟಿ ನಿಲ್‌ಗಿಸಿ ಕೆಲ್ಸಕ್ಕೆ ಹೋತು. ಸರಿ, ಕೆಲ್ಸ ಮುಗ್ಸಿ ಬಾಕನ ಕೂಸು ಉಚ್ಚೆ ಒಯ್ತ್‌ಲೆ! ಯಾಕೆಂತ್ತೇಳಿರೆ ಕೂಸು ಸತ್ತೇ ಹೋಗಿತ್ !

ಕೆಲವು ಕಡೆ ಕೂಸುನ ಅತ್ತೆ ಅಕ್ಕಲೆ ಬುಟ್ ಹೋದವೆ. ಆ ಕೂಸೋ ಅಬ್ಬಬ್ಬಾ! ಉರಿಕೊಳ್ಳಿ. ಮಕ್ಕಳಿಗೆ ಹಿಂಗೆ ಬಾಯಿಬುಟ್ ಯಾರೂ ಹೇಳುದುಲೆ. ಆದರೆ ಮನಸ್‌ಲೇ ಏನೇನೋ ಬಯ್ಕಂಡವೆ. ಅದರ ಎಳ್ದ್ ಹಾಕುದು, ಇದರ ಎತ್ತಿ ಹಾಕುದು, ಇನ್ನೊಂದರ ಚೂರು ಮಾಡ್ದು, ತುಂಡು ಮಾಡ್ದು, ನೀರು ಚೆಲ್ಲುದು, ಬೆಂಕಿಕೊಳ್ಳಿ ಎಳೆದು, ಬಿಸಿನೀರ್

ಪಾತ್ರೆಗೆ ಕೈ ಹಾಕುದು, ಕುಡಿವ ನೀರಿಗೆ ಕಾಫಿ ಗಸಿನ ಒಯ್ಯೊದು, ಕೊತ್ತಿಮರಿನ ಮೀಸುದು, ಅದರ ಬಟ್ಟೆ ಹಿಂಡಿದಂಗೆ ಹಿಂಡುದು, ಸಿಕ್ಕಿದವುಕೆಲ್ಲಾ ದೊಣ್ಣೆಲಿ ಬಡೇದು, ಕತ್ತಿ ತಕಂಡ್ ಕಡೇದು...... ಹೇಳಿಕೆ ಹೋದರೆ ದಿನಬೆಳಗಾದು. ಅಂಥಾ ಪುಂಡು ಮಾಡಿವೆ. ಮಕ್ಕಳ ನೋಡಿಕಂಬೊವು ಪೂರ್ವ ಜನ್ಮಲಿ ಪಾಪ ಮಾಡ್ದವುತ ಯಾರೋ ಹೇಳ್ತಿದ್ದೊ.

ಅಲ್ಲೊಂದ್ ಕಡೆ ಕೂಸುನ ದೆಸೆಂದ ಅತ್ತೆಗೂ ಸೊಸೆಗೂ ಯಾಗೋಳು ಜಗಳ ಆತಿತ್. ಕೂಸುನ ಚಾಕರಿ ಅತ್ತೆದಾಗಿತ್. ಸೊಸೆ ಬೆಳಿಗ್ಗೆದ್ ಅಡ್ಗೆ ಮಾಡಿ ಕೆಲ್ಸಕ್ಕೆ ಹೋತಿತ್. ಈ ಕೂಸು ಅಜ್ಜಿ ಸೊಂಟಂದ ಇಳಿತನೇ ಇತ್ಲೆ. ನೆಲಕ್ಕೆ ಕಾಲ್ ಸೋಂಕಿಕೆಬತ್. ನೆಲಕ್ಕೆ ಕಾಲ್ ಮುಟ್ಟಿತೊ ಕಾಲ್‌ನ ಕೊಕ್ಕೆ ಮಾಡಿಕಣ್ತಾ ಇತ್. ಆಕಸ್ಮಾತ್ ನೆಲಕ ಇಳ್ತೋ ಕೊತ್ತಿ ಮರ ಹತ್ತುವಂಗೆ ಓಡಿಬಂದ್ ಅಜ್ಜಿನ ಕಾಲ್ ತಬ್ಬಿಕಂಡ್ ಹತ್ತಿ ಸೊಂಟಲಿ ಕೂರ್ತಾ ಇತ್. ಅಜ್ಜಿಗೆ ಸೊಂಟ ಬೇನೆಂತೇಳಿರೆ ಯಾರೊಟ್ಟಿಗೆ ಹೇಳ್ತು? ಕತ್ತಲಾಕನ ಅವ್ವ ಅಲ್ಲೇ ಬಾಕನ ಇಲ್ಲಿಂದಳೇ ಈ ಕೂಸು ಚಾಡಿ ಹೇಳ್ತಾ ಇತ್. ಅಲ್ಲಿಗೆ ಹೊಡ್ತ್, ಇಲ್ಲಿಗೆ ಹೊಡ್ತ್, ತಿಂಬಕೆ ಕೊಟ್ಟಿತ್‌ಲೆ, ತಾನೇ ತಿಂಬತಿತ್. ನನ್ನ ಕಾಲ್ ತೊಳ್ಸಿತ್‌ಲೆ, ನಿದ್ದೆಮಾಡ್ಸಿತ್‌ಲೆ, ಕಥೆ ಹೇಳ್‌ತ್‌ಲೆ..........ಹಿಂಗೆ ಎಷ್ಟೋ ಪುಕಾರ್.
ಇರ್‌ಲ್ಲಿ ಕಣ್ಣಿಗೆ ನಿದ್ದೆ ಹತ್ತುವ ಮುಟ್ಟ ಆ ಮನೆಲಿ ಈ ಕೂಸುಂದಾಗಿ ಅತ್ತೆಗೂ ಸೊಸೆಗೂ ಲಡಾಯಿ ಆಗ್ತಾ ಇತ್.

ಗಲಾಟೆಕೋರ ಮಕ್ಕಳ ಒಮ್ಮೆ ಇಸ್ಕೂಲಿಗೆ ಸೇರ್ಸಿರೆ ಸಾಕಪ್ಪಾಂತ ಮನೆವು ಒಂದ್ ವರ್ಷ ಹೆಚ್ಚಿಗೆ ಮಾಡಿ ಸೇರಿಸಿವೆ. ಪಾಪ, ಆ ಕೂಸಿಗೆ ಕಡೇಲಿ ತೊಂದರೆ ಆದೆತ ಅಪ್ಪ ಅವ್ವಂಗೆ ಗೊತ್ಲೆ. ಇಸ್ಕೂಲಿಗೆ ಹೋದ ಮಕ್ಕ ಅಲ್ಲಿ ಕೊತ್ತಿ ಮರಿಗಳಂಗೆ ಇದ್ದವೆ. ಮನೆಲಿ ಯಜಮಾನಿಕೆ ಮಾಡ್ತಾ ಇದ್ದವರ ಬಾಲ ಅಲ್ಲಿ ಕತ್ತರಿಸಿ ಹೋಗಿದ್ದದೆ. 'ಮೂಗು ಕೊಯ್ದ ನಾಯಿಯಂಗೆ' ಸುಮ್ಮನೆ ಉಟ್ಟು ನೋಡಿತ ಕೆಲವು ಹೇಳಿವೆ. ಕೆಲವು ಮಕ್ಕ ಚಾಡಿ ಹೇಳ್ದರ್ಲಿ ಎತ್ತಿದ ಕೈ. ಹಂಗೆ ಮಕ್ಕಳಮಾತ್ ಕೇಳಿ ಯಾರೋ ಒಕ್ಕಲೆದ್ದು ಹೋದೊ ಗಡ. ಎಲ್ಲ ಮಕ್ಕಳೂ ಒಂದೇ ಥರ ಇರ್ದುಲೆ. ಒಳ್ಳೆ ಮಕ್ಕ ಬೇಕಷ್ಟು ಒಳೊ.

ಕೆಲವು ಮಕ್ಕ ಕೈಲಾಗದಿದ್ದರೂ ಗುಡ್ಸುದೇನ್, ಎತ್ತುದೇನ್? ತೊಳೆದು, ಬಟ್ಟೆ ಒಗೇದು, ಕೊಟ್ ತಕಂಡ್ ಕೆಲ್ಸ ಮಾಡ್ದು...... ಒಂದೆರಡಲ್ಲಾ. ಎಲ್ಲಾ ಕೆಲ್ಸಕೂ ಕೈ ಹಾಕ್ತಾ ಇದ್ದವೆ. ಯಾಗ ಮಕ್ಕ ತಯಾರಿಗೆ ಬಂದೋ ತಕ್ಕಣ ಯಾವ ಕೆಲ್ಸನೂ ಮಾಡಿಕಿಲೆ. 'ಬೇಕರೆ' ಮಾಡಿಕಂತ ಹೇಳಿ ಓಡಿಬುಟ್ಟವೆ.

ಒಂದ್ ಹೈದ ಇಸ್ಕೂಲ್‌ಗೆ ಚಕ್ಕರ್ ಹೊಡೆದರ್ಲಿ ನಿಪುಣ. ಶನಿವಾರನೂ ಬಾದುಲೆ. ಸೋಮರನೂ ಬಾದುಲೆ. ಯಾಕೆ ಬಾತ್ಲೆಂತ ಕೇಳಿರೆ 'ಹೊಟ್ಟೆಬೇನೆ' ತ ಹೇಳ್ತಾ ಇತ್. ಹಿಂಗೆ ಒಂದೊಂದು ಚಕ್ಕರ್‌ಗೂ ಒಂದೊಂದು ಕಾರಣ ಕೊಡ್ತಾ ಇತ್. ಹಿಂಗಿರಕನ

ಒಮ್ಮೆ ಮರ್ತ್‌ಕಂಡ್ ಹೇಳ್ತ್" ಮೇಡಂ ಮೇಡಂ ನಮ್ಮಜ್ಜಿ ತೀರಿಹೋದ್ರು ಮೇಡಂ" ಪಾಪ! ಮೇಡಮ್‌ಗೂ ಬೇಜಾರಾತ್. 'ಹೋಗು'ಂತ ಕ್ಲಾಸಿಗೆ ಕಳ್ಸಿತ್. ಇದಾಗಿ ತಿಂಗ ಕಳ್ದಿರ್ದು. ಇನ್ನೊಮ್ಮೆ ಚಕ್ಕರ್ ಹೊಡ್ತ್. "ಯಾಕೋ ಬಂದಿಲ್ಲ?" "ಮೇಡಂ ಮೇಡಂ ತಾತ ತೀರಿಹೋದ್ರು ಮೇಡಂ" "ಅಯ್ಯೋ ಹೋದ ತಿಂಗ್ಳು ನಿನ್ನ ಅಜ್ಜಿ ತೀರಿ ಹೋದ್ರುಂತ ಹೇಳ್ದಿಯಲ್ಲಾ." "ಹೌದು ಮೇಡಂ. ತಾತ ಅಜ್ಜಿನೇ ನೆನ್ಕೋತ ನೆನ್ಕೋತ ಯಾವಾಗ್ಲೂ ಇರೋರು. ಅದೇ ಬೇಜಾರದಲ್ಲಿ ತಾತ ತೀರಿಕೊಂಡ್ರು ಮೇಡಂ" ಹೈದ ಕಣ್‌ನ ಪೂಜಿಕಂಡ್ ನಿತ್ತ್. ಮೇಡಂ ಕಣ್‌ಲೂ ನೀರ್ ಬಂದಂಗಾತ್. "ಛೆ, ಪಾಪ, ಹೋಗ್ಲಿ ಬುಡು ಏನ್ ಮಾಡಕ್ಕಾಗುತ್ತೆ. ನೀನ್ ಕ್ಲಾಸ್‌ಗೆ ಹೋಗಪ್ಪಾಂತ" ಮೇಡಂ ಆ ಹೈದನ ಕ್ಲಾಸಿಗೆ ಕಳ್ಸಿತ್. ಇದಾಗಿ ತಿಂಗ ಕಳ್ದಿರ್ದು.

ಒಂದಿನ ಒಂದ್ ಅಜ್ಜಿ ಇಸ್ಕೂಲಿಗೆ ಬಾತ್. ಬಂದಂಗೆ "ಮೇಡಮ್ಮು, ನನ್ನ ಮೊಮ್ಮಗ ಇಸ್ಕೂಲಿಗೆ ಸರಿಯಾಗಿ ಬತ್ತಾವುನಾಂತ ಕೇಳಾಕೆ ಬಂದಿವ್ನಿ ಮೇಡಮ್ಮುಂತ" ಹೇಳ್ತ್. "ಯಾರಜ್ಜಿ ನಿಮ್ಮ ಮೊಮ್ಮಗಾ?"-ಮೇಡಂ ಕೇಳ್ತ್. "ಅದೇ ಯಂಕಟೇಸಾ, ಒಂಬತ್ನೆನೋ ಕಾಣೆ ಹತ್ನೇನೋ ಕಾಣೆ" ಅಜ್ಜಿ ರಾಗ ಹೇಳ್ತ್. ಆ ಸ್ಕೂಲ್‌ಲಿ ವೆಂಕಟೇಶಂತೇಳುವ ಹೈದ ಒಬ್ಬನೇ ಇದ್ದದ್. ಅಂವನೇ ಚಕ್ಕರ್ ರಾಜಾ! ಮೇಡಂಗೆ ಆಶ್ಚರ್ಯ ಆತ್. 'ನೀವು ನಿಜವಾಗ್ಲೂ ವೆಂಕಟೇಶನ ಅಜ್ಜೀನೆ ಹೌದಾ' - ಮೇಡಂ ಕೇಳ್ತ್. "ವಯ್! ಇದೇನ್ ಅಂತಿದ್ರಿ ಮೇಡಮ್ಮು. ನಾನೆಯಾ ಅವುನ ಅಜ್ಜಿ" "ಅಲ್ಲ ಅಜ್ಜಿ, ಎರಡು ತಿಂಗಳ ಹಿಂದೆ ನೀವು ತೀರ್ಕೊಂಡ್ರಿ, ಹೋದ ತಿಂಗಳು ತಾತನೂ ತೀರಿಕೊಂಡ್ರುಂತ ನಿಮ್ಮ ಮೊಮ್ಮಗನೇ ಅಂದವುನೆ"- ಮೇಡಂ ಹೇಳ್ತ್. "ಎಲ್ಲಿ ಅವುನ ಕರ್ಸಿ, ಅವ್ನ ಎಕ್ಕುಟ್ಟೋಗ. ನಾನು ನನ್ನ ಗಂಡನೂ ಕಲ್‌ಗುಂಡಂಗೆ ಇದ್ದೀವಿ. ನಾವ್ ಇರುವಾಗ್ಲೇ ನಮ್ಮುನ್ನ ಕೊಂದವುನಲ್ಲಾ, ಮನೆಗೆ ಬರ್ಲಿ. ಅವುನ್ನ ಒಂದ್ ಗತಿ ಕಾಣುಸ್ತಿನಿಂತ" ಅಜ್ಜಿ ಕೀಲ್ ಕುದುರೆ ಹಂಗೆ ಕೊಣ್ತ್. ಮೇಡಂ ಪಿವನ್‌ನ ಕರ್ತ್. ಒಂಬತ್ತನೆ ತರಗತಿಲಿರೋ ವೆಂಕಟೇಶನ್ನ ಬರಹೇಳುತ ಆರ್ಡರ್ ಮಾಡ್ತ್. ಪಿವನ್ ಹೋಗಿ ಒಂಬತ್ತನೆ ಕ್ಲಾಸ್ ಮೇಡಂನಕ್ಕಲೆ ಹೇಳ್ತ್. ಅಂದೂ ವೆಂಕಟೇಶ ಚಕ್ಕರ್! ಇದ್ ಬಯ್ಲ್‌ಸೀಮೆ ಸ್ಕೂಲ್‌ಲಿ ನಡ್ದ ಕಥೆ.



# 4. ಮನೆ ಮೇಲೆ ಮರಬೀತ್ !

ಗಾಳಿ ಮಳೆ ಸುರಾಕೆ ಮುಂದೆ ಮನೆ ಹಿಂದೆ ಇರುವ ಒಣಂಗಿಲ್ ಮರನ ಕಡ್ದ್ ಬೀಳ್ಸೊಕು. ಹೆಂಗೆ ಹೇಳ್ದ್ದು ಹೇಳಿ? ಮನೆ ಮೇಲೆ ಬಿದ್‌ಗಿದ್ದರೆ ಮನೆ ಹೊಡಿ ಆದು. ಮನೇಲಿರೋವೆಲ್ಲಾ ಗಂಯ್ಯ್‌ಕ ಆವೊ. ಹಗಲಾದರೆ ಮನೆವು ಅಲ್ಲಿ ಇಲ್ಲಿ ಹೋಗಿದ್ದವೆ. ರಾತ್ರಿ ಮನಿ ಮರ ಬಿದ್ದರೆ? ಹಿಂಗೆಲ್ಲಾ ತಲೆ ಬಿಸಿ ಮಾಡಿಕಂಡ್ ಅಜ್ಜಪ್ಪ ಕೆಳಗೆ ಮನೆಗೆ ಹೋಗಿ "ಹೇ ಒಮ್ಮೆ ಬನ್ನಿರಾ, ಮನೆ ಹಿಂದೆ ಇರುವ ಮರನ ಒಮ್ಮೆ ಬುಡಾಂದ ಬೀಳ್ಸಿ ಕೊಡೀ"ಂತ ರಾಜನಕ್ಕಲೆ ಹೇಳ್ತ್. ರಾಜ ಮರ ಹತ್ತುದರ್ಲಿ, ಕೊಂಬೆ ಕಡೆದರ್ಲಿ ಭಾಳಾ ರುಸ್ತುಂ. ಅಷ್ಟೇ ಅಲ್ಲ, ದೊಡ್ಡ ಜೇನ್ "ಕಂಡವರ" ತೋಟದಲ್ಲಿದ್ದರೂ ರಾತ್ರಿ ಮರ ಹತ್ತಿ ಕದ್‌ಕೊಯ್ಯುವ ಜಾಣ!

ರಾಜ ಹೇಳ್ತ್: "ಆತ್ ಅಜ್ಜಪಾ ಒಂದ್ ಹತ್‌ದಿನ ಕಳ್ಕಂಡ್ ಬನ್ನೆ. ಆ ಚಿತ್ರಗೂಡೆದ್ ವೀಳ್ಯ ಶಾಸ್ತ್ರ ಆಬುಡ್ಲಿ. ಮತ್ತೆ ಗುಳಿಗಂಗೆ, ಚವುಂಡಿಗೆ ಕೊಡಿಕೆ ಬೇರೆ ಉಟ್ಟು. ಸುಳ್ಯಲಿ ಒತ್ತೆಕೋಲ, ಭಾಮುಂಡ್ಲಲಿ ಹರ್ಸೇವೆಗೆಲ್ಲಾ ಹೋಕೆ ಉಟ್ಟು." ಆಗ ಅಜ್ಜಪ್ಪಾ ಹೇಳ್ತ್: "ಆಗಲಿ, ಅದೆಲ್ಲಾ ತೀರ್ಸಿಕಂಡ್ ಬಾ. ಬಾಕನ ಒಟ್ಟಿಗೆ ಒಬ್ಬನ ಕರ್ಕಂಡ್ ಬಾ." ಸರಿ, ಹಿಂಗೆ ಹೇಳಿ ತಿಂಗಕಳ್ದಿರ್ದು. ವೀಳ್ಯಶಾಸ್ತ್ರನೂ ಮುಗ್ತ್. ಗುಳಿಗ, ಚವುಂಡಿಗೆ ಕೊಟ್ಟೊ ಆತ್. ಒತ್ತೆಕೋಲ, ಹರ್ಸೆವೆಲ್ಲಾ ಮುಗ್ಸಿಕಂಡ್ ರಾಜ ಒಟ್ಟಿಗೆ ಒಬ್ಬನ ಕರ್ಕಂಡ್ ಮರ ಕಡೆಕೆ ಬಾತ್.

ಬಾಕನ ಉದ್ದದ ತಂತಿನೂ ತಾತ್. "ಸೂರೂಲಿ ಕೊಂಬೆ ಕಡ್ಕಣಿ. ಮರ ಯಾವ ಕಡೆಗೆ ಬೀಳ್ದೊತ ಅಂದಾಜಿ ಮಾಡಿ ಕಡೆನಿ. ಗಾಳಿ ಹೆಂಗೆ ಬೀಸಿದೆತ ನೋಡಿಕಂಡ್ ಕೆಲ್ಸಮಾಡಿ. ಎಚ್ಚರಂದ ಮಾಡಿ. ಮರ ಎಲ್ಲಾರ್ ಮನೆಕಡೆ ಮಾಲಿ ಬುಡ್ದು"ತ ಅಜ್ಜಪ ಎಚ್ಚರ ಹೇಳ್ತ್. "ಅಯ್ಯೋ ಅಜ್ಜಪಾ, ನೀವ್ ಇದ್ರ ಗ್ಯಾನ ಬುಟ್‌ಬುಡಿ. ನಾಯೆಂತೆಂತಾ ಮರನೆಲ್ಲಾ ಹೆಂಗೆಂಗೆಲ್ಲಾ ಬೀಳ್ಸೊಳೆ. ಇದ್ಯಾವ ಮರ ಹೇಳಿ? ಕೊಂಬೆನ ಕಡೆಕುತ ಇಲ್ಲೆ. ಹಂಗೇ ಬೀಳ್ಸಿಬುಟ್ಟನೆ. ನೀವ್ ನೋಡಿಕಂಡಿರಿ"ಂತ ರಾಜ ಹೇಳ್ತ್. ಜೊತೆಗಾರ ಇತ್ತಲ್ಲ ಅವನ ಹೆಸ್ರ್ ಚುಂಡಯ್ಯ. ಅವಂಗೆ ಮರಕ್ಕೆ ಗಡಿ ಹಾಕ್‌ರಾಂತ ಹೇಳ್ತ್. ಚುಂಡಯ್ಯನೋ ರಾಜ ಹೇಳ್ವಂಗೆ ಕೇಳ್ವ ಸ್ವಂತ ಮೆದುಳೇ ಇಲ್ಲದ ಪೈಕಿ. ಕಡಿರಾಂತ ಹೇಳಿರೆ ಕಡೆದು. ಬುಡ್‌ರಾಂತ ಹೇಳಿರೆ ಬುಡ್ದು. ನಿಲ್ಸ್‌ರಾಂತ ಹೇಳಿರೆ ನಿಲ್ಸುವಂವ. ಸರಿ, ರಾಜ ಮರಕ್ಕೆ ಗಡಿ ಹಾಕ್‌ತ ಹೇಳ್ತಲ್ಲ ಹಂಗೆ ಕೊಡ್ಲಿ ತಕ್ಕಂಡ್ ಗಡಿ ಹಾಕಿಕೆ ಸುರ್ ಮಾಡೇ ಬುಡ್ತ್. ಒಂದ್ ಹತ್ ಗಡಿ ಹಾಕಿರ್ದು. ಆಗ ರಾಜ ಓಡಿ ಬಂದ್ "ನಿಲ್ಸ್‌ರಾ ನಿಲ್ಸ್. ಮರಕ್ಕೆ ತಂತಿ ಕಟ್ಟೊನೊ"ಂತೇಳಿ ತಂತಿ ಕಟ್ಟಿ ಎಳ್ದ್ ಪಣ್‌ಪುಳಿ ಮರಕ್ಕೆ ಕಟ್ಟಿದೊ. ಇಂವ ಲಟಾ ಪಟಾಂತ ಕಡೆಕನ ರಾಜ ಮರದ ಬುಡನೊಮ್ಮೆ ಕೊಡಿನೊಮ್ಮೆ ನೋಡಿಕಂಡೇ

ನಿತ್‌ಕಂಡತ್. "ಈಗ ನಿಲ್ಸಿರಾ. ಕಡೆಬೇಡ. ಆ ಕಡೆಂದ ಗರಗಸ ಇಸನೊ. ಅಜ್ಜಪಾ ನಿಮ್ಮತ್ರ ಇರುವ 'ಅಡ್ಡಮುರಿ' ಕೊಡಿ"ಂತ ಕೇಳಿಕಂಡ್ ಗರಗಸ ಇಸಿದೊ. ಗರ್‌ಬರ್ ಗರ್‌ಬರ್‌ತ ಕೊಯ್ಯಕೆ ಸುರು ಮಾಡಿಕಂಡೊ. ಚುಂಡಯ್ಯನ ಹೊಟ್ಟೆ ಸೇರಿದ್ದ ಸೇಂದಿ ಬೆವುರಾಗಿ ಹರಕೆ ಸುರಾತ್. ಥತ್ ಹಾಳ್ ಬೆವುರುಂತ ಬಯ್ಕಂಡ ಚುಂಡಯ್ಯ ಶರ್ಟ್ ಬಿಚ್ಚಿ ಗುತ್ತಿ ಮೇಲೆ ಇಸಿ ಪುನಾ ಕೊಯ್ಯಕೆ ಸುರು ಮಾಡ್ತ್. ಅಷ್ಟೊತ್ತಿಗೆ ಬೋಜಪ್ಪ ಎತ್ತಳೊ ಹೋಗಿದ್ದವು ಇತ್ತ ಬಂದೊ. ಇವು ಯಂತ ಮಾಡ್ತಾ ಒಳೊಂತ ಹತ್ರ ಬಂದೊ. ಮರ ಕೊಯ್ಯದರ ನೋಡ್ದ ಬೋಜಪ್ಪ "ಅಯ್ಯೋ ರಾಜ, ಒಮ್ಮೆ ನಿಲ್ಸಿರಾ. ಮರ ಮನೆ ಕಡೆ ವಾಲಿಕಂಡುಟ್ಟು. ಬಿದ್ದರೆ ಮನೆ ಸರ್ವನಾಶ ಆದೆ. ನಂಗಂತೂ ಇದೆಲ್ಲಾ ನೋಡಿಕೆ ಬೊತ್ತದೆ. ಮುಂದೇ ನಂಗೆ ಬಿ. ಪಿ. ಬೇರೆ. ಇನ್ ಇಲ್ಲಿದ್ದರೆ ಜಾಸ್ತಿ ಆದು"ತ ಬೋಜಪ್ಪ ಹೇಳಿಕಂಡ್ ಹೋಗೆಬುಟ್ಟೊ. ಅಜ್ಜಪ್ಪಂಗೆ ತಕುಪುಕು ಸುರಾತ್. "ಯಂತರಾ ರಾಜ? ನಿಂಗೆ ಆಗಳೇ ಹೇಳ್ದೆ. ಆ ಬಗ್ಗಿದ ಕೊಂಬೆಗಳ ಕಡ್ಕಣೇಂತ. ನೀ ನನ್ನ ಮಾತ್ ಕೇಳ್ತ್‌ಲೆ." ಹಿಂಗೆ ಹೇಳಕನ ರಾಜ ಚುಂಡಯ್ಯಂಗೆ ಮರ ಹತ್ತಿ ಕೊಂಬೆ ಕಡಿರಾಂತ ಹೇಳ್ತ್. ಕೊಡ್ಲಿನ ಅತ್ತ ಬಿಸಾಕಿದ ಚುಂಡಯ್ಯ ಮರ ಹತ್ತಿಕೆ ಹೋತು. ಹತ್ತೇಬುಡ್ತ್. "ಥೂ ನಿನ್ನ. ನಿಂಗೆ ಸೊಯ ಉಟ್ಟಾ ಇಲ್ಲೆಯಾ? ಮರ ಈಗಳೋ ಆಗಳೋ ಬೀಳಿಕೆ ಆವುಟು. ಈಗ ಕೊಂಬೆ ಕಡೆಕೆ ಮರ ಹತ್ತಿಯ? ನಿನ್ನ ಸೊಂಟ ಮುರೆವೆ"ಂತ ಅಜ್ಜಪ್ಪ ದೊಣ್ಣೆ ತಕ್ಕಂಡ್ ಅತ್ತ ಹೋತು. ಚುಂಡಯ್ಯಂಗೆ ಎಲ್ಲಾ ಮರಲೇ ಆದಂಗೆ ಆಗೋತು. ರಾಜ ಕೊಂಬೆ ಕಡೀಂತ ಹೇಳ್ತಾ ಉಟ್ಟು. ಈ ಅಜ್ಜ ಬೇರೆ ದೊಣ್ಣೆ ಎತ್ತಿ ನಿತ್ತುಟು. "ರಾಜಣ್ಣಾ ನಾಯೆಂತ ಮಾಡಲೀ"ಂತ ಕೇಳ್ತ್. "ನಿನ್ನ ಮನೆ ಹಾಳಾಗ. ಇಳಿನೆ ಒಮ್ಮೆತ" ರಾಜ ಬೊಯ್ಯಕನ ಅಂವ ಜರ್ರಂತ ಜಾರಿ ಕೆಳಗೆ ಬಾತ್.

ಒಂದ್ ಗಾಳಿ ಬೀಸಿತ್. ಮರ ಜೂಂಗಿತ್. "ಮನೇಲಿದ್ದವೆಲ್ಲಾ ಹೊರಗೆ ಬನ್ನಿನೇ ಏ ಮಕ್ಕಳೆ. ಅವ್ವ ಎಲ್ಲಿನೇ? ಆ ಕೂಸುನ ಕರ್ಕಂಡ್ ಹೊರಗೆ ಬನ್ನಿನೇ"ಂತ ಅಜ್ಜಪ್ಪ ಬೊಬ್ಬೆ ಹಾಕಿತ್. ರಾಜ ಈಗ ಏನ್ ಮಾಡೊಕು? ಗರಗಸಂದ ಕೊಯ್ದ ಜಾಗಕ್ಕೆ ಆಪು ಹೊಡ್ತ್. ಇನ್ ಮನೆಕಡೆ ಬೀಳಿಕಿಲ್ಲೆ. ಹೆದ್ರ್‌ಬಡೀಂತ ಧೈರ‍್ಯ ಹೇಳ್ತ್. ಅಷ್ಟೇ ಅಲ್ಲ "ಅಜ್ಜಪ್ಪಾ ಇದ್ ಹಳೇ ಮನೆ. ಒಂದ್ ಸಮಯ ಮರಮನಿ ಮನೆ ಮೇಲೆ ಬಿದ್ ಮುರ್ದ್ರರೆ ನೀವ್ ಕೂಡ್ಲೆ ನಷ್ಟ ಪರಿಹಾರಕ್ಕೆ ಒಂದ್ ಅರ್ಜಿ ರೆಡಿಮಾಡಿ. ಹೆಂಗೂ ಪರಿಹಾರ ಸಿಕ್ಕುದು. ಇಲೆಕ್ಷನ್ ಹತ್ರ ಬೇರೆ ಉಟ್ಟು" ಹಿಂಗೆ ಲಾಯ್‌ಲಗ್‌ಡಿ ಹೇಳಕನ ಅಜ್ಜಪಂಗೆ ಎಲ್ಲಿತ್ತೊ ಸಿಟ್. "ನಿನ್ನ ಮಂಡೆನ ಹೋಳು ಮಾಡೊಕಾ? ನಾವ್ ಬಾಳಿಬದ್ಕಿದ ಮನೆನ ಮುರೆಕೆ ಹೊರ‍್ಟೊಳಾ"ಂತ ರೇಗಾಡಕನ ರಾಜಂಗೆ ಗರ್ಭ ನಡ್ಗಿಹೋತು.

ಹಿಂಗಿರಕನ ಮರ ಮತ್ತೊಮ್ಮೆ ಜೂಂಗಿತ್. ಅಜ್ಜಪ ಕಂಡ ಕಂಡ ದೇವ್ರಿಗೆಲ್ಲಾ ಹೇಳಿಕಂಡತ್. ಈಗ ಹೊಸಾ ದೇವ್ರುಗಳೂ ಒಳಲ್ಲಾ, ಆ ದೇವ್ರುಗಳಿಗೂ ಹೇಳಿಕಂಡ್‌ತ್. ಹೆಣ್‌ನ ಕರ್ದ್ ಹೇಳ್ತ್ : "ದಡ್ಡೆನ ಬುಡ್‌ನೆ. ಮರದ ಕೊಂಬೆ ಹಂದಿಗೂಡಿಗೆ ಬಿದ್ದರೆ

ಹಂದಿನೂ ಇಲ್ಲೆ, ಮರಿಗಳೂ ಸಾಯವೊ. ಓಡ್ ಓಡ್"ತ ಹೇಳಕನ "ಇವು ಆಕಿಲಪ್ಪಾ ಜೀವ ಇರುವಂಗೆ ಕೊಂದುಬುಡುವೊ" ಂತ ಹೇಳಿಕಂಡ್ ಓಡಿ ಹೋಗಿ ಹಂದಿಗೂಡ್‌ದ್ ಬಾಗ್ಲ್ ಬಿಚ್ಚಿತ್. ದಡ್ಡೆ ಮರಿಗಳ ಕರ್ಕಂಡ್ ಗರ್‌ಗುರ್‌ತ ಹೇಳಿ ಕಂಡ್ ಅಲ್ಲಿ ಇಲ್ಲಿ ಸುತ್ತಾಡಿಕಂಡ್ ಮರ ಕಡೆತಿದ್ದಲ್ಲಿಗೇ ಬಂದ್ ಬುಟ್ಟೊ. ಅಷ್ಟೊತ್ತಿಗೆ ಎಲ್ಲಿತ್ತೋ ಟಾಮಿ ನಾಯಿ? ಅದ್ ಬೊಗಳಿಕಂಡ್ ಮರದ ಕಡೆ ಓಡಿ ಬಾತ್. ಇದೆಲ್ಲಾ ಆಕನ ಅಜ್ಜಿ ಎಲ್ಲಿ ನನ್ನ ಹಂದಿ ಮರಿಗಳ ನಾಯಿ ಹಿಡ್ದ್ ಬುಡ್ತೋತ ನಾಯಿನ ಓಡ್ಸಿಕೆ ಮರದ ಹತ್ರ ಓಡ್ತ್. "ಏಯ್ ನಿನ್ನ ಸುಡಿಕೆ, ಬಾನೇ ಇತ್ತ್. ಬೀಳುವ ಮರದ ಹತ್ರ ಹೋಬೇಡನೇ"ಂತ ಅಜ್ಜಪ ಬೊಬ್ಬೆಹೊಡ್ಕಂಡ್ ದೊಣ್ಣೆ ಕುತ್ತಿಕಂಡ್ ಹೆಣ್‌ನ ಎಳ್ಕಂಡ್ ಬಾಕೆ ಮರದ ಬುಡಕ್ಕೇ ಹೋತು. ಹಿಂಗೆ ಹೋದುಕೂ, ಮರ ಲಟ್ ಲಟ್ ಸದ್ ಮಾಡಿಕಂಡ್ ಜೂಂಗಿಕಂಡ್ ಜೂಂಗಿಕಂಡ್ ಪಣ್‌ಪುಳಿ ಮರನ ಎಳ್ಕಂಡ್ ಲಡಬಡೊಂತ ಬಿದ್ದೇ ಬೀತ್. ಮನೆ ನಡೂಗೆ ಬಿದ್ದ್ ಮನೆಪೂರ ಹೊಡಿ ಹೊಡಿ!! ಹಲ್ ಕಚ್ಚಿಕಂಡ್ ರಾಜನ ಕಡೆ ಅಜ್ಜಪ್ಪ ತಿರ್‍ಗಿತ್. ಆಗ ರಾಜ ತಿರ್‍ಗಾಸ್‌ಲಿ ಓಡ್ತಾ ಇದ್ದಂವ ಒಮ್ಮೆ ತಿರ್‍ಗಿ ನೋಡ್ತಾ ಇತ್. ಚುಂಡಯ್ಯ ಶರಟ್ ಬುಟ್ ಎತ್ತ ಓಡಿ ಹೊತೋ ಗೊತ್ಲೆ. ಅಜ್ಜಪ ಎದೆ ಎದೆ ಹೊಡ್ಕಂಡ್ ಮರ ಕಡ್ದ ಕೊಡ್ಲಿನ ರಾಜ ಓಡ್ದ ದಾರಿಕಡೆ ಬೀಸಿ ಹೊಡ್ತ್. "ಅಯ್ಯೋ ನನ್ನ ಮನೆ ಹಾಳಾತಲ್ಲಾ. ನಿನ್ನ ಎದೆ ಸೀಳದೆ ಬುಡಿಕಿಲ್ಲೆ"ಂತ ನೆಲಕ್ಕೊಮ್ಮೆ ಒದ್ದತ್.

"ನೀವು ಯಂತಕೆ ಈಗೀಗ ಹಿಂಗೆ ನಿದ್ದೆಲಿ ಮಾತಾಡ್ರೆ? ಸುಮ್ಮನೆ ಮಲ್ಗಿ"ಂತ ಅಜ್ಜಿ ಅಜ್ಜನ ಮೈ ಮೇಲೆ ಕಂಬ್ಳಿ ಹೋಸಿತ್.

ಅಜ್ಜಪ್ಪ ಕಂಡ ಕನ್ಸ್‌ನ ಅಜ್ಜಿ ಒಟ್ಟಿಗೆ ಹೇಳಿಕಂಡ್ ಕೆಟ್ಟ ಕೆಟ್ಟ ಕನ್ಸ್‌ಗ ಯಾಕೆ ಬಂದದೆಯೋಂತ ಬೆವುರು ಉಜ್ಜಿಕಂಡ್ ಕಂಬುಳಿನ ಕರೆಗೆ ಹಾಕಿತ್! ಅಷ್ಟೊತ್ತಿಗೆ ಮರಲಿ ಕುದ್ದ ಕೋಳಿಯೂ ಕೂಂಗಿತ್. ಅಜ್ಜಪ್ಪನ ಕಡೇ ಪಿಳ್ಳಿ ತೊಟ್ಲುಗೆ ಕಾಲ್ ಡ್ಕಂಡ್ ಬಟ್ಟೆ ಚಂಡಿ ಮಾಡಿಕಂಡ್ ಮರ್‌ಡ್‌ತಾ ಇತ್.



# 5. ಪುಟ್ಟು ಹೈದನ ಹೊಟ್ಟೆ ಬೇನೆ.

ನಮ್ಮ ಪುಟ್ಟು ಹೈದ ಸೊಲ್ಪ ತುಂಟ. ಮನೆಗೆ ನೆಂಟ್ರು ಬಂದರಂತೂ ಕಟ್ಟಿ ಹಾಕಿದ ನಾಯಿ ಮರಿನ ಬಿಚ್ಚಿಕೆ ಹೋಕನ ಆಡ್ತೆಲ್ಲ ಹಂಗೇ ಇವನ ಆಟ. ಆ ನೆಂಟ 'ಲಂಚ' ಕೊಟ್ಟ ಮೇಲೆಯೇ ಇಂವ ಮೆಲ್ಲಂಗೆ ಅಲ್ಲಿಂದ ಜಾರ್ತು. ಜಿಪುಣ ನೆಂಟ ಬಂದರೆ ಕೆಕ್ಕರ್ಸಿ ನೋಡಿ 'ಕೋಳಿ ತಲೆಗೆ ನೀರಾಕಂವ'ಂತೇಳಿ ಸುಮ್ಮನಾದು. ಈ ಹೈದನ ಕಥೆ ನೀವ್ಗೆ ಹೇಳಿಕೆ ಹೊರ್ಟರೆ ನಿಮ್ಮ ಹತ್ರ ಇರವೂ ಓಡುವೊ. ಮೊನ್ನೆದೊಂದು ತಮಾಷೆ ಹೇಳ್ನೆ, ಕೇಳಿ.

ರಾತ್ರಿ ಎಲ್ಲವೂ ಮಲ್ಗಿ ಗೊರ್ಕೆ ಹೊಡಿತಾ ಒಳೊ. ಈ ಪುಟ್ಟು ಹೈದ ತಲೆ ತಿರ್ಪಿ ಹಾಕಿದ ಕೋಳಿ ಥರ ಹಾಸಿಗೆಲಿ ಕೊಸ್ಕ್ ಕೊಸ್ಕ್‌ತ ಉರುಂಡಾಡ್ತ ಉಟ್ಟು. ಮನೆಪ್ಕೆಲ್ಲ ಗಾಬ್ರಿ! ಥೂ ಈ ಹೈದಂಗೇನಾತ್. ಬಟ್ಟೆಯನಂಗೆ ಊಟ ಮಾಡಿ ಪೊರ್ಲುಲಿ ಮಲ್ಗಿತ್ತಲ್ಲಾ. ಅವ್ವ ದೀಪ ಹಸ್ಸಿತ್. ಅಪ್ಪ ಹೈದನ ತಬ್ಬಿ ಹಿಡ್ಕಂಡತ್. ಪುಟ್ಟು ಹೈದನ ತಮ್ಮ ಇವನ ಈ ಬೊಬ್ಬೆಗೆ ಮೂಲೆ ಸೇರಿಕಂಡ್ ಮರ್ಡ್ತಾ ಉಟ್ಟು. ಅತ್ತ ಅವನ ಸಮಾಧಾನ ಮಾಡ್ವಂಗಲ್ಲ. ಇತ್ತ ಇವನ ಸಮಾಧಾನ ಮಾಡ್ವಂಗಲ್ಲ. ಪುಟ್ಟುಗೆ ನೀರ್ ಕುಡೆಕೆ ಕೊಟ್ಟೊ, ಕರಿ ಕಾಫಿನೂ ಕೊಟ್ಟೊ. ಸಮಾಧಾನ ಆತ್‌ಲೆ. ಹೊಟ್ಟೆ ಬ್ಯಾನೆತೇಳ್ರೆ ಅದ್ ಅವಂಗೆ ಮಾತ್ರ ಗೊತ್ತು. "ಏ ಶಿವನೇ ಈ ಹೈದಂಗೇನಾತ್ ಗ್ರಾಚಾರ"ಂತೇಳ್ಕಂಡ್ ಅಪ್ಪ ಕೋಳಿಗೂಡ್‌ಗೆ ಓಡ್ತ್. ಕೋಳಿಗ ಒಂದರ ರೆಕ್ಕೆ ಒಳಗೆ ಒಂದ್ ತಲೆ ನುಗ್ಗಿಸಿಕಂಡ್ ಸುಖ ನಿದ್ದೆಲಿ ಕುದ್ದಿದ್ದೊ. ಅಪ್ಪ ಒಂದ್ ಹುಂಜಲಾಕಿನ ಹಿಡ್ಕಂಡ್ ಬಾತ್. ಅದರ ಕೆಂಪು ಜುಟ್ಟುನ ಕತ್ತಿ ತಕ್ಕಂಡ್ ಕೊಯ್ತ್. ಬೇನೆ ತಡೆಕ್ಕಾಗದೆ ಕೋಳಿ ಕೊರ್ರೇ ಕೊರ್ರೇಂತೇಳಿ ರೆಕ್ಕೆಬಡಿಯಕನ ದೀಪ ಕೆಟ್ ಹೋತ್. 'ಇದ್ಕೆ ಮಾರಿ ಬಡಿಯಕೆ, ನಿನ್ನನ ಕೊಲ್ಲುದುಲೆ, ಜೀವ ಹೋದಂಗೆ ಆಡ್ತೆ, ಇದರ ಬಾಯ್ಗೆ'ಂತ ಬೊಯ್ಕಂಡ್ ದೀಪ ಹೊಸಿದೊ. ಅದರ ಜುಟ್ಟುಂದ ರಕ್ತ ಸುರಿತಿತ್. ಆ ರಕ್ತನ ಪುಟ್ಟು ಹೈದನ ಹೊಕ್ಕುಳು ಸುತ್ತ ಲೇಪ ಹಾಕಿದೊ. ಅದೇ ಕೋಳಿನ ಚವುಂಡಿಗೆ ಹರ್ಕೆ ಹೊತ್ತೊ. "ಹೈದಂಗೆ ಹಿಡ್ದ ಈ ಬೇನೆ ಈ ಕೂಡ್ಲೆ ಹೋಕು. ಊರವು ಚವುಂಡಿ ಹಬ್ಬ ಮಾಡ್ಕನ ಈ ಕೋಳಿನ ಕುಯ್ದುನೆ. ಎಲ್ಲಾ ಕಷ್ಟಗ ಈ ಕೋಳಿಲೇ ಹಿಡ್ದ್ ನಿಲ್ಲೋಕು"ಂತೇಳಿ ಹೈದನ ತಲೆಸುತ್ತ ಮೂರು ಸರ್ತಿ ತಂದ್ ಕತ್ತಲೆಲಿ ಕೋಳಿನ ಬುಟ್ಟೊ. ಅದ್ ಕತ್ತಲೆಲಿ ತಲೆ ಕೊಸ್ಕಿಕಂಡ್ ಕುದ್ದತ್. ಆದರೆ ಈ ಹೈದನ ಬೊಬ್ಬೆ ಕಮ್ಮಿ ಆತಾ? ಜಾಸ್ತಿ ಜಾಸ್ತಿ ಆಕಂಡೆ ಉಟ್ಟು. ಇನ್ ಮುಂದೆದ್ ಕಥೆ, ಸೊಲ್ಪ ಸುಮ್ಮನಿರಿ.

ಚಾಂಪ ಇನ್ನೊಂದು ಕೋಂಬರೆಲಿ ಮಲ್ಗೊಳೊ. ಹರ್ಕೆ ಹೇಳ್ಕಂಡ್ರೂ ಈ ಹೈದಂಗೆ ಹೊಟ್ಟೆಬೇನೆ ಕಮ್ಮಿ ಆತ್‌ಲೇ. ಇನ್ ಚಾಂಪಂಗಾರ್ ಹೇಳ್ನೊತೇಳಿ ಅವ್ವ ಚಾಂಪನಕ್ಕಲೆ ಹೋಗಿ ಕರೇಕೆ ಸುರು ಮಾಡ್ತ್. "ಮಾವ, ಮಾವ, ಓ ಮಾವ, ಮಾವೊ ........." ಮಾವಂದ್ ಸದ್ದ್ ಇಲ್ಲೆ! ಮಾವಂಗೆ ಕೆಮಿ ಕೇಳ್ಸದೆ ಐದ್ ವರ್ಷ ಆತ್. ಕೇಪು ಕೋಪಿಲಿ

ಗುಂಡು ಹಾರ್ಸಿರೂ ಕೇಳಿಕಿಲೆ. ಅಂತಾ ಕೆಮಿ ಅದ್. ಅವ್ವ ಚಾಂಪ ಹೊದ್‌ಕಂಡಿದ್ದ ಕಂಬುಳಿನ ಎಳ್ಸ್ತ್. ಆಗ ಚಾಂಪಂಗೆ ಎಚ್ಚರಾತ್. ಚಾಂಪ ಎದ್ "ಯಾಕೆನೆ ಬೋಜಿ, ಏನ್‌ನೆ ಬೋಜಿತ" ಅವ್ವನ ಕೇಳ್ಸ್ತ್. ಆಗ ಅವ್ವ "ಪುಟ್ಟು ಹೈದಂಗೆ ಹೊಟ್ಟೆ ಬ್ಯಾನೆ"ಂತೇಳ್ತ್. "ಹ್ವಾ ! ಎಂತದ್ದ್.............. ಚಿಟ್ಟೆ ಗೂಡೆ ಹೆರಿಕೆ ಆವುಟಾ. ಓ ದೇವ್ರೆ ....... ಈ ನಡು ಇರ್‍ಲ್ಲಿ ಹಿಂಗೆ ಆಕೊ ? ಮೇಲೆ ಮನೆ ಅಜ್ಜಿನ ಕರೆಕಾಗಿತ್"ತ ಹೇಳ್ತ್. ಅವ್ವಂಗೆ ನಗೆ ತಡೆಕೆ ಬೊತ್. "ಹಂಗೆಲ್ಲಾ ಮಾವ. ಪುಟ್ಟು ಹೈದಂಗೆ ಹೊಟ್ಟೆ ಬೇನೆ" ಮತ್ತೊಮ್ಮೆ ಹೇಳ್ತ್. ಆಗ ಚಾಂಪ, "ಎಂತದ್? ಹೆತ್ತುಟಾ? ಎಂತಾ ಕೂಸು? ಹೊಕ್ಕಳು ಬಳ್ಳಿ ಕೊಯ್ದಾತಾ"ಂತ ಕೇಳೊಕಾ? ಈ ಮಾನವನಕ್ಕಲೆ ಬತ್‌ತೇಳಿ ಅವ್ವ ಪುಟ್ಟು ಹೈದನೇ ದರ ದರ ಎಳ್ಕಂಡ್ ಬಂದ್ ಚಾಂಪನ ಮುಂದೆ ನಿಲ್ಸಿತ್. ನೋಡ್ರೆ ಪಿಳ್ಳಿ! ತತ್.... ಕಥೆನೆ ಬೇರೆಂತೇಳಿ ಹೈದನ ಹಿಡ್ಕಂಡತ್. ಹೈದನೋ ತಕ ಥೈತಾ ಕುಣಿತಾ ಉಟ್ಟು. ಚಾಂಪಗೆ ಈಗ ಗೊತ್ತಾತ್.

ಚಾಂಪ ಕೂಡ್ಲೆ ಹೇಳ್ತ್ "ಕೋಳಿ ಲಾಕಿನ ತಕಂಬಾ" ಪುನಃ ಅಪ್ಪ ಗೂಡಿಗೋಗಿ ಇನ್ನೊಂದು ಲಾಕಿನ ಹಿಡ್ಕಂಡ್ ಬಾತ್. ಚಾಂಪ ಹೈದನ ತಲೆ ಸುತ್ತ ತಂದ್ "ಅಜ್ಜಪ್ಪ ದೇವ್ರೇ ಎಲ್ಲಾ ಇದರ ಮೇಲೆ ಹಿಡ್ದ್ ನಿಲ್ಲೊಕು"ಂತ ಹೇಳಿ ಬುಟ್ಟತ್. ಆ ಕೋಳಿ ಸಾ ಕತ್ತಲೆ ಮೂಲೆಲಿ ಕುದ್ದತ್. ಈ ಹೈದನ ಹೊಟ್ಟೆ ಬೇನೆ ಕಮ್ಮಿ ಆತಾ? ಇಲ್ಲೆ. ಪುಟ್ಟುನ ತಮ್ಮ ಮೂಲೆಲಿ ಮರ್ಸ್ಕಂಡ್ ಇದ್ದವಂಗೆ 'ಹೊರಗೆ' ಹೋವ ಆತುರ. ಅವನ ಎಳ್ಕಂಡ್ ಮರ ಬುಡಲಿ ಕುದ್ರಿಸಿ ನಾಯಿನ ಓಡ್ಸಿಕಾಕನ ಪುಟ್ಟು ಹೈದಂಗೂ ಅರ್ಜೆಂಟಾಕೊ? "ಅವ್ವಾ ನಾನೂ ಬನ್ನೆ"ಂತೇಳಿ ಇನ್ನೊಂದ್ ಮರದ ಬುಡಲಿ ಕುದ್ದತ್. ಪುಟ್ಟು ಹೈದನ ಹೊಟ್ಟೆ ಬೇನೆ ಪರಾರಿ! ಅಂವ ಹೊತ್ತಾರೆಂದ ಸಾಂಯ್ಕಾಲದವರೆಗೆ ತಿಂದ ಕರ್ಸ್ಟೆ ಪೇರ್ಲ, ಹಲ್ಸ್‌ನ ಕಾಯಿ ಹೊಟ್ಟೆಲಿ ಯುದ್ಧ ಮಾಡ್ತಾ ಇತ್. ಹೊಟ್ಟೆ ಖಾಲಿ ಆದ ಮೇಲೆ ಕುಂಭಕರ್ಣನಂಗೆ ಬಿದ್ದ್ ನಿದ್ದೆಮಾಡ್ತ್. ಅಂತೂ ಪುಟ್ಟುನ ಹೊಟ್ಟೆ ಬೇನೆಂದಾಗಿ ಚವುಂಡಿಯೂ, ಅಜ್ಜಪನೂ ಕೋಳಿ ಲಂಚ ಹೊಡ್ದೊ.



# 6. ಚಟ್ಟ ಹತ್ತುವ ಮುಟ್ಟ ಹಠ !

"ಅಮ್ಮವ್ವಾ.......ಏಯ್....... ಏನ್ ಸತ್ತಿಯನೇ ಮಾರೀ............ನಿನ್ನ ದೊಂಡೆ ಕಟ್ಟಿ ಹೋಗುಟಾ ............ಏಯ್...............ಬಾನೆ ಇಲ್ಲಿ. ಗಂಡಾಂತೇಳಂವ ಒಬ್ಬ ಉಟ್ಟುತಾರ್ ಗೊತ್ತುಟಾ? ನಿಂಗೆ ತಂದಾಕುದು ಜಾಸ್ತಿ ಆತ್. ನಾ ತಂದಾಕಿನೆ, ನೀ ತಿಂದಾಕ್. ಎಲ್ಲಿ ಸತ್ತೊಳನೇ ಧೋಲೀ.......... ಗಂಡ ಮನೆಗೆ ಬಾಕನ ಇವುಳ್‌ಗೆ ಕೆಲ್ಸ ಜೋರು. ನನ್ನ ಅಪ್ಪ ಮಾಡಿ ಇಸಿತಲ್ಲಾ ಅದರ ಹೊಡಿ ಮಾಡಿಕೆ ಬಂದವುಳು ನೀನ್. ನೀ ಹಿಂಗೆಂತಾ ಗೊತ್ತಿತ್ಲೆಪ್ಪಾ. ಮೋಸ ಹೋಬುಟ್ಟೆ. ಏ ಅಮ್ಮವ್ವಾ ಕತ್ತೆ ಲೌಡಿ ಬಾನೆ ಇಲ್ಲಿ. ನೀ ಬಾಕಿಲೆ. ನೀ ಬರುವುಳಾ? ಇದ್ದರ ಪೂರಾ ಮಾರಿ ಕೇರಿ ಆತ್. ಬತ್ತನ ಪೂರಾ ಅಳ್ದ್ ಅಳ್ದ್ ಕೊಟ್ಟೊಳ. ಕೊಮ್ಮೆಲಿ ಅಕ್ಕಿ ಯಾಗ ನೋಡಿರೂ ಇರಿಕಿಲ್ಲೆ. ನಿನ್ನ ಲೋಲುಗಾರಿಕೆನ ನಿಲ್ಸದೆ ಬುಡಿಕಿಲೆ. ನಿನ್ನ ಸೊಂಟನ ಇಂದ್ ಮುರೆದೆ ಬುಡಿಕಿಲೆ. ಏಯ್ ಅಮ್ಮವ್ವಾ........... ಬಾನೆ ಇಲ್ಲಿ............ನಾ ಜಗ್‌ಲ್‌ಂದ ಜಾರಿ ಅಂಗಳಕೆ ಬಿದ್ದೋಗಳೆ. ನಾ ಬಿದ್ ಹೊತ್ತೆಷ್ಟಾತ್‌ತಾರ್ ಗೊತ್ತುಟ್ನೇ............ನಾ ಸಾಯಲೀಂತ ನೀ ಗ್ಯಾನ ಮಾಡೊಳಾ......... ಅಯ್ಯೋ ನನ್ನ ಸೊಂಟ ಮುರ್ದೇ ಹೋತುತ ಕಂಡದೆ. ಒಮ್ಮೆ ಬಾನೆ ಕೈಕೊಟ್ ಏಳ್ಸ............"

ಸಂತೆಗೆ ಹೋದ ಚಂಗಪ್ಪ ಬಾಕನ ಯಾಗೋಳು ಟೈಟ್. ಸಂತೆಗೇ ಹೋಕುತ ಇಲ್ಲೆ. ಕತ್ತಲೆ ಕತ್ತಲೆ ಆಕೆ ಮುಂದೆ ಮೂಗು ಮುಟ್ಟ ಕುಡಿವ ಮನುಷ್ಯ ಚಂಗಪ್ಪ. ದಾರಿ ಉದ್ದಕ್ಕೆ ಹೆಣ್‌ಗೆ ಬಯ್ಕಂಡ್, ಉಪಕಾರ ಮಾಡ್ದವರ ಬಯ್ಕಂಡ್, ವಾರಕ್ಕೊಂದ್ ಕೊಡೆನ ನೆಟ್‌ಕಂಡ್ ವಾಚಿನ ಪೂರಾ ಚೂರ್ ಮಾಡಿಕಂಡ್ ದಾರಿ ಉದ್ದೋಕೆ ಸಾಮಾನ್‌ನೆಲ್ಲಾ ಬೀಳ್ಸಿಕಂಡ್ ಮನೆಗೆ ಬಾದು ಮಾಮೂಲಿ. ಎಲ್ಲಾ ದಿನ ಮನೆಗೆ ಎತ್‌ತಿತ್‌ಲೆ. ಯಾರ್‍ಯಾರ ಮನೇಲೊ ಹಾಳ್ ಬಿದ್‌ಕಂಡ್ ಇನ್ಯಾಗಳೋ ಬಾತಿತ್.

ಹೆಣ್ ನೋಡುವಷ್ಟು ನೋಡ್ತ್. ಮಾಡುವಷ್ಟ್ ಮಾಡ್ತ್. ನಿನ್ನ ಹಣೆಬರ ಇಷ್ಟೇತ ಗೊತ್ತಾದ ಮೇಲೆ ಎಷ್ಟ್ ಬೇಕೋ ಅಷ್ಟೇ ನೋಡ್ತಾ ಇತ್.

ಬಾಯಿಂದ ಹಲ್ ಉದುರುವ ವಯ್ಸಾದರೂ ಅಹಂಕಾರ ಮಾತ್ರ ಕಮ್ಮಿ ಆತ್‌ಲೆ. ಚಟ್ಟಕ್ಕೆ ಹತ್ತುವವರೆಗೆ ಹಠ ಬುಡಿಕಿಲೆಂತೇಳುವ ಆಸಾಮಿ. ಒಂದಿನ ಗಂಡಂಗೂ ಹೆಣ್‌ಗೂ ಮಾತಿಗೆ ಮಾತ್ ಬೆಳ್ತ್. ಗಂಡನ ಬಾಯಿ ಊರಿಗೇ ಕೇಳುವಷ್ಟ್ ಜೋರಾತ್. ದಾರಿಲಿ ಹೋಗವು ಮನರಂಜನೆ ಪಡ್ಕಂಡ್ ಹೋಗ್ತಾ ಇದ್ದೊ. ಅಂದ್ ಮಾತ್ರ ಹೆಣ್ ಗಂಡನ ಮೊಕ ಮುಸುಂಡು ನೋಡದೆ ನಾಕ್ ಮಡ್ಗಿತ್. ಚಂಗಪ್ಪ ಅಲ್ಲಿ ಇಲ್ಲಿ ಪೂಜಿಕಂಡ್ ಹೆಣ್‌ನ ಹಿಡ್ಕಂಬಕೆ ಬಾತ್. ಅವುಳು ಅಷ್ಟೊತ್ತಿಗೆ ಹೊರಗೆ ಓಡಿ ಬುಡ್ತ್. ಇಂವ ಕತ್ತಿ ತಕ್ಕಂಡ್ ಅವುಳ್‌ನ ಕಡೆಕೆತ ಮನೆ ಸುತ್ತ ಓಡ್ಸಿಕೆ ಸುರ್ ಮಾಡ್ತ್. ಹೆಣ್ ಹೈಸ್ಪೀಡ್‌ಲಿ

ಒಡ್ತಾ ಮನೆಗೆ ಒಂದ್ ರವುಂಡು ಬಂದೆತ್ತಕನ ಗಂಡಂದ್ ಅರ್ಧ ರವುಂಡೇ ಆದ್. ಗಂಡ ಮುಂದೆ ಓಡಕನ ಹೆಣ್ ಅವನ ಹಿಂದೆ ಸೇರಿಕಂಡತ್. ನಾಕೈದ್ ರವುಂಡ್ ಓಡಿ ಆಕನ ಗಂಡಂಗೆ ಸುಸ್ತ್ ಆತ್. ಸೇಂಕಿಕಂಡ್ ಬುಕ್ಕಿಕಂಡ್ "ನೀ ಸತ್ತೇ ಹೋಗು"ಂತೇಳಿ ಕತ್ತಿನ ಬೀಸಿ ಹೊಡ್ತ್. ಗೋಡೆಗೆ ಕತ್ತಿ ತಾಂಗಿ ಹಿಡಿ ಒಡ್ಡೇ ಹೋತು. ಅಷ್ಟೊತ್ತಿಗೆ ಕತ್ತಲೆಯೂ ಆತ್. ಸುಸ್ತೂ ಆಗಿತ್ತಲ್ಲಾ, ಹೆಣ್ ಕಾಲ್ ಕೈ ತೊಳ್ದ್ ಇದ್ದರ ಉಂಡ್ ಮಲ್ಗಿತ್. ಗಂಡ ಬೊಬ್ಬೆ ಹೊಡ್ಕಂಡ್ ಇನ್ನೂ ಬಾಕಿ ಇದ್ದರ ಹೊಯ್ಕಂಡ್ ಕುಡ್ತ್. ನಾಯಿ ಸುರ್ಬಿದಂಗೆ ಸುರ್ಬಿ ಮೂಲೆಲಿ ಬಿದ್ ಕಂಡತ್.

ಚಂಗಪ್ಪನ ಈ ವರ್ತನೆ ನೋಡಿ ನೋಡಿ ಬೇಜಾರಾದ ಕೊಟ್ಟೆ ಗೂಡೆಗ ಬಾದು ಕಮ್ಮಿ ಮಾಡಿಬುಟ್ಟೊ. ಅಪ್ಪನ ಮೇಲೆ ಪ್ರೀತಿ ಕಮ್ಮಿ ಆಗೊತು.

ಕೈಲ್‌ಪೋದು ಹಬ್ಬಲಿ ಹಂದಿ ಮಾಸ ತಂದೊ. ಒಂದೆರಡ್ ಚುಟ್ಟೆನೂ ಒಂದೆರಡ್ ಮಾಸದ ತುಂಡುನೂ ಸುಟ್ಟೊ. ಉಪ್ಪುಮೆಣ್ಸ್ ಮಾಡ್ದೊ. ಗಂಡ ತಿಂಬಕೆ ಕುದ್‌ಕಂಡತ್. ದಿನಾ ಜಗಳ ಎಂತಕೆತ ಗ್ಯಾನ ಮಾಡಿಕಂಡ್ ಹೆಣ್ ಕುಸೀಲಿ ಅರ್ಧ ಕುಪ್ಪಿ ಕಳ್‌ನ ಅವನ ಮುಂದೆ ಇಸಿತ್. ಗಂಡ ಲಾಯ್ಕ ಕುಡ್ಕಂಡ್ ಉಪ್ಪು ಮೆಣ್ಸ್ ಮಾಡ್ದ ಮಾಸನ ತೀಂತ್. ಬಟ್ಲೆಟ್‌ನೂ ಹಂದಿ ಗೈಪುನೂ ತಂದ್ ಇಕ್‌ನೇಂತ ಸುರು ಮಾಡ್ತ್. ಬಟ್ಲೆಟ್ಟಾಗಲಿ ಮಾಸ ಗೈಪಾಗಲಿ ಆಗಿತ್ಲೆ. "ನೀವು ಮಾಸ ತಂದದೇ ಈಗ. ಗೈಪು ಹೆಂಗೆ ಈಗಳೇ ಆದೆ? ಬಟ್ಲೆಟ್ ಇನ್ನೂ ಹೊಯ್ದ್‌ಲೆ. ಆದಂಗೆ ಬಿಸಿ ಬಿಸಿ ಕೊಟ್ಟನೆ." ಹೆಣ್ ಇಷ್ಟೇ ಹೇಳ್ದ್. ಅದ್ದಾ! ಎದ್ದೇ ಬುಡ್ತಲ್ಲಾ! ತಕಣೇ ಜಗಳ ಸುರಾಗೇ ಹೋತು. ಎದ್ದಂಗೆ ಮಣೆ ಎರ್ಕಿ ಹೆಣ್ಣಿಗೆ ಹೊಡ್ತ್. ಅಯ್ಯೋತೇಳಿಕಂಡ್ ಹೆಣ್ ರಟ್ಟೆ ಬೀತ್. ಹಣೆಗೆ ತಾಂಗಿದ ಮಣೆ ಪೆಟ್‌ಂದ ರಕ್ತ ಸೊರ್‌ತ ಸುರ್ತ್. ಬಿದ್ದಲ್ಲಿಗೆ ಬಂದ್ ಪುನಾ ಹೊಡ್ತ್. ಅಷ್ಟೊತ್ತಿಗೆ ಯಾರೊ ಬಂದೊ. ಬಂದವು ಈ ರಂಪ ಕಂಡ್ ಒಳಗೆ ನುಗ್ಗಿದೊ. ಚಂಗಪ್ಪನ ಎಳ್ದ್ ಒಂದ್ ಕಡೆ ನೂಕಿದೊ. ಹೆಣ್‌ನ ಎತ್ತಿ ಕೂರ್ಸಿದೊ. ಹಣೆಗೆ ಬಟ್ಟೆ ಕಟ್ಟಿ ರಕ್ತ ಸೋರುದರ ನಿಲ್ಸಿದೊ. ಆ ಕೈಲ್‌ಪೋದು ಹಂಗೇ ಕಳ್ತ್.

ಇವರ ಜಗಳನ ಸರಿ ಮಾಡ್ನೋಂತೇಳಿ ಅವು ಇವು ಬಂದೊ. ಆಗ ಚಂಗಪ್ಪ ಮೂಗು ಕೊಯ್ದ ನಾಯಂಗೆ ತಲೆ ಮುಕುಡ ಹಾಕಿತ್. ಎಲ್ಲಾ ಮಾತಿಗೂ ಆತ್ ಆತ್ ಇನ್ ಹಂಗೆ ಮಾಡ್ಲೆ, ಹಿಂಗ್ ಮಾಡ್ಲೆತ ಒಪ್ಪಿಕಂಡತ್. ಪಂಚಾಯಿತಿಯವು ಅತ್ತ ಹೋಕನ ಇತ್ತ ನಾಯಿ ಬಾಲ ಡೊಂಕು ಆದಂಗೆ ಚಂಗಪ್ಪ ಮಾಮೂಲಿ ಆಟ ಸುರು ಮಾಡ್ತಾ ಇತ್.

ಒಮ್ಮೆ ಒಂದು ಬಿಳಿ ಹಂದಿ ಮರಿ ತಂದೊ. ತಂದ್ ತಿಂಗಾಕೆ ಮುಂದೆ ಆ ಮರಿ ಕಟ್ಟಿದಲ್ಲಿಂದ ಜಾರ್ಸಿಕಂಡ್ ಹೋಬುಡ್ತ್. ಹುಡ್ಕಿಕೆ ಸುರು ಮಾಡ್ದೊ. ಗಂಡ ಈ ದಾರಿಲಿ

ಹೋತು. ಹೆಣ್ ಆ ದಾರಿಲಿ ಹೋತು. ಅವ್ಳು ನೆರೆಮನೆ ಕರೆಮನೆಯವರ್ನೆಲ್ಲಾ ಕೇಳ್ತ್. ಅವರ ಹಂದಿಗೂಡುನೆಲ್ಲಾ ನೋಡ್ತ್. ಹಂದಿ ಮರಿ ಪತ್ತೆ ಆತ್ಲೆ. ಗಂಡ ಚಂಗಪ್ಪ ಒಂದೆರಡ್ ಮನೆಕಡೆ ಹೋತು. ಮೂರನೇ ಮನೆಗೆ ಎತ್ತಕನ ಡೋಸ್‌ದ್ ಗ್ಯಾನ ಆತ್. ಆ ಮನೆಯವು ಎನ್ನೆಸ್ ಕಾಸ್ತಾ ಇದ್ದೊ. ಅಲ್ಲಿ ಸಮಾ ಕುಡ್ತ್. ಹಂದಿಮರಿ ವಿಷಯನೇ ಮರ್ತ್ ಹಿಂದಕೆ ಹೊರ್ಬ್ಟತ್. ಇತ್ತ ಹೆಣ್ ಮನೆಗೆ ಬೇಗ ಬಾತ್. ಹಟ್ಟಿಗೋಗಿ ದನಕಟ್ಟಿ ಬಾಕನ ಗಂಡ ಲೋಡಾಗಿ ತೇಲಾಡಿಕಂಡ್ ಬರ್‍ತಾ ಇತ್. "ನೀವಿಗೆ ಹಂದಿ ಮರಿ ಸಿಕ್ಕಿತಾ" ಹೆಣ್ ಕೇಳ್ತ್. "ಏಯ್......... ನಿನ್ನ....... ಯಾರಿಗೆ ಕದ್ ಮಾರಿಯೊಳಾ? ಮಾರಿ ಆದ ಮೇಲೆ ನನ್ನ ಕೇಳಿಕೆ ಏನುಟ್ಟು? ಎಷ್ಟಕ್ಕೆ ಮಾರ್ಡನೇ. ತೆಗಿ ದುಡ್ಡು" ಗಂಡ ರಂಪ ಮಾಡಿಕೆ ಸುರು ಮಾಡಿಕಂಡತ್. ಹೆಣ್ ಹರಾಶಿವಾಂತೇಳದೆ ಸುಮ್ಮನೆ ತನ್ನ ಕೆಲ್ಸ ಮಾಡ್ತಾನೇ ಇತ್. ಲಡಾಯಿ ಮಾಡಿಕಂಡೇ ಗಂಡ ಕುದ್ದತ್. ಹೆಣ್ ಬಾಯಿಗೆ ಬಾಯಿ ಕೊಡದ್ದರ್‌ಂದ ಅಂದ್‌ದ್ ಬೊಬ್ಬೆ ನಿತ್ತತ್.

ಮಾರನೆ ಬೆಳಿಗ್ಗೆ ಅಮ್ಮವ್ವ ಗಂಡ ಹೋದ ಮನೆಕಡೆ ಹಂದಿಮರಿ ಹುಡ್ಕಿಕೆತ ಹೋತು. ಇಂವ ಕುಡ್ಡ ಮನೆಗೂ ಹೋತು. ಅಲ್ಲಿ ಹೋಗಿ ಕೇಳಿ ಮಾಡಿ ಆಕನ ಬಿಳಿ ಬಣ್ಣದ ಹಂದಿನ ನಾವೂ ಕೂಡ ಸಾಕಿಯೊಳೊ. ಬೇಕರೆ ನೀವೇ ನೋಡಿ. ಹಂಗೆಂತೇಳಿ ಅದೇ ನಿಮ್ಮದ್‌ತ ಎಲ್ಲಾರ್ ವಾದ ಮಾಡ್ಬೇಡಿತ ಹೇಳ್ದೊ. "ಅಯ್ಯೋ ನಂದೇ ನಂಗಿಲ್ಲೆ. ಇನ್ ಕಂಡವರ್ದ್ ನಂಗೆ ಬೇಕಾ? ಅಂತೂ ನೋಡಿಬುಡನೊ"ಂತೇಳಿ ಹಂದಿ ಗೂಡು ಕಡೆ ಇವುಳೇ ಹೋತು. ಅಲ್ಲಿ ಹೋಗಿ ನೋಡಿರೆ ಒಂದ್ ಬಿಳಿ ಹಂದಿ ಮರಿ ಉಟ್ಟು! ಆದರೆ ಅದರ ಒಂದ್ ಕೆಮಿನ ಕೊಯ್ದೊಳೊ. ಬಾಲನ ತುಂಡು ಮಾಡಿಯೊಳೊ. ಇಷ್ಟ್ ಬದಲಾವಣೆ ಬುಟ್ಟರೆ ಆ ಹಂದಿ ಅಮ್ಮವ್ವಂದೇ. ಬಲಕಾಲ್ ಕವಣೆಲಿ ಕಪ್ಪು ಬಣ್ಣ ಉಟ್ಟು. ಈ ಹಂದಿ ಮರಿ ನನ್ನದೇತ ಅಮ್ಮವ್ವ ಎಷ್ಟೇ ಹೇಳಿರೂ ಆ ಮನೆಯವು ಕೇಳ್ತ್ಲೆ. "ಇದರ ಕಳ್ಕಂಡ ನಾ ಪಾಪರ್ ಆಕಿಲೆ. ಮಡ್ಕಂಡ ನೀವ್ ಉದ್ಧಾರ ಆಕಿಲೆ. ಎಲ್ಲನೂ ಆ ಚವುಂಡಿಯೇ ನೋಡಿಕಂಡದೆ"ತ ಅಲ್ಲೇ ನೆಲಕ್ಕೆ ಕೈ ಹೊಡ್ದ್ ಶಾಪ ಹಾಕಿ ರುಮ್ಮತ ತನ್ನ ಮನೆಗೆ ಬಾತ್. ಹಿಂಗೆ ಬಂದ ನಾಕೈದ್ ದಿನಕ್ಕೆ ಹಂದಿ ಮರಿ ಮನೆ ಹಕ್ಕಲೆ ರೆಡಿ! ಅಲ್ಲಿಂದ ಮುಂದೆ ಈ ಎರಡ್ ಮನೆಯವುಕೆ ಮಾತ್‌ಕತೆ ಇಲ್ಲದೆ ಎಷ್ಟೋ ವರ್ಷ ಆತ್‌ಗಡ.

ಒಂದ್ ಬೆಳಿಗ್ಗೆ ಹೆಣ್ ರೊಟ್ಟಿ ಮಾಡಿಕಂಡ್ ಒಲೆಲಿ ಕಾಸಿಕಂಡಿರಕನ ಗಂಡನೂ ಒಲೆ ಮುಂದೆ ಕುದ್‌ಕಂಡ್ ಸೌದೆಕೊಳ್ಳಿನ ಎಳೆದು, ಕೊಳ್ಳಿಗೆ ಕೊಳ್ಳಿನ ಹೊಡ್ದ್ ಕೆಂಡ ಉದುರುಸುದು ಮಾಡಿಕಂಡಿತ್. ಹೆಣ್ ಹೇಳ್ತ್ "ಬೆಂಕಿ ಲಾಯ್ಕ ಹೊತ್ತಿಕೆ ಬುಡಿ. ರೊಟ್ಟಿ ಆಗಮುಟ್ಟ, ಮುಟ್‌ಬೇಡಿ." ಇಷ್ಟೇ ಹೇಳ್ದ್. "ಏನ್‌ನೇ ನಂಗೆ ಆಡ್ರು ಮಾಡಿಕೆ ಆಗೊಳ"ಂತೇಳಿಕಂಡ್ ಹೊಡೆಕೆ ಬಾತ್. ಹೆಣ್‌ನ ಒಂದ್ ಕೈಲಿ ರೊಟ್ಟಿ ಸೆಟ್ಟುಗ.

ಇನ್ನೊಂದ್ ಕೈಲಿ ರೊಟ್ಟಿ ತಟ್ಟೆ. ಗಂಡನ ಪೆಟ್ಟೆಲ್ಲಾ ರೊಟ್ಟಿ ತಟ್ಟೆಗೆ ಬೀಳ್ತಾ ಇತ್. ಅಡ್ಗೆಮನೆ ಯುದ್ಧಮನೆ ಆಗೋತು. ರೊಟ್ಟಿ ಪೂರಾ ರಟ್ಟಿ ಹೋತು. ಬಾಕಿ ಇದ್ದ ಬಂದ ಬಿದ್ದು ಹೋತು. ನಾಯಿ ರೊಟ್ಟಿ ಕಚ್ಚಿಕಂಡ್ ಅಂಗಳಕೆ ಓಡ್ತ್. ಕೊತ್ತಿಗ ಮೂಲೆ ಸೇರ್‍ದೊ. ಹೆಣ್‌ದ್ ತಾಳಿ ಚೈನ್ ತುಂಡಾಗಿ ಹೋತು. ಒಂದ್ ಕೆಮಿ ಹರ್‍ದೇ ಹೋತು. ಒಂದ್ ವಾಲೆ ಎಲ್ಲಿ ಬೀತೋ ಏನೊ. ಗಂಡನ ಬೆನ್‌ಗೆ ರೊಟ್ಟಿ ಸೆಟ್ಟುಗಲಿ ಬಿದ್ದ ಪೆಟ್ಟಿಗೆ ಪೊಕ್ಕಳ ಬಾತ್. ಸೆಟ್ಟುಗ ಬಿಸಿ ಇತ್ ನೋಡಿ. ಹಂಗಾಗಿ ಗಂಡಂಗೆ ಗಮ್ಮತಾತ್. ಹೆಂಗೋ ಅಂತೂ ಬೆಳಿಗ್ಗೆ ರೊಟ್ಟಿ ತಿನ್ನದೆ ಪೆಟ್ ತಿಂದ್‌ಕಂಡ್ ಕಳ್ದೊ. ಅಂದ್ ಮಧ್ಯಾಹ್ನಕ್ಕೆ ಉಪಾಸ ಮಾಡ್ದೊ. ರಾತ್ರಿ ಉಂಡೋ ಏನೋ ಸರಿ ಗೊತ್ಲೆ.

ಅನ್ನನಾರ್ ಬೇಸಿ ಹಾಕಕ್. ಆದರೆ ಈ ಗೈಪುದೇ ಕಷ್ಟಂತೇಳಿಕಂಡ್ ಹೆಣ್ ಕೊಲ್ಲಿಕರೆಗೆ ಹೋತಿತ್. ಅಲ್ಲಿ ಏನಿಲ್ಲರೆ ಕೆಸ ಇದ್ದೇ ಇರ್ತಿತ್. ಕೆಸದ ಚಿರಿ ಭಾರೀ ಲಾಯ್ಕಾದೆ. ಒಂದಷ್ಟ್ ಚಿರಿ ತಂದ್ ಗೈಪು ಮಾಡಿರೆ ಅನ್ನಕ್ಕೂ ಸೈ, ರೊಟ್ಟಿಗೂ ಗಮ್ಮತ್. ಹುಳಿ ಜಾಸ್ತಿ ಇದ್ದರೆ ಇನ್ನೂ ಗಮ್ಮತ್ತಾಗಿದ್ದದೆ. ಕೆಲವುಕೆ ಬಾಯಿ ತೊರ್‍ಸಿದೆ. ಆದರೆ ಚಂಗಪ್ಪಂಗಾಗಲೀ, ಅಮ್ಮವ್ವಂಗಾಗಲಿ ಕೆಸನ ಗೈಪು ಬಾಯಿ ತೊರ್‍ಸುದುಲೆ. ಪಟ್ಟಾಗಿ ಎರಡ್ ತಟ್ಟೆ ಅನ್ನ ಗುಳುಂ ಮಾಡ್ತಿದ್ದೊ. ಒಮ್ಮೊಮ್ಮೆ ಕೆಸನ ಬೇರ್, ಕೆಸನ ಎಡ್, ಗೆಂಡೆ, ಒಂದಲ್ಲ ಒಂದ್ ಗೈಪಿಗೆ ಆಗೇ ಆದೆ. ಅದೂ ಇಲ್ಲದೆ ಹೋದರೆ ಕ್ಯಾನೆ ದಂಟ್‌ನ ಪಜ್ಜಿ ಮಾಡ್ತಾ ಇತ್. ಅದಿಲ್ಲರೆ ಬಾಳೆ ಕೂಂಬೆದ್ ಪಲ್ಯನೋ, ಪಜ್ಜಿನೋ ಬಾಳೆ ದಂಡ್‌ದ್ ಗೈಪೊ ಹಿಂಗೆ ಹೆಂಗಾರ್ ಮಾಡಿ ಸುದಾರ್‍ಸಿ ಬುಡ್ತಾ ಇತ್. ಇದೆಲ್ಲಾ ಗಂಡನ ದೊಂಡೆಗೆ ಇಳಿತಿತ್‌ತ ಹೇಳಿಕಾದುಲೆ. ಆದರೆ ಕೆಂಬಡೆ ಗೈಪು ಮಾಡಿರೆ ಮಾತ್ರ ಗಂಡನ ಮುಸುಂಡು ಆ ಕೆಂಬಡೆಗಿಂತ ದಪ್ಪ ಆಗೋತಿತ್. ಆ ಕೂಡ್ಲೆ ಲಡಾಯಿ ಸುರು ಮಾಡ್ತಾ ಇತ್.

ಒಮ್ಮೆ ನೆತ್ತಿಗೆ ಹಾಕಿಕೇ ಎಣ್ಣೆ ಇತ್ಲೆ. ಹಿಂಗಿರಕನ ಮೀನ್ ಹೊರ್‍ಟ್ ಊಟ ಮಾಡಿಕೆ ಉಟ್ಟಾ? ಊಟನೂ ಆಕು. ಗೈಪುಗೆ ಎಂತನೂ ಇಲ್ಲೆ. ಒಣಂಗಿದ ಮತ್ತಿ ಮೀನ್‌ನ ಕೆಂಡದ ಮೇಲೆ ಹಾಕಿ ಸುಟ್ಟತ್. ಮನೆ, ಅಲ್ಲಿ ಇಲ್ಲಿ ಪೂರಾ ಮೀನ್‌ದೇ ಗಮನ. ಆ ಗಮನಕ್ಕೆ ಕೊತ್ತಿಗಳೂ ಬಂದ್ ಎತ್ತಿಕಂಡೊ. ಕೊಸ್ಲಕ್ಕಿ ಗಂಜಿನೂ ಸುಟ್ಟ ಮೀನ್‌ನೂ ಅಂದ್ ಮಧ್ಯಾಹ್ನದ ಊಟಕ್ಕೆ ರೆಡಿ ಆತ್. ಚಂಗಪ್ಪ ಎಲ್ಲೋ ಹೋದಂವ ಬಾತ್. ಅಂವ ಒಬ್ಬನೇ ಬಾತಾ? ಇಲ್ಲೆ. ಒಟ್ಟಿಗೆ ಒಬ್ಬನ ಕರ್ಕಂಡೂ ಬಾತ್! ಅವುಕೆ ಇಬ್ಬರಿಗೂ ಊಟ ಇಕ್ಕೊಕು. 'ನಾವ್ ಉಂಬುದು ನೀವಿಗೂ'ಂತೇಳಿಕಂಡ್ ಗಂಜಿನೂ ಮೀನ್‌ನೂ ಇಕ್ಕಿತ್. ಅವಿಬ್ಬರು ಊಟ ಮಾಡ್ದೊ. ಇವ್ಳು ಗಂಜಿಗೆ ಉಪ್ಪು ಹಾಕಂಡ್ ಮೀನ್ ಗ್ಯಾನ ಮಾಡಿಕಂಡ್ ಉಂಡತ್. ಹಾಳಾದ ಉಪ್ಪಿನಕಾಯಿ ಹಾಕಿರೆ ಹುಳಾಗಿ ಬುಟ್ಟದೆ. ಒಮ್ಮೆನೂ ಸರಿ ಆತ್ಲೆ. ನಿಂಬುಳಿ ತಾದು, ಕೊಯ್ದ್ ಮಡ್ಕೆಗೆ ಹಾಕುದು. ಅದ್ ಇದ್ ಹಾಕಿ ಬಾಯಿ ಕಟ್ಟಿ

ಮಡ್ಗುದು. ಬೇಕಾಕನ ಬಿಚ್ಚಿ ನೋಡಿರೆ ಮಿಜಿಮಿಜಿ! ತಕ್ಕಂಡೋಗಿ ಸೊರ್ಗುದು. ಈ ಉಪ್ಪಿನಕಾಯಿ ಸಾಸನೇ ಬೇಡಾಂತೇಳಿ ಅದರ ಬುಟ್ಟೆ ಬುಡ್ತ್. ಹಿಂಗೆ ಹಾಳ್ ಮಾಡ್ವರ ಹೇಳಿಕಂಡ್ ಇವುಳ ಬೆನ್ನಿಗೆ ಗಂಡ ಬಡೇತಿತ್. ಪೆಟ್ ತಿಂದೇ ನಿನ್ನ ಬೆನ್ ಇಷ್ಟಗಲ ಆದ್‌ತ ಯಾರೋ ಹೇಳ್ತಿದೊಗಡ! ಅಷ್ಟೇ ಅಲ್ಲ, ಗುಡುಗುಡುತ ಗುಡುಗು ಬಾಕನ ಈ ಪಡ್ಡೆ ಹೈದಂಗ "ಅದ್ದಾ ಚಂಗಪ್ಪಜ್ಜ ಅಮ್ಮವ್ವಜ್ಜಿದ್ ಬೆನ್ನಿಗೆ ಗುದ್ದುವ ಸದ್"ತ ಹೇಳಿಕಂಡ್ ನಗಾಡ್ತಿದ್ದೊ ಗಡ!

ಸುಬ್ರಮಣಿ ಷಷ್ಠಿ ದಿನ ಉಪಾಸ ಮಾಡ್ನೋತೇಳಿ ಬೆಳಿಗ್ಗೆ ಏನೂ ತಿನ್ನದೆ ಉಪಾಸ ನಿತ್ತೊ. ಗಂಡ ಕೆಸನ ಗೆಂಡೆ ಎಳ್ಳಿಕಂಡ್ ಬಾತ್. ಹೆಣ್ ಗುಡ್ಸಕೆ ಬೆಂಕಿ ಹಾಕಿ ಮನೆ ಸಾರ್ಸಿಕೆ ಸುರು ಮಾಡ್ತ್. ಬಾಳೆ ಪಟ್ಟೆಲಿ ಸೆಗಣಿನ ಆಚೆ ಒಮ್ಮೆ ಈಚೆ ಒಮ್ಮೆ ಎಳೆಕನ ಕೆಲವು ಅಯ್ಯೆಕ ಮಕ್ಕಳ ಮೀಸ್‌ಕನ ಸ್‌ಸ್‌ತ ಸದ್ ಮಾಡಿಕಂಡ್ ಮೀಸುವಂಗೆ ಇವುಳು ಸ್‌ಸ್‌ತ ಸದ್ ಮಾಡಿಕಂಡ್ ಸಾರ್‌ಸ್‌ತಾ ಇತ್. ಸಾರ್‌ಸಿ ಆದ ಮೇಲೆ ಮೀಯಕೆ ಹೋತು. ಮೀದ್ ಬಂದ್ ಗಂಧ ಅರ್ತ್. ಬಾಳೆಲೆ ಕೀಂತ್‌ಗೆ ಹಾಕಿ ಮಡ್ಗಿತ್. ಒಲೆಗೆ ಬೆಂಕಿ ಮಾಡಿ ಅನ್ನಕೆ ನೀರ್ ಇಸಿತ್. ಕೆಸನ ಗೆಂಡೆನ ಕೀಸಿ ತುಂಡು ತುಂಡು ಮಾಡಿ ಕಣ್ಣೊಲೆಲಿ ಬೇಯಕೆ ಇಸಿತ್. ಶುಂಠಿ ಪಜ್ಜಿ ಮಾಡಿಕೆ ಕಲ್ಲಿಗೆ ಹಾಕಂಡತ್. "ಹೋಗಿ ತಲೆಂದಿಳಿ ಮೀಕಂಡ್ ಬನ್ನಿ"ತ ಗಂಡಂಗೆ ಹೇಳ್ತ್. ಪಜ್ಜಿ ಕಡ್ಡ ಮೇಲೆ ಒಂದೊರೆ ಪಾವು ಅಕ್ಕಿ ಹಾಕಿತ್. ಅನ್ನ ಆದ ಮೇಲೆ ಅಕ್ಕಿ ಪಾಯ್ಸ ಮಾಡ್ತ್. ಗೈಪೂ ಆತ್. ಗಂಡಂದ್ ಮೀದೂ ಆತ್. "ಶಿವಾ ನಾರಾಯಣ ಗೋವಿಂದಾ, ಸುಬ್ರಮಣಿ"ತ ಹೇಳಿಕಂಡ್ ಬಂದ ಗಂಡ ಗಂಧನ ಹಾಕಂಡತ್. ಹಿಂಗೆಲ್ಲಾ ಆಕನ ಮಧ್ಯಾಹ್ನ ದಾಟಿ ಗಂಟೆ ಎರಡ್ ಆಕೆ ಆಗಿರ್ದು. ಹೆಣ್ ಅನ್ನ ಮಡ್ಕೆ, ಗೈಪು ಚೆಟ್ಟಿ, ಪಜ್ಜಿ ಪಾತ್ರ ಎಲ್ಲನೂ ಒಂದ್‌ಕಡೆ ತಂದ್ ಇಸಿತ್.

ಬಾಳೆಲೆಲಿ ಉಂಬೊದು ಅಂದ್‌ದ್ ವಿಶೇಷ. ಹೆಣ್ ಎರಡ್ ಬಾಳೆಲೆ ಹಾಸಿತ್. ಕೆಲವು ಕಡೆ ಸುರೂಗೆ ಅನ್ನ ಊಟ. ಮತ್ತೆ ಪಾಯಸ. ಇನ್ ಕೆಲವು ಕಡೆ ಸುರೂಗೆ ಪಾಯಸ, ಮತ್ತೆ ಬಾಕಿದ್ದದ್. ಇವು ಸುರೂಗೆ ಪಾಯಸ ಹಾಕಂಡೊ. ಶುಂಠಿ ಪಜ್ಜಿಯೊಟ್ಟಿಗೆ ಉಂಡೊ. ಅನ್ನ ಹಾಕಂಡೊ. ಗೆಂಡೆ ಗೈಪು ಹಾಕಂಡೊ. ಅಂದ್ ಚಂಗಪ್ಪಂದ್ ಗುಲ್‌ಗಲಾಟೆ ಇಲ್ಲೆ. ಗಮ್ಮತ್ತಾಗಿ ಉಂಡೊ. ಒಪ್ಪತ್ ಊಟ ಕಳ್ದೊ. "ದಿನಾ ಹಿಂಗೇ ನನ್ನ ಗಂಡ ಇರ್ಲಿತ" ಹೆಣ್ ಸುಬ್ರಮಣಿಗೆ ಮನ್‌ಸ್‌ಲೇ ಹೇಳಿಕಂಡತ್.

ಊಟ ಆದ ಮೇಲೆ ಚಂಗಪ್ಪ 'ಓ ಅಲ್ಲಿವರೆಗೆ' ಹೋಗಿ ಬನ್ನೆತ ಹೋದ ಆಸಾಮಿ ಟೈಟ್ ಆಗಿ ಬಂದದ್ ರಾತ್ರಿ ದೀಪ ತುಂಬುವಹೊತ್ತಿಗೆ! (ದೀಪ ತುಂಬುದುತೇಳಿರೆ ದೀಪ ಆರ್ಸುದು) ಬಂದ ಆಸಾಮಿ ಕಡ್ಕಲಾಚೆ ನಿತ್‌ಕಂಡ್ "ಏ.....ಬಾನೆ ಇಲ್ಲಿ ದಾರಿ ಕಾಂಬಲೆ. ಗೊತ್ತಿದ್ದರೂ ಅಲ್ಲೆ ಒಳಾ. ದೀಪ ತಕಂಡ್ ಬಾನೆ. ಇಂದ್ ನಿನ್ನ ಸೊಂಟ ಮುರೆದೆ ಬುಡಿಕಿಲೆ"ತ ಆರ್ಭಟ ಕೊಡ್ತಾ ಇತ್. ಹೆಣ್ ಹೋಗಿ ದೀಪ ತಕಂಡ್ ಅಂಗಳಕೆ ಇಳೆಕನ

ದೀಪ ಕೆಟ್ ಹೋತು. ಒಳಗೆ ಹೋಗಿ ಹೋಸಿಕಂಡ್ ಬಾತ್. ಹಂಗೂ ಹಿಂಗೂ ತೊಳ್ಸಿಕಟ್ಟೆ ದಾಟಿ ಹಲ್‌ಸನ ಮರಹತ್ರ ಹೋಕನ ದೀಪ ಪುನಾ ಕೆಟ್ಟು ಹೋತು. "ಏ ಬಾನೆ ಕೊಳ್ಳಿ ದೆವ್ವಾ ..... ನಿನ್ನ ಸುಡಿಕೆ. ನಾ ಬಾಕನ ಕಡ್ಕಲ್ ಹತ್ರ ನಿಂಗೆ ಕುದ್ರಿಕೆ ಬೊತ್ತಾ? ನನ್ನ ತೊಪ್ಪಿ ಎಲ್ಲಿ ಬಿದ್ದೊತೊ ಏನೋ......" ಹೆಣ್ ಹೆಂಗೋ ಕಡ್ಕಲ್ ಹತ್ರ ಹೋಗಿ ನೋಡಿರೆ ಅಜ್ಜನ ಪಂಚೆ ಎಲ್ಯುಟ್ಟು? ಹೆಣ್‌ಗೆ ನಗೆ ತಡೆಕೆ ಬೊತ್ತದಾತ್. ನಗಾಡಿರೆ ಇವುಳ ಬೆನ್‌ನ ಡೋಲು ಮಾಡಿಕಂಡದೆ. ಹರಾಶಿವಾಂತ ಮಾತಾಡದೆ ಹೆಂಗೋ ಎಳ್ಕಂಡ್ ಬಂದ್ ಒಳಗೆ ಹಾಕಿತ್. ಸಧ್ಯ ಹೊಡೆವಸ್ಟ್ ತಾಕತ್ ಇತ್‌ಲೆ. ಹೆಣ್ ಬಚಾವಾತ್. ಹುಳಿ ಮಜ್ಜಿಗೆನ ಅವನ ದೊಂಡೆಗೆ ಹೊಯ್ತ್. ಹುಳಿ ಮಜ್ಜಿಗೆ ಕುಡ್ತಾಕನ ಜೂಂಗಿಕಂಡ್ ಜೂಂಗಿಕಂಡ್ ಅಲ್ಲೇ ಮಲ್ಗಿತ್. ಗೊರಕೆ ಸುರು ಮಾಡ್ತ್. ಬೆಳಿಗ್ಗೆ ಎದ್ "ನನ್ನ ಪಂಚೆ ಎಲ್ಲಿ? ಇಲ್ಲಿ ಸಿಕ್ಕಿಸಿದ್ದೆಲ್ಲಾ, ಹೋಯ್ ನನ್ನ ತೊಪ್ಪಿ ಎಲ್ಲಿನೆ? ಇಲ್ಲೇ ಕುರ್ಚಿ ಮೇಲೆ ಇಸಿದೆಲ್ಲಾ"ತ ಹುಡ್ಕುತಿತ್‌ಗಡ.

ಬೆಳಿಗ್ಗೆ ಹೆಣ್ ನೀರ್ ಕಾಸಿ ಮಡ್ಗಿತ್." ಹೋಗಿ ಮೀಯ್ಕಂಡ್ ಬನ್ನಿ"ತ ಹೇಳ್ತ್. "ನಾ ಮಿಯದುಲೆ. ಇಂದ್ ಅಮಾಸೆ, ಇಂದ್ ಹುಣ್ಣಿಮೆ, ಇಂದ್ ಕಡ್ಪವಾರ, ಇಂದ್ ನಾ ಹುಟ್ಟಿದ ದಿನ......" ಹಿಂಗೆ ಒಂದಲ್ಲ ಒಂದ್ ನೆವನ ಹೇಳಿಕಂಡ್ ಮೀಯೋದರ ತಪ್ಪಿಸಿಕಂಬತಿತ್. ತಿಂಗಳಿಗೊಮ್ಮೆ ಮೀಯೋ ಆಸಾಮಿ ಆಗೋತು. ಕೊಟ್ಟ ಗೂಡೆಗ ಬಾಕನ ಅಪ್ಪಂಗೆ ಸಮಾ ಬಯ್ದ್ ಮೀಯಕೆ ಹೇಳಿ ಮೀಯುಂಗೆ ಮಾಡ್ತಾ ಇದ್ದೊ.

ಕಳ್ ಕುಡೆದು ಹೆಣ್ಣಿಗೆ ಹೊಡೆದು ಮಾಡ್ತಾ ಇದ್ದ ಚಂಗಪ್ಪಂಗೆ ಚಳಿಗಾಲಲಿ ಒಂದ್ ಭಾಗ ಬರದಂಗಾಗೋತು. ಏಳಿಕೆ ಬತ್, ನಡೆಕೆ ಬತ್, ಎಲ್ಲಾ ಒಂದೇ ಕಡೆ ಆಗೋತು. ಅಲ್ಲಿ ಇಲ್ಲಿ ಮದ್ದು ಮಾಡ್ದೊ. ಊಟ ಎಲ್ಲಾ ಪಥ್ಯ. ಎಲ್ಲಾ ಸಪ್ಪೆ ಸಪ್ಪೆ ಆಗೋತು. ಊಟ ಕೊಡಕನ ತಟ್ಟೆನ ಹೆಣ್‌ನ ಮೇಲೆ ಬಿಸಾಕಿ ಬುಡ್ತಾ ಇತ್. ದಿನ ಕಳಿತಾ ಇದ್ದಂಗೆ ಹಠ ಮಾಡುವ ತಾಕತ್ ಕಮ್ಮಿ ಆಗೋತು. ಬುದ್ದಿ ಬಾತ್.



"ಅಮ್ಮವ್ವಾ ....ಬಾನೆ ಇಲ್ಲಿ. ಇಲ್ಲಿ ಕುದ್‌ಕನೆ, ಎದ್ದೆದ್ ಹೋಬೇಡನೆ, ನಂಗೆ ಸಧ್ಯ ಬೊತ್ತದೆನೆ. ನಿಂಗೆ ನಾ ಕಷ್ಟ ಕೊಟ್‌ಬುಟ್ಟೆ. ಒಬ್ಬೊಬ್ಬಂಗೆ ಒಂದೊಂದು ಕಾಲ. ನಂಗೆ ಹಿಂಗೆ ಆಬುಡ್ತಲ್ಲಾ. ಕೊಟ್ಟ ಗೂಡೆಗ ಬಾಕನ ಅವರ ಲಾಯ್ಕ ನೋಡಿಕ. ನಿನ್ನ ಆರೋಗ್ಯನೂ ನೋಡಿಕ. ಅಯ್ಯೋ ಹಾ ಶಿವ್ನೇ....." ಕಣ್ಣೀರ್ ಸುರ್‍ಸಿಕಂಡ್ ಬೇಜಾರ್ ಮಾಡಕನ "ಅಯ್ಯೋ ಏನೇನೋ ಹೇಳ್ಬೇಡಿ. ಆದ್ದೆಲ್ಲಾ ಆತ್. ಒಂದೆರಡ್ ಬಾಯಿ ಅನ್ನ ಊಟ ಮಾಡಿ. ಎಲ್ಲಿ ಬಾಯಿ ಬುಡಿ. ಬಾಯಿಗೆ ಅನ್ನ ಕೊಟ್ಟನೆ"ಂತ ಹೇಳಿಕಂಡ್ ಅಮ್ಮವ್ವ ಕಣ್ಣೀರ್ ಹಾಕಂಡ್ ಗಂಡಂಗೆ ತುತ್ತು ಕೊಡ್ತಾ ಇತ್. ಎಷ್ಟ್ ದಿನ?!



# 7. ಅಕ್ಕಾ, ಕೂಸು ಬಸ್‌ಲೇ........

**ಹ**ಳ್ಳೀಲಿರವು ಒಮ್ಮೊಮ್ಮ ನಗರಲಿರೋ ನಂಟ್ರ ಮನೆಗೆ ಹೋದರೆ ಬಾರೀ ಪಾಡ್ ಬಾಕಾದೆ. ಎಲ್ಲಿ ಕೂರಕೋ ಅಲ್ಲೆ ಕೂರಕು. ಕುಡೆಕನ ಗಟಗಟಾಂತ ಕುಡೆಂಗಿಲ್ಲೆ. ತಿಂಬಕನ ಗಬಗಬಾಂತ ತಿಂಬಂಗಿಲ್ಲೆ. ಬಟ್ಟೆಗಿಟ್ಟೆ ಮಣ್ ಮಸಿ ಆಗಂಗಿಲ್ಲೆ. ಬೀಡಿಗೀಡಿ ಸೇದಿ ಗೋಡೆಗೆ ಒತ್ತಿಕೆ ಬತ್. ಅಡಿಕೆನ ಕುರ್ಚಿ ಕೈ ಮೇಲೆ ಮಡ್‌ಗಿ ಚೂರು ಮಾಡಿಕೆ ಬತ್. ಎಲೆಡಿಕೆ ತಿಂಬಕನ ಹೆಚ್ಚಾದ ಸುಣ್ಣನ ಕುರ್ಚಿ ಕಾಲಿಗೆ ಉಜ್ಜಿಕೆ ಬತ್.

ನಗರದವು ಮನೆ ಸೇರುದೋ ರಾತ್ರಿ 8-9 ಗಂಟೆಗೆ. ಅಡಿಗೆ ಮಾಡುದು 10 ಗಂಟೆ ರಾತ್ರಿಲಿ. ಉಂಬೊದು 11 ಗಂಟೆಗೆ. ಇವುಕೆ ಬೆಳಗಾದು ಬೆಳಿಗ್ಗೆ 8 ಗಂಟೆಗೆ. ನಮ್ಮ ಕೇಪಣ್ಣ ಮೊನ್ನೆ ಬೆಂಗ್ಳೂರಿಗೆ ಹೋಗಿತ್. ಭಾವನ ಮನೆಗೆ ಹೋಗದೆ ತುಂಬಾ ವರ್ಷ ಬೇರೆ ಆಗಿತ್. ಅಪರೂಪಕ್ಕೆ ಭಾವ ಬಂದದ್‌ತೇಳಿ ಡೋಸ್‌ಗೀಸೆಲ್ಲಾ ಜೋರಾಗಿತ್. ಉಂಬಕೆ ಕೂರಕನ ಒಮ್ಮೆ ದೊಡ್ಡ ಜೀವ ಹೋದಂಗೆ ಕರೆಂಟ್ ಹೋತು. ಅಂತೂ ಇಂತು ಇವು ಡೋಸ್ ಏರ್‌ಸ್ತಾ ಇದ್ದಂಗೆ ಸೊಳ್ಳೆಗ ರಕ್ತ ಹೀರ್ತಾ ಇದ್ವೊ. ಆಗ ನಮ್ಮ ಕೇಪಣ್ಣಂಗೆ ಆ ಸೊಳ್ಳೆಗೆಲ್ಲಾ ಕೇರೇ ಇಲ್ಲೆ. ಸರಿ, ಊಟೆಲ್ಲಾ ಆತ್. ಸುಮಾರೊತ್ತು ಲೊಟ್ಟೆ ಬುಟ್‌ಕಂಡಿದ್ವೋ. ಕೇಪಣ್ಣ ಜೂಂಗಿಕೆ ಶುರ್ ಮಾಡ್ತ್. ಅಷ್ಟೊತ್ತಿಗೆ "ಡ್ಯಾಡಿ ಬೆಡ್ ರೆಡಿಂತ" ಧ್ವನಿ ಬಾತ್. ದಿಬ್ಬಣದವರ ಕರ್ಕಂಡ್ ಹೋಗುವಂಗೆ ಕೇಪಣ್ಣನ ಕೈ ಹಿಡ್ದ್ ನಡ್ಸಿಕಂಡೋದೊ. ಸೊಳ್ಳೆ ಪರದೆ ಒಳಗೆ ಮಲಗಿಸಿದೊ.

ಹಿಂಗೆ ಕೇಪಣ್ಣ ಪರದೆ ಒಳಗೆ ಮಲಗಿ ಗೊರಕೆ ಹೊಡಿತಾ ಇರಕನ ಏನಾತ್? ಹೊರಗೆ ಬೀದಿ ನಾಯಿಗ ಬೊಗಳಿಕೆ ಶುರ್ ಮಾಡ್ದೊ. ಕೇಪಣ್ಣಂಗೆ ಎಚ್ಚರಾತ್." ಓಹೋ ಕಾಡಂದಿಗಳೋ, ಆನೆಯೋ ಗದ್ದೆಗೆ ಬಂದ್ ಬುಟ್ವೊಕಂಡದೆ"ತ ಗ್ಯಾನ ಮಾಡ್ತ್ ಕೇಪಣ್ಣ "ಅದ್ದಾ ಅದ್ದಾ ಚೂ ಚೂ ಹಿಡಿ ಹಿಡಿಂತ" ಬೊಬ್ಬೆ ಹಾಕಿತ್. ಈ ಬೊಬ್ಬೆಗೆ ಭಾವನ

ಮನೆಯವೆಲ್ಲಾ ಗಾಬರೀಲಿ ಎದ್ದೋ. ಹಕ್ಕಲೆ ಇದ್ದ ಮನೆಯವುಕೆನೂ ಈ ಬೊಬ್ಬೆ ಕೇಳಿ 'ಕಳ್ಳ ಕಳ್ಳಾ'ಂತ ಹೇಳಿಕಂಡ್ ಪೊಲೀಸ್‌ಗೆ ಫೋನ್ ಮಾಡಿಕೆ ಪೇಚಾಡ್ತಾ ಒಳೊ. ಕೇಪಣ್ಣ ಎದ್ ಕುದ್‌ಕಂಡತ್. ಹಾಸಿಗೆಂದ ಇಳಿಕೆ ಬತ್. ಹಾಳಾದ ಪರದೆ ಬೇರೆ ಉಟ್ಟು. "ಇದೆಲ್ಲಾ ಯಂಥದ್, ನಾ ಎಲ್ಲಿ ಒಳೆ"ಂತ ಗ್ಯಾನ ಮಾಡಿಕಂಡಿರ್‌ಕನ ಮನೆಯವೆಲ್ಲಾ ಬಂದ್ 'ನೀವ್‌ಗೆ ಏನಾತ್'ತ ಕೇಳಕನೇ ಗೊತ್ತು! "ನಾ ಗದ್ದೆಲಿ ಹಂದಿ ಪಾರಕ್ಕೆ ಮಲಿಗಿದ್‌ತ ಗ್ಯಾನ ಮಾಡಿ ಬುಟ್ಟೆ ಭಾವಾ"ಂತ ಹೇಳ್‌ಕನ ಮನೆಯವೆಲ್ಲಾ ಬಿದ್ ಬಿದ್ ನಗಾಡಿಕೆ ಶುರುಮಾಡ್ದೊ. ಇದೇ ರೀತಿಯ ಅನುಭವ ನೀವ್‌ಗೂ ಆಗುಟಾ? ಈಗಂತೂ ಕೇಪಣ್ಣ ಎಲ್ಲೇ ಮಲಗಲಿ ಮೂರ್ ಮೂರ್ ಸತಿ ತಾನೆಲ್ಲಿರುದುತ ಗ್ಯಾನ ಮಾಡಿಕಂಡೇ ಮಲಗುದು ಗಡ!

ಈ ಗಂಡ್ ಜನಗಳೇ ಹಿಂಗೆಂತ ಹೆಣ್ ಜನ ನಗಾಡ್‌ವೋ. ಒಮ್ಮೆ ಜೂಬಿ ಏನ್ ಮಾಡ್ತ್‌ತ ಗೊತ್ತುಟಾ? ನೆಂಟ್ರ ಮನೆಗೆ ಹೊರ್ಟತ್. ಜೊತೆಗೆ ಕೂಸುನ ಸೊಂಟಲಿ ತೆತ್ತಿಕಂಡತ್. ಮಡಿಕೇರಿಲಿ ಕುರಿಮಾಸ, ಗೋಧಿ ರೊಟ್ಟಿ ತಕ್ಕಂಡತ್. ಅಪೂರ್ಪಕೆ ಹೋದಲ್ಲಾಂತ ಸೊಲ್ಪ ಗೌಜಿಲಿ ಹೊರ್ಟತ್. ಭಾಗಮಂಡಲ ಕಡೆಗೆ ಹೋಗುವ ಬಸ್ ಬಾತ್. ಬಸ್ ರಶ್ ಇತ್. ಬಸ್ ಹತ್‌ಕಾಕನ ಯಾರೋ ಪುಣ್ಯಾತ್ಮರ್ ಕೂಸ್‌ನ ಕರ್ಕಂಡೋ. ಇವುಳು ಒಂದ್‌ಕಡೆ ನಿತ್‌ಕಂಡತ್. ಇಳಿವ ಜಾಗ ಬಾತ್. ಬೇಗ ಬೇಗ ಬಸ್ ಇಳ್ತ್. ಬ್ಯಾಗ್ ತಕ್ಕಂಡ್ ಸೀದ ಹೋತು.

ನಂಟ್ರ ಮನೇಲಿ ಎಲ್ಲವೂ ಇದ್ದವೆಯೋ ಇಲ್ಲೆಯೋ. ಯಾರ್‍ಯಾರ್ ಹೆಂಗೆಲ್ಲಾ ಮಾತಾಡುವೋ? ನಾ ಬಂದೆಂತೇಳಿ ಕೋಳಿ ಕೊಂದವೆಯೋ ಇಲ್ಲೆ ಒಂದ್ ಮೊಟ್ಟೆನ ಹೊಡ್ದ್ ಹಾಕಿ ಧೋಳಾಂಬರ ಮಾಡಿ "ಮೊಟ್ಟೆ ಗೈಪುತ" ಇಕ್ಕುವೆಯೋಂತೆಲ್ಲಾ ಗ್ಯಾನ ಮಾಡಿಕಂಡ್ ಹೋತಿತ್. ಅಷ್ಟೊತ್ತಿಗೆ ಅತ್ತಂದ ಯಾರೋ ಬಂದವು "ಓ ಏನಕ್ಕಾ? ಬಾಳ ವರ್ಷ ಆತಲ್ಲ ನಿಮ್ಮನ್ನ ನೋಡದೆ. ಸೌಖ್ಯನಾ? ಕೂಸ್ನ ಯಾರಕ್ಕಲೆ ಬುಟ್ ಬಂದರಿ ?" ಹಿಂಗೆ ಕೇಳಕನೇ ಜೂಬಿಗೆ ಗೊತ್ತಾದ್ "ಓ ಅಕ್ಕಾ ಕೂಸ್ನ ಬಸ್‌ಲೇ ಬುಟ್ ಬುಟ್ಟೊಳೇಂತ" ಹೇಳಿಕಂಡ್ ಹಿಂದಕ್ಕೆ ಓಡಿಕೆ ಶುರ್ ಮಾಡ್ತ್. ಹೆಂಗೋ ಅಂತೂ ಆ ಕೂಸು ಇವುಳ ಕೈಗೆ ಸಿಕ್ಕಿತ್.

ಈ ಪ್ರಸಂಗ ನಡ್‌ದ್ ಬಾಳ ವರ್ಷ ಆತ್. ಈಗ ಆ ಕೂಸು "ಕೂಸ್ನಪ್ಪ" ಆಗಿ ಸುಖಾಲಿ ಉಟ್ಟುಗಡ!

*ಆ ಕೂಸ್ನಪ್ಪಂಗೆ ಜೈ.*



# 8. ಕಾರ್ತಿಂಗಳ ದೆವ್ವ!

**ಕಾರ್ತಿಂಗಲಿ** ದೆವ್ವಕೆ ಎಡೆ ಇಸದೇ ಇದ್ದರೆ ಉದ್ಧಾರ ಇಲ್ಲೆ! ಯಾವುದಾರ್ ಒಂದ್ ಆಯ್ತೋರ ರಾತ್ರಿ ದೆವ್ವಗಳಿಗೆ ಒಳ್ಳ ಒಂದ್ ಊಟ ಕೊಡ್ದು ಮಾಮೂಲಿ. ಆ ದೆವ್ವಕ್ಕೆ ಅಂತಿಂಥಾ ಕೋಳಿ ಆಕಿಲೆ. ಭಾರೀ ಶುದ್ಧ ಮುದ್ರಿಕೆಲಿರೋಕು. ಹೇಂಟೆ ಲಾಕಿಮನಿ ಆದರೆ ಅದ್ ಮೊಟ್ಟೆ ಇಕ್ಕಿರಿಕೆ ಬತ್. ಮೊಟ್ಟೆ ಇಕ್ಕಿತೋ ಮೊಟ್ಟೆನ ಯಾರೂ ಮುಟ್ಟಂಗಿಲ್ಲೆ. ಆ ಕೋಳಿನೂ, ಮೊಟ್ಟೆನೂ ಒಟ್ಟಿಗೆ ಗೈಪು ಮಾಡೊಕು.

ಎಡೆ ಇಕ್ಕಂವ ಬೆಳಿಗ್ಗೆಂದ್ಲೇ ಪಟ್ನಿಲಿರೋಕು. ತಲೆಂದಿಳಿ ಮೀದ್, ಅನ್ನ ಹಾಕದ 'ರೊಟ್ಟಿ'ನ ತಿನ್ನಕ್. 'ಅನ್ನ' ಉಂಬಕೆ ಬತ್! ಮದ್‌ಮಾಸ ಮುಟ್ಟಿಕೆ ಬತ್. ಹ್ಞಾಂ! ಕೋಳಿನ ಅಂದ್ ಬೆಳಿಗ್ಗೆ ಮೇಯಕೆ ಬುಡ್ದಾಗಲೀ, ಅವುಕೆ ಮೇಚಿ ಹಾಕುದಾಗಲಿ ಬತ್. ಮನೆಯಂವ ಪಟ್ನಿ, ಕೋಳಿಗ ಉಪಾಸ!! ದೆವ್ವಕೆ ರಾತ್ರಿ ಗದ್ದಾಳದ ಊಟ! ಸರಿ, ಕತ್ತಲಾಕೆ ಮುಂದೆ ಕೊಡಿ ಬಾಳೆಲೆನ ತಂದ್ ಇಸೊಕು. ಕುಟುಂಬಸ್ತರ್ ಇದ್ದರೆ ಅವುಕೆ, ಇಲ್ಲದೆ ಖಾಸಾ ನೆಂಟ್ರ್‌ಗಳಿಗೆ ಹೇಳಿದ್ದವೆ. ಅವು ಕತ್ತಲಾಕನ ಒಂದಿಬ್ಬರೋ, ಮೂರೋ ಜನ ಬಂದವೆ. ಅಷ್ಟೊತ್ತಿಗೆ ಈ ಮನೆಲಿ ಕೋಳಿನ ಕೊಂದ್ ಹಾಕಿದ್ದವೆ. ಕೋಳಿ ಕೊಲ್ಲಕನ ಯಜಮಾನ ಕಾಲ್ ತೊಳ್ದಿರಕು. ಅಷ್ಟೇ ಅಲ್ಲ, ಕೋಳಿ ಕಾಲ್ನೂ ತೊಳೆಕು. ಇದೆಲ್ಲಾ ಆದ ಮೇಲೆ ಕೋಳಿನ ಎರಡೂ ಕೈಲಿ ಹಿಡ್ಕಂಡ್ ಮನ್‌ಸ್‌ಲೇ ನಾಕ್ ಮಾತ್ ಹೇಳಿಕಂಡ್ ಕೈಯೊಳಗಿದ್ದ ಕೋಳಿ ಸಮೇತ ಎತ್ತಿ ನಮಸ್ಕಾರ ಮಾಡ್ದಂಗೆ ಮಾಡಿ ಮತ್ತೆ ಕೋಳಿ ಕಾಲೂ ರೆಕ್ಕೆನೂ ಸೇರ್ಸಿ ಹಿಡ್ಕಂಡ್ ಇನ್ನೊಂದ್ ಕೈಂದ ಕುತ್ತಿಗೆನ ಕೊಸ್ಕ್ ಕೊಸ್ಕ್‌ತ ಎರಡ್ ಮೂರ್ ಸತಿ ಎಳ್ದ್ ಅದರ ನಾಳಿ ತುಂಡ್ ಮಾಡಿ ಮೆಲ್ಲ ನೆಲಕ್ಕೆ ಹಾಕಿದೆ. ಕೋಳಿ ದಪದಪಂತ ಒದ್ದಾಡ್ದೆ. ಆಗ ಹೊರಗೆ ಇದ್ದ ಕೋಳಿಗ ಆ ಕೋಳಿಗೆ ಮೆಟ್ಟಿಕೆ ಹೋದವೆ. ಆ ಕೋಳಿಗಳ ಅತ್ತ ಓಡ್ಸಿ ಆಕನ ಇನ್ನೊಂದು ಕೋಳಿನ ಕೊಂದ್ ಹಾಕಿದೆ. ಮತ್ತೆ ಪುನಾ ಇನ್ನೊಂದ್ ಕೋಳಿನೂ ಕೊಂದದೆ. ಹಿಂಗೆ ಕೆಲವೊಮ್ಮೆ ಮೂರು, ಐದ್ ಕೋಳಿಗಳ ಕೊಂದ್ ಹಾಕಕನ ಕೆಲವು ಕೋಳಿಗ ಆಕಾಶಕ್ಕೆ ಕಾಲ್ ಕೊಟ್ಟಂಗೆ ಮಾಡಿ ರೆಕ್ಕೆ ಅಗಲ್ಸಿ ಬಿದ್ದ್‌ಕಂಡಿದ್ದವೆ. ಆಗ "ಹಾರ ತಕಾ, ಲಾಯಕ್ಕಾಗಿ ಹಾರ ತಕಾಂತ "ಹೇಳೋಕು. ಆದರೂ ಆ ಕೋಳಿ ಹಂಗೇ ಬಿದ್ದಿದ್ದರೆ ಕೈಂದ ಮುಟ್ಟಿಕೆ ಬತ್. ದೊಣ್ಣೆಂದ ಮೆಲ್ಲ ಅದರ ಉಂದೊಕು. ಆಗ ಅದ್ ಜೀವ ಹೋವ ಸಂಕಟಲಿ ಮತ್ತೊಮ್ಮೆ ಒದ್ದಾಡಿ ಮಗ್‌ಲಾಗಿ ಮಲ್ಗಿದೆ. ಮತ್ತೆ ನೀರ್ ತಕ್ಕಳ್ಸಿ 'ಶುದ್ಧ' ಮಾಡ್ದ ಮೇಲೆ ಎತ್ತಿಕಂಡ್ ಬಂದ್ ತೊಪ್ಪುಟ ಕೀಳೋಕು. ಹಿಂಗೆ ತೊಪ್ಪುಟ ಕೀಳಕನ ಚಕ್ಕಳ ಜಾರಿಕೆ ಬತ್. ಕೋಳಿನ ಕೊದಿವ ನೀರಿಗೆ ಹಾಕಿ ತೊಪ್ಪುಟ ಕೀಳಿಕಾಗದ್. ಕೊತ್ತಿಯಾಗಲಿ, ನಾಯಿಯಾಗಲಿ ಕೋಳಿದ್ ಕರ್‌ಳ್‌ನೋ ಮತ್ತೊಂದನೋ ತಿಂಬಕೆ ಬತ್ತೇ ಬತ್. ಹಂಗೆ ತಿಂದರೆ ಅಶುದ್ಧ!

ಮಾಸ ಮಾಡಕನ ಕರೆಡ ಮತ್ತೆ ಪಟ್ಟಕಾಯಿನ ಜೊತೆಯಾಗಿ ಬಾಳೆ ನಾರ್‌ಲಿ ಕಟ್ಟಿ ಬೇಯಕೆ ಹಾಕೋಕು. ಇಲ್ಲರೆ ಕರೆಡನೇ ಬೇರೆ ಪಟ್ಟಕಾಯಿನೇ ಬೇರೆ ಆಗಿ ಎಡೆ ಇಕ್ಕಿಕೆ ಕಷ್ಟ ಆದೆ. ಮಾಸ ಗೈಪು ಬೇಯಕನ ಬೆಂದುಟೋ ಇಲ್ಲೆಯೋ, ಉಪ್ಪುಟ್ಟೋ ಹುಳಿಯುಟ್ಟೋಂತ ರುಚಿ ನೋಡಿಕಾಗದ್. ಗೈಪು ಚಟ್ಟಿದ್ ನಡೂಲಿ ಕೊದ್ದರೆ ಎಲ್ಲಾ ಸರಿ ಉಟ್ಟುತ್ತ, ಅದಿಲ್ಲರೆ ಬೆಂಕಿ ಕೊಳ್ಳಿಗೆ ಗೈಪುದ್ ರಸನ ಹೊಯ್ದ್ ನೋಡುವ ಸಮರ್ಥ ಅಡಿಗೆಯವು ಒಳೊ. ಅದ್ಕಿಂತಲೂ ಸಮರ್ಥರ್ ಗೈಪು ಕೊದಿಯಕನೇ ಅದ್‌ರ್‌ಂದ ಹೊರ್ಡುವ ವಾಸನೇಂದನೇ ಗೊತ್ತುಮಾಡಿ ಬುಟ್ಟವೆ! ಅಬ್ಬಾ ಅವರ ಮೂಗೇ!

ಅದೆಲ್ಲಾ ಇರ್ಲಿ, ಇಲ್ಲೊಂದ್ ಕಡೆ ಒಂದ್ ತಮಾಷೆ ಆಗೋತು. ಅಪ್ಪಂಗೆ ವಯಸ್ಸಾತ್. ಮಕ್ಕ ಸಣ್ಣವು. ಆದರೆ ಎಡೆ ಇಕ್ಕದಿದ್ದರೆ ದೆವ್ವಗ ಮನೆ ಸುತ್ತ ಕೊಣ್ಣವೆ. ಹಂಗಾರೆ ಯಾರ್ ಕೋಳಿ ಕೊಲ್ಲುದು? ಅಪ್ಪನ ಕೆಲ್ಸ ಅವ್ವಂಗೆ ಬಾತ್. ಓವ್! ಅವ್ವಂಗೆ ಪ್ರಮೋಷನ್! ಆದರೆ ಎಡೆ ಇಕ್ಕುದು ಮಾತ್ರ ಅಪ್ಪನೇ. ಸರಿ, ಕೋಳಿ ಕೊಲ್ಲುವ ಕೆಲ್ಸ ಅವ್ವಂಗೆ ಬಂದಾಕನ 'ಅಯ್ಯೊ ಹೆಂಗೆಪ್ಪಾಂತ' ಅವ್ವ ಪರದಾಡ್ತ್. ಅವ್ವ ಕೋಳಿ ಕೊಂದತೇಲೆಂತ ಅಲ್ಲ. ನಂಟ್ರ್‌ಗಿಂಟ್ರ್ ಬಾಕನ ಕೋಳಿ ಕೊಲ್ಲಕನ ಕೋಳಿ ಕುತ್ತಿಗೆ ಚಕ್ಕಳ ಜಾರಿ ಹೋದರೂ ಹೋಗಲಿ, ಕೆಲವೊಮ್ಮೆ ಕೋಳಿನೇ ಬ್ಯಾರೆ, ತಲೆನೇ ಬ್ಯಾರೆ ಆದರೂ ಆಗಲಿ! ಆದರೆ ದೆವ್ವದ ಕೋಳಿ!! ಹಸಿರಕ್ತನೂ ಬಾಕೆ ಬತ್! ಒಂದ್ಚೂರೂ ಗಾಯ ಆಗದಂಗೆ ಕೋಳಿದ್ ನಾಳಿ ಮಾತ್ರ ತುಂಡಾಕು. ಹಂಗೆ ಕೊಲ್ಲುದರ್ಲಿ ಅಪ್ಪ ಎಕ್ಸ್‌ಪರ್ಟ್! ಅವ್ವಂಗೆ ಆ ರೀತಿ ಕೊಲ್ಲಿಕೆ ಗೊತ್ಲೆ.



ಅಂದ್ ಮೂರು ಕೋಳಿಗಳ ಕೊಲ್ಲೋಕು. ಬೇರೆ ಬೇರೆ ಮೂರು ಕುಕ್ಕೆಲಿ ಮುಚ್ಚಿದ ಕೋಳಿಗಳ ಮಕ್ಕ ಹಿಡ್ಕಂಡೊ. ಬೆಳಿಗ್ಗೇಂದ ಕುಕ್ಕೆ ಒಳಗೇ ಸುತ್ತಾಡಿ ಸುತ್ತಾಡಿ ಸುಸ್ತಾಗಿದ್ದ ಕೋಳಿ ಕಾಲೆಲ್ಲ ಗಲೀಜ್ ಆಗಿತ್. ನೀರ್ ತಂದೊ. ಕೋಳಿ ಕಾಲ್ ತೊಳ್ಳೊ. ಅವ್ವನ ಕೈಗೆ ಒಂದ್ ಕೋಳಿನ ಕೊಟ್ಟೊ. ಅಪ್ಪ ಅಂಗಳ ಕರೆಲಿ ದೊಣ್ಣೆ ಊರಿಕಂಡ್ ನಿತ್ತಿತ್. ಅವ್ವ ಕೋಳಿನ ಎಡಗೈಲಿ ಹಿಡ್ಕಂಡತ್. ಬಲಗೈಲಿ ಕುತ್ತಿಗೆ ಹಿಡ್ಕಂಡ್ ಕೊಸ್ಕ್ ಕೊಸ್ಕ್ತ ಕೊಸ್ಕಿತ್. ಕೋಳಿಗೆ ಏನೂ ಆತ್‌ಲೆ. ಇನ್ ಮೆಲ್ಲ ಮೆಲ್ಲ ಕುತ್ತಿಗೆನ ತಿರ್ಪಿನೇಂತ ತಿರ್ಪಿತ್. ಕುತ್ತಿಗೆ ತುಂಡಾಕೆ ಬತ್. ಹಂಗೂ ಹಿಂಗೂ ತಿರ್ಪಿ ನೆಲಕೆ ಬಡ್ಕತ ಹಾಕಿತ್. ಹಂಗೆ ನೆಲಕ್ಕೆ ಕೋಳಿ ಬೀತೋ ಇಲ್ಲೆಯೋ ಕೋಳಿದ್ ಕುತ್ತಿಗೆ ತಿರ್‍ಗಿ ಹೋತು. ಮನೆ ಕಡೆ ತಲೆ, ತೋಟ ಕಡೆ ಕಾಲ್. ಹಿಂಗೆ ಕೋಳಿ ಮನೆನ ನೋಡಿಕಂಡ್ ತೋಟ ಕಡೆ ಓಡಿ ಹೋತು. ಆಗ ಅಪ್ಪ ಅವ್ವಂಗೆ ಬಡೆಕೆ ದೊಣ್ಣೆ ಎತ್ತಿ ನಿತ್ತತ್. ಮಕ್ಕಳಿಗೆ ನಗೆ ತಡೆಕೆ ಬತ್. ನಗಾಡಿರೆ ಅಪ್ಪನ ದೊಣ್ಣೆ ಪೆಟ್ ಬಿದ್ದದೆ. ಅಷ್ಟೊತ್ತಿಗೆ ಒಬ್ಬ ಕೋಳಿ ಹಿಂದೆ ಓಡ್ತ್. ಆ ಕೋಳಿ ತೋಟಕಡೆಂದ ಇತ್ತ ಓಡಿ ಬಾತ್. ಈಗ ಅದರ ತಲೆ ತೋಟ ಕಡೆ. ಕಾಲ್ ಮನೆ ಕಡೆ! ಹಂಗೆ ಓಡಿ ಬಂದ ಕೋಳಿನ ಹಿಡೆಕೆ ಒಂಥರ ತಕುಪುಕು. ದೆವ್ವನೇ ಕೋಳಿ ಮೇಲೆ ಕುದ್‌ಟೊಂತೇಳುವಂಗೆ ಮಕ್ಕ ಹೆದ್ರಿಬುಟ್ಟೊ. ಅಷ್ಟೊತ್ತಿಗೆ ಅಲ್ಲಿ ಇಲ್ಲಿ ಓಡಾಡ್ದ ಈ ಕೋಳಿ ಬ್ರೇಕಿಲ್ಲದ ಲಾರಿನೋ ಬಸ್ಸೋ ಬರೆಗೆ ತಾಂಗಿ ನಿತ್ತದಲಾ ಹಂಗೆ ಜಗಲಿಗೆ ತಾಂಗಿ ನಿತ್‌ಕಂಡತ್. ಹೆಂಗಾರ್ ಮಾಡಿ ಹಿಡ್ಕೊಂಡೊ. ಅಪ್ಪ ದೆವ್ವಕೆ 'ಲಾಯಕ್ಕಾಗಿ' ಎರಡ್ ಮಾತ್ ಹೇಳ್ತ್. ಅವ್ವ ಪುನಃ ಆ ಕೋಳಿ ತಲೆ ತಿರ್‌ಟಿ ತಿರ್‌ಟಿ ಹಾಕಿತ್. ಹೆಂಗೋ ಕೋಳಿ ಸತ್ತತ್. ಇನ್ ಎರಡ್ ಕೋಳಿ ಬಾಕಿ ಉಟ್ಟು! ಅಲ್ಲೆಲ್ಲಿಟ್ಟು? ಒಂದ್ ಕೋಳಿ ಈ ಗೌಜಿ ನಡುವೆ ಕೈಂದ ತಪ್ಪ್ಸಿ ಓಡಿಟ್ಟು! ಬೆಳಿಗ್ಗೆಂದ ಏನೂ ಮೇಚಿ ಮಾಡದ ಕೋಳಿ ಮರುಳೋ, ಮಣ್ಣೋ ಸಿಕ್ಕಿದರ ತಿಂಬಕೆ ಪೇಚಾಡ್ತಾ ಇತ್. ಕತ್ತಲೆ ಬೇರೆ ಆಗ್ತಾ ಇತ್ತಲ್ಲ. ಬಾಕಿ ಕೋಳಿಗ ಕುದ್‌ರಿಕೆ ಹೋಕನ ಈ ಕೋಳಿನೂ ಅತ್ತ ಹೋತು. ಹೋಗಿ ಹಿಡ್ಕಂಡೊ. ಹೆಂಗಾರ್ ಮಾಡಿ ಅವ್ವ ಎರಡನೇ ಕೋಳಿನ ಕೊಂದ್ ಹಾಕಿತ್. ಸರಿ, ಮೂರನೇ ಕೋಳಿನ ಕೊಲ್ಲಕನ ಕತ್ತಲೆ ಆಗೇ ಹೋತು. ಅವ್ವ ಆ ಕೋಳಿದ್ ಕುತ್ತಿಗೆನ ತಿರ್ಪಕನ ಕುತ್ತಿಗೆ ತುಂಡಾಗಿ ತಲೆ ಬೇರೆ ಕೋಳಿ ಬೇರೆ ಆಗೋತು!! ಅಪ್ಪಂಗೆ ಗೊತ್ತಾತ್ಲೆ. ಅವ್ವನೂ ಹೇಳ್ತ್‌ಲೆ. ಮಕ್ಕಳೂ ಗುಟ್ಟು ಬುಟ್ಟತ್‌ಲೆ. ಸಧ್ಯ ದೆವ್ವಗಳೂ ಅಪ್ಪಂಗೆ ಚಾಡಿ ಹೇಳ್ತ್‌ಲೆ. ಎಲ್ಲಾರ್ ಅಪ್ಪಂಗೆ ಈ ವಿಚಾರ ಗೊತ್ತಾಗಿದ್ದರೆ ಅವ್ವನ್ನೇ ಎಡೆ ಇಕ್ಕಿ ಬುಡ್ತಿತೋ ಏನೊ?

ಈಗ ಕೋಳಿನ ಅಚ್‌ಕಟ್ ಮಾಡೋಕು. ಹಂಗೆ ಮಾಡಕನ ಮಕ್ಕಳ ಗೋಳು. ಆ ಕೋಳಿ ಹೇನ್‌ಗ ಪೂರಾ 'ಅಲ್ಲಿ ಇಲ್ಲಿ' ನುಗ್ಗಿ ಹರ್‍ಪಾಡ್ತಾ ಒಳೊ. ಕಚ್ಚವು ಕಚ್ತ್ತಾ ಒಳೊ. ಹಾಳಾದ ಕೋಳಿನ ಕೊದಿವ ನೀರಿಗೆ ಹಾಕಿಕೆ ಬೇರೆ ಆಗದ್! ಹಂಗೆ ಹಾಕಿದ್ದರೆ ಹೇನ್‌ಗೆಲ್ಲಾ ಪಡ್ಚ ಆತಿದ್ದೊ. ಇಬ್ಬರು ಮಕ್ಕ ಮೂರ್ ಕೋಳಿದೂ ತೊಪ್ಪಟ ತೆಗ್ದೊ.

ತಲೆ ಇಲ್ಲದ ಕೋಳಿದ್ ನಡೆ ಬುಡ್ಸಿ ಆಕನ ನಂಟ್ರ್ ಬಂದೊ. ಅವು ಏನಾರ್ ಸೊಲ್ಪ ಮುಂದೆ ಬಂದಿದ್ದರೆ "ಈೀ........ ಕೋಳಿನ ತಲೆ ತುಂಡು ಮಾಡ್ದ್ ಯಾಕೇಂತ" ರಾಗ ಎಳ್ದಿರ್‌ವೋ. ಸಧ್ಯ ಅವು ತಡಾಗಿ ಬಂದದ್ ಭಾರೀ ಒಳ್ಳದಾತ್. ಎಲ್ಲವೂ ಸೇರಿಕಂಡೊ ಮಾಸ ಮಾಡ್ದೊ.

ಅವ್ವ ಕಾಯಿ ಕಡ್ತ್. ಮೆಣ್ಸು ಕಡ್ವಾಕನ ಇನ್ನೊಂದು ಕಾಯಿನ ಹೋಳು ಮಾಡ್ದೊ. ಗೈಪಿಗೆ ಸೊರ್ಗ್ಗಿದೊ. ಎರ್ಡ್ ಕೋಳಿಗಳ ಒಂದೇ ಚೆಟ್ಟಿಲಿ ಗೈಪು ಮಾಡ್ದೊ. ಇನ್ನೊಂದರ ಬೇರೆ ಮಾಡ್ದೊ. ಗೈಪು ಬೇರೆ ಬೇರೆ ಆಗಿ ಬೇತ್. ನೀರ್ ದೋಸೆನೂ ಆತ್. ಅನ್ನನೂ ಬೇತ್. ರಾತ್ರಿ ಗಂಟೆ ಹತ್ತೂ ಆತ್. ಕೊಡಿ ಬಾಳೆಲೆ ಹಾಸಿದೊ. ಎಡೆ ಇಕ್ಕಿಕೆ ಅಪ್ಪನ ಕರ್ದೊ. ಅಪ್ಪ ನರ್ಕಿಕಂಡ್, ಬುಕ್ಕಿಕಂಡ್ ಬಾತ್. ಆ ಎಡೆಗೆ ಅದ್, ಈ ಎಡೆಗೆ ಇದ್‌ಂತ ಹೇಳ್ತ್. ಚಳ್ಳೆಗೆ ಕಳ್ ಹೊಯ್ದೊ. ಎಡೆಗೆಲ್ಲಾ ಇಕ್ಕಿದ ಮೇಲೆ ತುಪ್ಪನೂ ಹಾಕಿದೊ. ನೆಣೆ ಹೋಸಿ ಇಸಿದೊ. ಎಲ್ಲವೂ ಅಕ್ಕಿ ತಕ್ಕಂಡೊ. ಅಪ್ಪ ಈಗ ನಾಕ್ ಮಾತ್ ಹೇಳ್ತ್: "............ಈಗ ಏನ್‌ಂತೇಳಿರೆ ವರ್ಷ ವರ್ಷ ಕೊಡುವಂಗೆ ಈ ವರ್ಷನೂ ಎಡೆ ಕೊಡ್ತಾ ಒಳೆ. ಮಾಡ್ದ ಅಡಿಗೆಲಾಗಲಿ, ಇಕ್ಕಿದ ಎಡೆಲಾಗಲಿ ಹೆಚ್‌ಕಮ್ಮಿ ಆಗಿರ್ದು. ತಪ್ಪುನ್ನೆಲ್ಲಾ ಒಪ್ಪುಪಾಲ್ಸಿಕಂಡ್ ತೋಟತೊಡಿಗೆಗೆ, ಗದ್ದೆ ಬೆಳೆಗೆ, ದನಕರ್‌ಗಳಿಗೆ, ಮಕ್ಕಮರಿಗಳಿಗೆ, ಹೋದಲ್ಲಿ ಬಂದಲ್ಲಿ ಎಡ್ದಕಾಲ್ ಎಡ್ಗದಂಗೆ, ಮುಡ್ದ ಹೂ ಬಾಡದಂಗೆ ಕಾಪಾಡಿಕಂಡ್ ಸುಖ ಕೊಡುವ ಭಾರ ಎಲ್ಲಾ ನಿನ್ನ ಮೇಲೆ ಬುಟ್ಟೊಳೆ ಸ್ವಾಮೀತ" ಹೇಳ್ತ್. ಆಗ ಎಡೆಗೆ ಎಲ್ಲವೂ ಅಕ್ಕಿ ಹಾಕಿದೊ. ಅಕ್ಕಿ ಎಡೆಗೂ ಬೀತ್. ಮುಂದೆ ನಿತ್ತವರ ತಲೆಗೂ ಬೀತ್. ತಿರ್ಗಿ ನಿತ್ತೊ. ಯಾರೂ ಮಾತಿಲ್ಲೆ. ನೆಣೆ ಚಟ್‌ಚಟ್, ಜಿರ್‌ಜಿರ್‌ತ ಸದ್ ಮಾಡಿಕಂಡ್ ಹೊತ್‌ತಿತ್. ಹೊರಗೆಲ್ಲೋ ಮುಚ್ಚಿದ್ದ ಕೊತ್ತಿ ಮೀಯಾಂವ್ ಮೀಯಾಂವ್‌ತ ಕಿರ್ಗ್ಯಾಡ್ತಾ ಇತ್. ಸರಿ, ಎಲ್ಲವೂ ತಿರ್ಗನೋಂತ ಅಪ್ಪ ಹೇಳ್ತ್. ಎಡೆಕಡೆ ಎಲ್ಲವೂ ತಿರ್ಗಿದೊ.

'ಒಳ್ಳೊಳ್ಳ' ಎಡೆಗಳ ಎಳ್ಕಂಡೊ. ಚಳ್ಳೆಲಿದ್ದ ಕಳ್‌ನ ಪ್ರಸಾದಂತ "ದೊಡ್ಡವು" ತಕ್ಕಂಡೊ. ಚಾಪೆ ಹಾಸಿದ್ದ ಕಡೆ ಸಾಲಾಗಿ ಕುದ್ದೊ. ಅವ್ವ ಗೈಪು ಚೆಟ್ಟಿನ ತಂದ್ ನಡೂಲಿ ಇಸಿತ್. ಎನ್ನೆಸ್ ಕುಪ್ಪಿ ಮಧ್ಯ ಕುದ್ದತ್. ಹೊಯ್ಕಂಡೋ ಕುಡ್ದೊ. ಹಾಕಂಡೋ ತಿಂದೊ. ಪಟ್ಟೆ ಉಂಡ್ ಎದ್ದೊ.

ಅಷ್ಟೊತ್ತಿಗೆ ಕಾರ್ತಿಂಗಳ ಮಳೆನ ಕೇಳೋಕಾ. ಜಿರಿಗುಟ್ಟಿಕಂಡ್ ಹೊಡಿತಾ ಇತ್. ಅಪ್ಪಂಗೆ ಕುಸೀ ಆತ್. "ಒಳ್ಳ ದಿನ ಇಂದ್. ಒಳ್ಳ ಮಳೆ ಹೊಡಿತಾ ಉಟ್ಟುತ" ಹೇಳಿಕಂಡ್ ಮಲ್ಗಿಕೆ ಹೋತು. ಇನ್ನೊಂದು ಕಾರ್ತಿಂಗ ಬೇಗ ಬಾಂತ ಮಕ್ಕ ಹೇಳಿಕಂಡ್ ಸುರುಟಿ ಮಲ್ಗಿದೊ. ಬಂದ ನಂಟ್ರ್ ದೊಂದಿ ಹೋಸಿಕಂಡ್ ಗೊರ್ಗ ಹಾಕಂಡ್ ದಾರಿ ಕೂಡ್ದೊ. ಅವ್ವ ಮಾತ್ರ ತಲೆ ತುಂಡಾದ ಕೋಳಿನೇ ಗ್ಯಾನ ಮಾಡಿಕಂಡ್ ಮಲ್ಗಿತ್.



# 9. ಅಕ್ಕಯ್ಯಾ, ತಲೆ ಸ್ಪೀಡಾಗಿ ಓಡ್ದೆ.........

**ಒಂದಿನ** ತಂಗೆನೂ ತಂಗೆದ್ ನಾಲ್ಕು ವರ್ಷದ ಹೆಣ್ ಕೂಸೂನೂ ಅಕ್ಕನ ಮನೆಗೆ ಬಂದೊ. ಅಪೂರ್ಪಕೆ ತಂಗೆ ಬಂದದ್‌ತೇಳಿ ಅಕ್ಕಂಗೆ ಕುಸೀ ಆತ್. ಕಾಲಿಗೆ ನೀರ್ ಕೊಟ್ಟತ್. ತಲೆಗೆ ಎಣ್ಣೆ ಪೂಜಿತ್. ಕುಡೆಕಲ್ಲಾ ಕೊಟ್ಟಾತ್. ಮಧ್ಯಾಹ್ನದ ಊಟ ಮಾಡ್ದೊ. ಅಕ್ಕನ ಇಬ್ಬರು ಮಕ್ಕಳಿಗೆ ಪರಮಾನಂದಾತ್. ಆಡಿಕೆ ಸಣ್ಣ ಕೂಸು ಸಿಕ್ಕಿರೆ ಮಕ್ಕಳಿಗೆ ಇನ್ನೇನ್ ಬೇಕು ಹೇಳಿ? ಸಣ್ಣವ್ವನ ಕೂಸುನ ಕರ್‍ಕಂಡ್ ಆಟಕ್ಕೆ ಹೊರ್‍ಟೊ. ಹೋದವು ಎಲ್ಲೆಲ್ಲಿ ಹೋದೋಂತೇಳಿಕಾಕಿಲ್ಲೆ. ಕರ್‌ಗ ಎಲ್ಲೆಲ್ಲೂ ಓಡಾಡುವಂಗೆ ಮಕ್ಕಳೂ ಓಡಾಡಿವೆ. ಹಂಗೆ ಈ ಮಕ್ಕಳೂ ಸುತ್ತಾಡ್ದೊ. ಗದ್ದೆ, ತೋಡು, ತೋಟ, ಹಟ್ಟಿಗೆಲ್ಲಾ ಹೋಗಿ ಬಂದೋ. ಎಲ್ಲೆ ಹೋಗಲಿ ಈ ಕೂಸುನ ಮಾತ್ರ ನೆಲಕ್ಕೆ ಇಳ್ಸಿತ್ಲೆ. ಸೊಂಟಲಿ ತೆತ್ತಿಕಂಡೇ ತಿರ್‍ಗಾಡ್ದೊ . ಕೂಸಿಗಂತೂ ಕುದುರೆ ಸಿಕ್ಕಿದಂಗಾತ್.

ಇತ್ತ ಅಕ್ಕನೂ ತಂಗೆನೂ ಪಟ್ಟಾಂಗ ಸುರು ಮಾಡ್ದೊ. "ಭಾವ ಎಲ್ಲಿಗೆ ಹೋಗೊಳೊ"ಂತ ತಂಗೆ ಕೇಳ್ತ್. "ಈ ಹಾಳ್ ದನಗ ಹಟ್ಟಿಗೆ ಬಾದುಲೆ. ನಾಳೆಂದ ಊಡಿಕೆ ಸುರು ಮಾಡೊಕುಂತ ಹೇಳ್ತಾ ಇದ್ದೊ. ಊಡಿಕಾಕನಾರೂ ದನಗ ಹಟ್ಟಿಲಿ ಇಲ್ಲದಿದ್ದರೆ ಹೆಂಗೆ, ಹೋಗಿ ಹುಡಿಕಂಡ್ ಬನ್ನೆಂತ ಕತ್ತಿ ತಕ್ಕಂಡ್ ಅತ್ತೆಲ್ಲೊ ಹೋಗೊಳೊ"ಂತ ಅಕ್ಕ ಹೇಳ್ತ್. ಸಣ್ಣೆತರ್‌ಲಿ ನಾವು ಎಂಥೆಂಥಾ ಆಟ ಆಡ್ತಿದ್ದೊ. ಆ ಕಥೆ ಈ ಕಥೆನೆಲ್ಲಾ ಹೇಳಿಕಂಡ್ ಇಬ್ಬರು ನಗಾಡ್ದೊ. ಹಂಗೆ ಹಿಂಗೆಲ್ಲಾ ಮಾತಾಡಿ ಆಕನ ನಾಕಂಟೆದ್ ಕಾಪಿ ಕುಡೆನೋಂತ ಆತ್. ಕಾಫಿನೂ ಕಾಸಿಕಂಡೊ. ಮಕ್ಕಮರಿ ಎಲ್ಲಾ ಕೂಡಿಕಂಡ್ ಕುಡಿತಾ ಇರಕನ ತಂಗೆದ್ ಕೂಸು ಒಂದ್ ಗಲಾಸ್ ಕಾಫಿನ ಕಂಕಣಿ ಹಿಡ್ತ್. ಅಷ್ಟೊತ್ತಿಗೆ ಅದರ ಬೆನ್ನಿಗೆ ಒಂದ್ ಗುದ್ದೂ ಅಯ್ಯೆನ ಕೈಂದ ಬೀತ್. "ಏ ಹೊಡಿ ಬ್ಯಾಡನೆ, ಕೂಸಲ"ಂತ ಅಕ್ಕ ಸಮಾಧಾನ ಹೇಳಿ ಕೂಸುನ ಎಳ್ದ್ ಮಡ್‌ಲ್ಲಿ ಕೂರ್ಸಿಕಂಡತ್. ಇಷ್ಟೆಲ್ಲಾ ಆಕನ ಪೋಲಿ ದನಗಳ ಹುಡ್ಕಿಕೆ ಹೋದ ಗಂಡ ಬೇಕಾದ ಎರಡ್ ಎತ್‌ಗಳ ಮಾತ್ರ ಹೊಡ್ಕಂಡ್ ಬಾರದ ದನಗಳ ಯಾರ್‍ಯಾರ ತೋಟಲಿ ಹಾಳ್‌ಬೀಳಿಕೆ ಬುಟ್ ಬಾತ್. ಮನೆಲಿದ್ದ ನಾದಿನೀನ ಕಂಡ್ "ಓಹೋ ಎಟ್ಟೊತ್ತಿಗೆ ಬಂದನೇ ಚಿಮ್ಮೀಂತ" ಕೇಳ್ತ್. ಆಗ ನಾದಿನಿ "ಮಧ್ಯಾನನೇ ಬಂದೋ ಭಾವ"ಂತೇಳಿ ಕಾಲಿಗೆ ಬೀತ್. ಕೂಸುನ ಎಳ್ಕಂಡ್ "ದೊಡ್ಡಪ್ಪನ ಕಾಲ್ ಚಾಮಿ ಮಾಡ್‌ತ" ಹೇಳಿ ಅದರ ಕುತ್ತಿಗೆನ ದೊಡ್ಡಪ್ಪನ ಕಾಲಿಗೆ ಬಗ್ಗಿಸಿತ್. ದೊಡ್ಡಪ್ಪನ ಕಾಲ್‌ಲಿದ್ದ ಉಂಬುಳುನ ಕಂಡ್ ಕೂಸು "ಯಬೇ ಬುಂಬುಂ" ತೇಳಿಕಂಡ್ ಹೆದ್ರಿ ಹಿಂದಕೆ ಬಾತ್. ಕಾಲ್‌ಲಿ ನಾಕೈದ್ ಉಂಬುಳುಗ ನೇರ್ಲ ಹಣ್‌ನಂಗೆ ಆಗಿದ್ದೊ.

ಅಕ್ಕ ಕೋಳಿ ಗೂಡ್ ಕಡೆ ಹೋತು. ಉಕ್ಕುಡೆ ಬತ್ತನ ಹರಡಿಕಂಡ್ 'ಕೋಳಿ ಬಾ ಬಾ ಬಾ'ಂತ ರಾಗ ಎಳ್ದ್ ಕೋಳಿಗಳ ಕರ್‍ತ್. ಹತ್‌ಹದ್ನೈದ್ ಕೋಳಿಗ ಅಲ್ಲಿಂದ

ಇಲ್ಲಿಂದೆಲ್ಲಾ ಬಂದ್ ಸೇರಿಕಂಡೊ. ಚುಳ್ಳು ಚುಳ್ಳು (ಕಡ್ಲೆ ಕಡ್ಲೆ) ಹುಂಜನ ಹಿಡ್ಕಂಡ್ "ಇದೇನಿ ಇದರ ಕುತ್ತಿಗೇನ ಮುರೇನಿ"ಂತ ಗಂಡನ ಕೈಗೆ ಕೊಟ್ಟುತ್. ಆಗ ತಂಗೆ ಮಾತಿಗಾರ್ ಹೇಳೊಕಲೇಂತ "ಇದೆಲ್ಲಾ ಯಂತಕೆ ಭಾವ, ಅದರ ಬುಡಿ ಭಾವಾ"ಂತ ಹೇಳ್ತ್. ನೀ ಸುಮ್ಮನಿರ್ ಅಪೂರ್ವಕೆ ಬಂದೊಳಾಂತ ಭಾವ ಹೇಳಕನ ಈ ಕೂಸು "ಆ ಕೋಳಿನ ಯಂತ ಮಾಡ್ತು? ಕೊರ ಕೊರ ಮಾಡಿ ಕಿಕ್ಕಿ ಮಾಡಿಕಾ" ಹಿಂಗೆ ಕೇಳಕನ ಹೌದೂಂತ ಹೇಳ್ದ ದೊಡಪ್ಪ ಕೋಳಿನ ಕೊಂದ್ ಹಾಕಿತ್. ಆಗ ಆ ಹುಂಜ ಒದ್ದಾಡ್ತಾ ಇರಕನ "ಅಯೋ ಪಾಪ ಪಾಪ"ಂತ ಕೂಸು ಬೇಜಾರ ಮಾಡಿಕಂತ್. (ಕರುಣೇಂತೇಳ್ದು ಮಕ್ಕಳ ಸಹಜ ಗುಣ) ಕೋಳಿನ ಅಚ್‌ಕಟ್ ಮಾಡಿ ಆತ್. ಒಂದ್ ಗಂಜಿ ಪಾತ್ರ ತುಂಬ ಮಾಸ ತುಂಬಿತ್. "ನೋಡು, ಎರಡ್ ಕೇಜಿ ಆದುನೆ"ಂತ ಹೆಣ್‌ನ ಕೇಳಕನ "ಉಮ್ಮಪ್ಪ ಇರ್‌ತ ಕಂಡದೆ"ಂತ ಹೆಣ್ ರಾಗ ಎಳ್ತ್. ಗೈಪು ಹುಳ್ಳಂಗೆ ಗಸಿಗಸಿ ಮಾಡ್. ಮಂಡಿಗಂಟ ನೀರ್ ಮಾಡ್‌ಬಡಂತ ಗಂಡ ಹೇಳಿ ಹೊರಗೆ ಹೋತು.

ಇರ್ಲ್‌ಗೆ ತುಪ್ಪದನ್ನ ಕೋಳಿಗೈಪು ರೆಡಿ ಆತ್. "ಹಞ ಬೆಸಗೆಲಿ ಇಸಿನೆ. ಮತ್ತೆ ಮಕ್ಕಳಿಗೆ ಊಟ ಕೊಡನೊ. ಮಕ್ಕಳ್ದ್ ಆದ ಮೇಲೆ ದೊಡ್ಡೊವು ಉಂಬೊನೊ"ಂತ ಹೆಣ್ ಹೇಳ್ತ್. ಹಂಗೆ ಹೇಳಿ ಬೆಸಗೆಲಿ ಇಸಿತ್. ಮಕ್ಕಳಿಗೂ ಇಕ್ಕಿತ್. ಅವು ಉಂಡೊ. ಎದ್ದ್ ಕೈ ತೊಳ್ದ್ ಆಟಕ್ಕೆ ಸುರು ಮಾಡ್ದೊ. ಈಗ ತಂಗೆ, ಅಕ್ಕ, ಭಾವ ಊಟಕ್ಕೆ ಕುದ್‌ಕಂಡೊ. "ಮಿಲ್ಟ್ರಿ ರಮ್" ಇತ್. ಮೂರು ಗಲಾಸ್ ಇಸಿಕಂಡೊ. ಮುಂದೆ ನಾದಿನಿಗೆ ರಮ್ ಹೊಯ್ಯಕನ "ಬೇಡ ಭಾವಾ"ತ ಹೇಳ್ತ್. "ಹೇ, ಇದೇನಾದುಲೆ, ಉಂಬೊದು ಮಲ್ಗುದುತಾನೆ, ಬರೀ ಎರಡ್ ಬೆರಳ್ ಹೊಯ್ದೊಳೆ"ಂತ ಹೇಳಿ ಹೊಯ್ದ್ ಕೊಟ್ಟುತ್. ಹೆಣ್ಣಿಗೂ ಹೊಯ್ತ್. ತಾನೂ ಹೊಯ್ಕಂಡತ್. ನಾದಿನಿಗೆ ಪುನಾ ಎರಡ್ ಬೆರಳ್ ಹೊಯ್ತ್. ಹಿಂಗೆ ಎರಡ್ ಬೆರಳ್, ಮೂರು ಬೆರಳ್ ಕುಡ್ವಾಕನ ನಾದಿನಿ ಟೈಟ್ ಆತ್. ಹೆಣ್ ಸಮಾ ಕುಡ್ತ್. ಹೆಣ್‌ಗೆ ಕುಡ್ದ್ ಕುಡ್ದ್ ಪ್ರಾಕ್ಟೀಸ್ ಉಟ್ಟು. ಹಂಗಾಗಿ ಹೆಣ್ ಗಡಂಗ, ಗಂಡ ಟ್ಯಾಂಕರ್!! ನಾದಿನಿ ಟೈಟ್! ಕುಪ್ಪಿ ಅಡ್ಡಬೀತ್. ನಾದಿನಿ ಗೋಡೆಗೆ ತಾಂಗಿತ್. ಅಲ್ಲಿಗೇ ಕೈ ತೊಳೆಕೆ ನೀರ್ ತಂದ್ ಅಕ್ಕನೇ ಕೈ ತೊಳ್ಸಿತ್. ಎಲೆ ಅಡಿಕೆ ಅಲ್ಲಿಗೆ ತಂದ್ ಕೊಟ್ಟೊ. "ಅಕ್ಕಯ್ಯ ದೀಪ ಎರಡ್ ಉಟ್ಟಾ"ಂತ ಒಂದ್ ದೀಪದ ಕಡೆ ಕೈ ತೋರ್ಸಿತ್. "ಇಲ್ಲೆನೆ ನಿಂಗೆ ಹಂಗೆ ಕಾಂಬೊದು"ಂತ ಹೇಳಿಕಂಡ್ ನಗಾಡ್ದೊ.

"ಇನ್ ಮಲ್ಗನೊ. ಬಾ ನೀನೂ ಕೂಸುನು ಆ ಕಟ್ಲ್‌ಲಿ ಮಲ್ಕಣಿ"ಂತ ಕಟ್ಲ್ ತೋರ್ಸಿತ್. ತಂಗೆಗೆ ಕುದ್ದಲ್ಲಿಂದ ಏಳಿಕೆ ಆದೆಯಾ? ಹುಂ ! ಸುತಾರಾಂ ಆಗ್ತಾ ಇಲ್ಲೆ. ಮೈಮೇಲೆ ಬಂದವು ಕೊಣ್ದ್ ಕೊಣ್ದ್ ಕಡೆಗೆ ದೇವ್ರು ಪಿರಿಯಕಾಕನ ಅವನ ಹಿಡ್ಕಂಡ್ ನಡ್ಸಿಕಂಡ್ ಹೋದವೆಲ್ಲಾ ಹಂಗೆ ತಂಗೆನ ನಡ್ಸಿಕಂಡ್ ಹಾಸಿಗೆಗೆ ಕರ್ಕಂಡ್ ಹೋತು. ಹಾಸಿಗೆಗೆ ತಲೆ ಕೊಟ್ಟದೇ ತಡ "ಅಕ್ಕಯ್ಯ ಅಕ್ಕಯ್ಯ ಕಟ್ಲ್‌ನ ಹಿಡ್ಕ. ಕಟ್ಲ್ ತಿರುಗ್ತಾ

ಉಟ್ಟು. ಬಾ ಒಮ್ಮೆ"ಂತ ಕರ್ತ್. ಓಹೋ ತಂಗೆಗೆ ಜಾಸ್ತಿ ಆಬುಡ್ತ್. ಮದ್ವೆಗೆ ಮುಂದೆ ನಾವಿಬ್ಬರೂ ಕದ್‌ಕದ್ ಏರ್‌ಸ್ತಾ ಇದ್ದೊ. ಏನಾತಿತ್‌ಲೆ. ಇಂದೇನಾತ್ ಇವುಗಳಿಗೆಂತ ಗ್ಯಾನ ಮಾಡಿಕಂಡ್ "ಚಿಮ್ಮಿ ಹಣಿ ಮಜ್ಜಿಗೆ ಕುಡ್ದಿಯಾ"ಂತ ಕೇಳ್ತ್. "ನಂಗೆಯಂತ ಬೇಡಾ"ಂತ ಹೇಳಿ ಕಣ್ ಮುಚ್ಚಿಕಂಡತ್. ಪುನಾ "ಅಕ್ಕಯ್ಯಾ ಅಕ್ಕಯ್ಯಾ ನನ್ನ ತಲೆ ಸ್ಪೀಡಾಗಿ ಓಡ್ದೆ"ಂತ ಹೇಳ್ತ್. "ತಥ್‌ತ್ತೇರಿ, ಸ್ಪೀಡ್ ಕಂಟ್ರೋಲ್ ಆಕ್ಕೊರೆ ನಿಂಬುಳಿನೆ ಸರಿ"ಂತ ಹೇಳ್ಕಂಡ್ ಒಂದ್ ನಿಂಬುಳಿನ ಕೊಯ್ತ್. ಒಂದ್ ಒಡೆನ ನೆತ್ತಿಗೆ ಉಜ್ಜಿತ್. ಹಂಗೆ ಹಿಂಗೆಲ್ಲಾ ಆಕನ ತಂಗೆಗೆ ನಿದ್ದೆ ಬಾತ್.

ದೀಪ ತುಂಬಿದೊ. ಎಲ್ಲವು ಮಲ್ಗಿ ಗೊರಕೆ ಹೊಡ್ದೊ. ಸಮ ಇರ್‌ಲ್ಲ ಆಗಿರ್ದು. ತಂಗೆದ್ ಕೂಸು "ಅಮ್ಮಾ...... ಅಮ್ಮಾ"ಂತ ಕಿರ್ಚಿ ಕಿರ್ಚಿ ಬೊಬ್ಬೆ ಹಾಕಿಕೆ ಸುರುಮಾಡ್ತ್. ಅಕ್ಕಂಗೆ ಎಚ್ಚರ ಆತ್. ದೀಪ ಹೊಸಿಕೇಂತ ಬೆಂಕಿ ಪಟ್ಣಕ್ಕೆ ಕೈ ಹಾಕಿತ್. ಅಲ್ಲೆಲ್ಲೂ ಬೆಂಕಿ ಪಟ್ಣ ಇಲ್ಲೆ. ಕೆಲವು ಮನೆಲಿ ಹಂಗೆ. ಯಾವ ವಸ್ತುನೂ ತೆಗ್ದ ಕಡೆ ಮಡ್ಗುದ್ಲೆ. ಶಿಸ್ತ್ ಇಲ್ಲದಿದ್ದರೆ ಹಿಂಗೆನೆ. ಹಂಗೆ ಇವರ ಮನೆಲೂ ಆತ್. ಅಕ್ಕ ಅಲ್ಲಿ ಇಲ್ಲಿ ತಬ್‌ರ್‌ಸಿತ್. ಕೈತಾಂಗಿ ಸೀಮೆಣ್ಣೆ ದೀಪ ಬೀತ್. ಕೂಸುದು ಬೊಬ್ಬೆ ಹಂಗೇ ಉಟ್ಟು. ಕಡೆಗೆ ಬೆಂಕಿ ಪಟ್ಣ ಸಿಕ್ತ್. ಹೊತ್ತಿಸಿರೆ ಹೊತ್ತಿದೆಯಾ? ಅದ್ ಶೀತ ಹಿಡ್ದ್ ಕಡ್ಡಿಗೆಲ್ಲಾ ಹಾಳಾದೊ. ಪಟ್ಣದ ಒಂದ್ ಕಡೆದ್ ಮದ್ದೆಲ್ಲಾ ಎದ್ದೋತು. ಇನ್ನೊಂದ್ ಕಡೆಲಿ ಮದ್ ಉಟ್ಟು. ಆ ಭಾಗನ ಅಂಗೈಗೆ ಲಾಯ್ಕ ಉಜ್ಜಿ ಉಜ್ಜಿ ಬಿಸಿ ಮಾಡ್ತ್. ಸಧ್ಯ ಒಂದ್ ಕಡ್ಡಿಗೆ ಜೀವ ಇತ್. ಕಡ್ಡಿ ಹೊತ್ತಿತ್. ದೀಪ ಹೋಸಿತ್. "ತಂಗೆಗೆ ಏನಾತೋ ಏನೋ. ಏನಾರ್ ಹೆಚ್‌ಕಮ್ಮಿ ಆದರೆ ಯಂತ ಮಾಡ್ದು" ಂತ ಹೇಳಿಕಂಡ್ ಅವ್ವು ಮಲಗಿದ ಕಡೆ ಹೋತು. ಅಲ್ಲಿ ನೋಡಿರೆ ಕಥೆ ಬೇರೆ!! ತಂಗೆ ಮಲಗಿದಲ್ಲೆ ಉಟ್ಟು. ಕೂಸು ಮಾತ್ರ ಎದ್ ಕುದ್ದುಟು. ಕೂಸುನ ಕೆಮಿದ್ ಕೊಂಡೊಳಕ್ಕೆ(ರಿಂಗ್‌ಗೆ) ಉಗುರು ಸಿಕ್ಕಿಕಂಡ್ ಕೊತ್ತಿಮರಿ ನೇತಲಾಡ್ದೆ!! ಇವುಳು ಮೆಲ್ಲೆ ಕೊತ್ತಿ ಮರಿದ್ ಉಗುರುನ ಕೆಮಿಂದ ಬುಡ್ಸಿತ್. ಕೂಸುನ ಎತ್ತಿಕಂಡ್ ಸಮಾಧಾನ ಮಾಡ್ತ್. ಇಷ್ಟೆಲ್ಲಾದರೂ ತಂಗೆಗೆ ಮಾತ್ರ ಗೋಚರೇ ಇಲ್ಲೆ.

ಕೊತ್ತಿಮರಿ ಯಂತಕೆ ಹಾಸಿಗೆಗೆ ಹೋತು? ಯಾಕೇಂತೇಳಿರೆ ಈ ಕೊತ್ತಿ ಮರಿನ ಎಲ್ಲಿಂದೋ ಒಂದಿನ ತಂದೊ. ಅದ್ ಸಣ್ಣ ಮರಿಬೇರೆ. ಇರ್‌ಲ್ಲ ಹಗ್ಲೂ ಮೀಂ ಮೀಂತ ಮರ್‌ಡ್‌ತಾ ಇರಕನ ಬೇಜಾರಾದ ಈ ಮನೆ ಗೂಡೆ ಆ ಮರಿನ ತನ್ನ ಹಕ್ಕಲೆ ಮಲಗ್ಸಿಕಂಡತ್. ಹಂಗೆ ಮಲಗಕನ ಆ ಕೊತ್ತಿ ಮರಿ ಇವುಳ ಕೆಮಿನ ಹೀಂಪಿಕಂಡ್ ಮಲಗ್ತಾ ಇತ್. ಈ ಗೂಡೆಗೆ ಆ ಕೊತ್ತಿ ಮರಿದ್ ಗುರುಗುರು ಸದ್ ಇಷ್ಟ. ಬಿಸಿ ಗಾಳಿ ಕೆಮಿಗೆ ಬಡೆಕನ ಇವುಳಿಗೆ ನಿದ್ದೆ ಬಾದು. ಆ ಕೊತ್ತಿ ಮರಿಗೆ ಇವುಳ ಕೆಮಿ ಸಿಕ್ಕಿರೆ ಮತ್ತೆನೂ ಬೇಡ. ಹಿಂಗೆ ಅಭ್ಯಾಸ ಮಾಡಿಕಂಡ ಕೊತ್ತಿಮರಿ ಮಾಮೂಲಿ ಮಲಗುವಲ್ಲಿಗೆ ಬಂದ್ ನಂಟತಿ ಕೂಸುಂತ ಗೊತ್ತಿಲ್ಲದೆ ಈ ಕೂಸುನ ಕೆಮಿಗೆ ಬಾಯಿ ಹಾಕಕನ ಈ ಕೂಸು

ಹೆದರದೆ ಇರ್ದಾ? ಕೊತ್ತಿಗೂ ಗಾಬರಿ ಆಕನ ಅವ್ವ ಕೊಂಡೊಳಕ್ಕೆ ಉಗುರು ಸೆಕ್ಕಿಕಂಡ್ ರಂಪ ರಾಮಾಯಣ ಆಗೋತ್. ಈ "ಡೋಸ್ ಪಾರ್ಟಿಗೆ" ಸಂಗತಿ ಗೊತ್ತಾದ್ ಬೆಳಿಗ್ಗೆ!

ಯಾರೇ ಆಗಲಿ ಕೊತ್ತಿನ ಮಾತ್ರ ಹಾಸಿಗೆಗೆ ಸೇರ್ಸಿಕಾಗದ್. ಚಿಗಟ, ಉಣ್ಣೆಗಳ ಕಾಟ ಸುರು ಆದೆ. ಎಲಿ, ಓಂತಿ, ಹಾವು, ಹರಣೆ ಎಂತ ಸಿಕ್ತ್ ಅದರ್ನೆಲ್ಲಾ ತಂದ್ ತಿಂಬೊದು ಹಾಸಿಗೆಲೇ!! ಕಡೆಗೆ ತಿಂದದ್ ಜಾಸ್ತಿ ಆದರೆ ವಾಂತಿ ಮಾಡ್ದೂ ಅಲ್ಲೇ!

ಯಾವುದ್ ಎಲ್ಲಿರಿಕೋ ಅಲ್ಲಿದ್ದರೇ ಒಳ್ಳೆದಲ್ಲಾ! ನೀವೇನ್ ಹೇಳಿರೆ?



# 10. ಅಪ್ಪಂಗೆ ತರಾ...ಅವ್ವಂಗೆ ಕುರಾ...

'ಏ ಅಕ್ಕ ಗೂಡೆ...., ಓ ಅಕ್ಕ ಕೂಸು....., ಬೋಜಕೀ....' ಹೆಂಗೆ ಕರ್ದರೂ ಆ ಗೂಡೆಗೆ ಗನ್ನೆನೆ ಇಲ್ಲೆ. ಅವುಳು ಮೋಟು ಲಂಗ ಹಾಕ್ಕಂಡ್ ಕೈಲೊಂದ್ ಕೋಲು ಹಿಡ್ಕಂಡ್ ಗಿಡಕ್ಕೆ ಬಡ್ಕಂಡ್ ಪದ ಹೇಳ್ತಾ ಇತ್. ಎಮ್ಮೆ ಆಚೆ ಕಡೆ ಮೇಯ್ತಾ ಉಟ್ಟು. ಈ ಗೂಡೆ ಎಮ್ಮೆ ಮೇಯಿಸಿಕಂಡ್ ಯಂತ ಹೇಳ್ತಾ ಉಟ್ಟುತ ದೊಡ್ಡಪ್ಪ ಕಿವಿಕೊಟ್ ಕೇಳ್ತ್.

ಆಗ ಅವ್ವು "ಅಪ್ಪಂಗೆ ತರಾ.....ಅವ್ವಂಗೆ ಕುರಾ.....ನಂಗೆ ಎಮ್ಮೆ ಪಾರಾ"ಂತ ರಾಗ ಎಳ್ದ್ ಪದ ಹೇಳ್ತಾ ಇತ್. ದೊಡ್ಡಪ್ಪಂಗೆ ಈ ಪದ ಕೇಳಿ ನಗೆ ತಡೆಕೆ ಬೊತ್ತಾತ್. "ಯಂತನೇ ನಿನ್ನ ಪದಾ"ಂತ ಕೇಳಿಕಂಡ್ ಆ ಗೂಡೆನತ್ರ ಹೋಗಿ ನಿಲ್ಲಕನೇ ಗೊತ್ತು! ಆಗ ಆ ಗೂಡೆ "ಉಯೀ ದೊಡ್ಡಪ್ಪಾ"ಂತ ಕುಸೀಲಿ ಕುಣುದಾಡ್ತ್. "ನೀ ಯಂತ ಮಾಡ್ತುನೆ ಇಲ್ಲಿ? ಒಬ್ಬಳೆ ಪದ ಹೇಳ್ತಾ ಒಳ. ಅಪ್ಪ, ಅವ್ವ ಹೆಂಗೊಳೊ"ತ ಕೇಳಕನ ಗೂಡೆ ಹೇಳ್ತ್: "ಅಪ್ಪಂಗೆ ತರಾ, ಅವ್ವಂಗೆ ಕುರಾ, ನಂಗೆ ಎಮ್ಮೆ ಪಾರಾ. ಬನ್ನಿ ಮ ನೆಗೆ ಪೋಯಿ"ಂತ ಹೇಳಿ ಎಮ್ಮೆನ ಹೊಡ್ಕಂಡ್ ಮನೆ ಕಡೆ ಹೊರ್ಟೋ.

ಬೋಜಕ್ಕಿ ಗೂಡೆಗೆ ಒಂದು ಏಳೆಂಟೊರ್ಷ ವಯಸ್ಸಿರ್ದು. ಅವುಳಿಗೆ ಒಬ್ಬ ತಮ್ಮನೂ ಉಟ್ಟು. ಅಪ್ಪಂಗೆ ಜರ ಬುಟ್ ಬುಟ್ ಬಾದು. ಅವ್ವಂಗೆ ಎರಡೂ ಕಡೆ ಕುರ ಎದ್ ಕೂರಿಕೆ ಬೊತ್ತದೆ. ಬೋಜಕ್ಕಿ ಗೂಡೆದ್ ಗೋಳು ನೋಡಿಕೆ ಬೊತ್.

ಒಂದಿನ ಅಪ್ಪ ಕಳ್‌ಕಾಸಿ ಕುಪ್ಪಿಗೆ ತುಂಬಿ ಹುಲ್ಲುಮುಂಡಲಿ ಇಸಿತ್. ಇಸಿಕಾಕನ ಮಕ್ಕಳೊಟ್ಟಿಗೆ: "ಮಕ್ಕಳೇ ನಾವಿಲ್ಲದಿರಕಾಕನ ಕಳ್ ಹಿಡೇಕೆ ಪೋಲಿಸ್‌ಗಿಲೀಸ್ ಬಾವೊ. ಅವು ಬಂದ್ ಕಳ್ ಕುಪ್ಪಿ ಎಲ್ಲಿತ ಕೇಳ್‌ವೊ. ಹುಲ್ಲುಮುಂಡಲಿ ಇಸಿಯೊಳೊಂತ ಹೇಳ್‌ಬೇಡಿ"ತ ಹೇಳ್ತ್. ಒಮ್ಮೆ ಅಪ್ಪ ಅವ್ವ ಇಬ್ಬರೂ ಎಲ್ಲಿಗೋ ಹೋಗಿದ್ದೋ. ಅದೇ ದಿನ ಕಳ್ ಹಿಡೆಕೆ ಪೊಲೀಸ್‌ನವು ಬರೊಕಾ? ಅವು ಬಂದಂಗೆ ಗಡ್‌ಬಡ್ ಸದ್

ಮಾಡಿಕಂಡ್ ಅಲ್ಲಿ ಇಲ್ಲಿ ಹುಡಿಕಿಕೆ ಶುರು ಮಾಡ್ದೊ. "ಏ ಮಕ್ಕಳೆ ಅಪ್ಪ ಕಳ್ ಕುಪ್ಪಿನ ಇಸುದು ಎಲ್ಲಿ"ಂತ ಜಬರ್‌ದಸ್ತ್ ಮಾಡಿ ಕೇಳ್ದೊ. ಆಗ ಈ ಮಕ್ಕ ಹೇಳ್ದೊ "ನೀವು ಎಲ್ಲಿ ಬೇಕರೆ ಹುಡುಕಿ. ಆದರೆ ಹುಲ್ಲುಮುಂಡಲಿ ಹುಡುಕುದು ಬ್ಯಾಡ. ಅಲ್ಲಿ ಮಾತ್ರ ಕಳ್ ಕುಪ್ಪಿನ ಇಸಿತೇ ಇಲ್ಲೆ." ಇನ್ ಕೇಳೊಕಾ? ಪೊಲೀಸ್ ನೆಟ್ಟಂಗೆ ಹುಲ್ಲು ಮುಂಡಕ್ಕೆ ಹೋತು. ಅಲ್ಲಿ ಎರಡ್ ಕುಪ್ಪಿ ಸಿಕ್ಕಿತ್. ಈಗ ಏನ್ ಮಾಡ್ದು? ಮಕ್ಕ ಗೊಳೋಂತ ಮರ್ಡಿಕೆ ಶುರು ಮಾಡ್ದೊ. ಪೋಲಿಸಿಗೆ ಏನಾತೊ? ಈ ಮಕ್ಕಳ ಗೋಳಾಟ ನೋಡಿ ಅಯ್ಯೋ ಪಾಪಂತ ಆತ್. ಹೆಂಗಾರ್ ಸಾಯಲಿತ ಹೇಳಿ "ಇನ್ ಮುಂದೆ ಕಳ್‌ಕಾಸಿಕೆ ಬೊತ್ತ್ ಅಪ್ಪಂಗೆ ಹೇಳೊಕು. ಇನ್ನೊಮ್ಮೆ ಬಾಕನ ಸಿಕ್ಕಿರೆ ಮಾತ್ರ ಕೇಸ್ ಮಾಡದೆ ಬುಡಿಕಿಲೆ." ಹಿಂಗೆ ಹೇಳ್ದ ಪೊಲೀಸ್ನವು ಕುಪ್ಪಿನ ತಕಂಡ್ ಕುಶಿಲಿ ಹೋದೊ ಗಡ.



# 11. ಅಪ್ಪನ ರಂಪಾಟ

**ಪೇಟೆಗೆ** ಅಪ್ಪ ನನ್ನನೇ ಕರ್ಕಂಡೋದು. ಅಕ್ಕಯ್ಯ ಮರ್ಟರಲ್ಲ ಏನ್ ಮಾಡಿರೂ ಕರ್ಕಂಡೋದ್ಲೆ. ಯಾಕೆತ ನಂಗೆ ಈಗ ಗೊತ್ತಾತ್. ಅಪ್ಪ ಪೇಟೆಲಿ ನನ್ನನ-ನಿಂಗೆ ಅದ್ ಬೇಕಾಮನೆ, ಇದ್ ಬೇಕಾಮನೆತ ಕೇಳ್ದು. ನಾನ್ ಬ್ಯಾಡ ಬ್ಯಾಡತ ಹೇಳ್ದು. ಅಕ್ಕಯ್ಯ ಮಾತ್ರ ಅದ್ ಬೇಕ್, ಇದ್ ಬೇಕ್‌ತ ಹಟ ಮಾಡ್ದು. ಅದಿಕೆ ನನ್ನನ ಕರ್ಕಂಡೋದರೆ ದುಡ್ಡು ಖರ್ಚೆ ಇಲ್ಲೆ. ಹೆಗ್‌ಲ್‌ಲಿ ಕೂರ್‍ಸಿಕಂಡ್ ನನ್ನನ ಕರ್ಕೊಡೋಗ್ತಿತ್.

ಹಟ್ಟಿಲ್ಲಿದ್ದ ದೊಡ್ಡ ದೊಡ್ಡ ಎತ್‌ಗಳ ಮಾರುದು, ಲಾಚಾರಾದ ಎತ್‌ಗಳ ಕ್ರಯ ಕೊಟ್ ತಾದು, ಇದೇ ಅಪ್ಪನ ಕೆಲ್‌ಸ. ಅದೊಂದಿನ ನಂಗೆ ಸರಿಯಾಗಿ ಗ್ಯಾನ ಇಲ್ಲೆ, ಗೋಣಿಕೊಪ್ಪಲಿ ದನದ ಸಂತೆ. ಎತ್ ತರೋಕುತ ಎಪ್ಪತ್ ರೂಪಾಯಿನ ಜೋಬಿಗೆ ತುರ್ಕಿಕಂಡ್ ನನ್ನ ಹೆಗ್‌ಲ್‌ಲಿ ಕೂರ್‍ಸಿಕಂಡ್ ಹೊತಾರೆ ಚುಮಿ ಚುಮಿ ಬೆಳಕ್ ಇರ್ಕನೇ ಹೊರ್ಟತ್. ಹಾದಿ ಉದ್ದ ನೀನ್ ಹಂಗೆ ಆಕು ಹಿಂಗೆ ಆಕುತ ಅಪ್ಪ ಹೇಳ್ದಂಗೆ ನಾನ್ ಆತ್ ಆತ್‌ತೇ ಹೇಳ್ತಿದ್ದೆ.

ಮಾರ್ಕೆಟಿಗೆ ಹೋದೊ. ಮೂಡಿಸಿಮೆವು ನೋಡೊಕು, ಎತ್‌ಗಳ್ಗೆ ಚಟೀರ್ ಪಟೀರ್‌ತ ಹೊಡ್ದ್ ಓಡ್ಸುದು! ಎತ್‌ಗ ಆಗ ಬಾಲ ಎತ್ತಿಕಂಡ್ ಓಡ್ತಿದ್ದೊ. ಅಪ್ಪಂಗೆ ಕುಸೀ ಆಗಿ ಪಟಯ ಎತ್‌ನ ಯಾಪಾರ ಮಾಡ್ತ್. ದಳ್ಳಾಳಿಗ ಅಪ್ಪನ ಸುತ್ತ ಮುತ್ತ ಬಂದ್ ಮುತ್ತಿಕಂಡೊ. ಒಬ್ಬಂತೂ ತಬ್ಬಿಕಂಡತ್. ಹೆಂಗಾರ್ ಮಾಡಿ ದುಡ್ಡು ಚೊಟ್ಟೊಕಲೇ, ಹಂಗೂ ಹಿಂಗು ಯಾಪಾರ ಆತ್. ಅಂವ ಎತ್‌ನ ಅಪ್ಪನ ಕೈಗೆ ಕೊಡಿಕೆ

ಮುಂದೆ ಸೊಲ್ಪ ಹುಲ್ಲು, ಸಗ್‌ಣಿ ತಕ್ಕಂಡ್ ಎತ್‌ನ ಸುತ್ತತಂದ್ ಬಿಸಾಕಿ ಬಳ್ಳಿನ ಅಪ್ಪನ ಕೈಗೆ ಕೊಟ್ಟುತ್. ಅಪ್ಪನ ಕೈಲಿ ಎತ್‌ನ ಬಳ್ಳಿ. ಹೆಗ್‌ಲ್ ಮೇಲೆ ನಾನ್.

ಮನೆಗೆ ಎತ್‌ಕನ ಮಯಮಯ ಕತ್ತಲೆ ಆಗಿತ್. ಅವ್ವ ಅಕ್ಕಯ್ಯ ನಮ್ಮನೇ ಪಾರಕಾಯ್ತಿದ್ರೊ. ಕೆಂಜು ನಾಯಿ ಎತ್‌ನ ಸುತ್ತ ಸುತ್‌ಕನ ಎತ್ 'ತಪಕ್'ತ ಒದ್ದುತ್. ಆ ಒತ್ತಕ್ಕೆ ನಾಯಿ ಸಗ್‌ಣಿ ಗುಂಡಿಗೆ ಹಾರಿ ಬೀತ್. ಇಲ್ಲಿಂದ ಸುರಾತ್ ಎತ್‌ನ ಕತೆ. ಅವ್ವಂಗೆ ಹೊಸ ಕೆಲ್‌ಸ ಸುರು. ಮಕ್ಕಳ ಇಸ್ಕೂಲಿಗೆ ಕಳ್ಸೊಕು, ಪಟಯ ಎತ್‌ನ ಜುಲಾಬಿಗೆ ಮದ್ ಕೊಡೊಕು, ಬೋಳಿ ಬುಡ್ಕನ ಅಪ್ಪ ಊಡಿಕೆ ಹೋಕನ ಅವ್ವನೂ ಒಟ್ಟಿಗೆ ಹೋಕು. ಇಲ್ಲರೆ ಅಪ್ಪನ ಸಿಟ್ ನೆತ್ತಿಗೇರ್ತು. ಗದ್ದೆಲಿ ನೊಗದ ಯಡ್ದ ಭಾಗಕ್ಕೆ ಪಟಯನ, ಬಲ್ದ ಭಾಗಕ್ಕೆ ಚೆನಿಯನ ಕಟ್ಟಿದ ಮೇಲೆ ಅವ್ವ ಮನೆಗೆ ಬಾದು.

ಒಂದಿನ ಸಾಂಯ್ಕಾಲ ಅಪ್ಪ ಏನ್ ಮಾಡ್ತ್ ಗೊತ್ತುಟಾ? ಸೊಲ್ಪ ಹರ್‌ಳೆಣ್ಣೆ, ಬಿಳಿ ಬಟ್ಟೆ, ಬೆಂಕಿಪಟ್ನ ತಕ್ಕಂಡ್ ಹಟ್ಟಿಗೋತು. ನಾನು ಕೊತ್ತಿಮರಿ ಹಾಗ್ಗಂಗೆ ಹಾರಿಕಂಡ್ ಹೋಗಿ ಮರೇಲಿ ನಿತ್‌ಕಂಡೆ. ಅಪ್ಪ ಪಟಯ ಎತ್‌ನ ಕೊಂಬಿಗೆ ಬಟ್ಟೆ ಸುತ್ತಿ ಕೊಡಿಂದ ಯಣ್ಣೆ ಹೊಯ್ತ್, ಬೆಂಕಿ ಕಡ್ಡಿ ಗೀರಿ ಬೆಂಕಿ ಕೊಟ್ಟುತ್. ಆಗ ಆ ಕೊಂಬು ಪಟ್ಟೆ ಪಟ್ಟೆಕಾಂಬೊದು. ನಂಗೆ ಪುಕು ಪುಕುತ ಆತಿತ್. ಕೊಂಬುಲಿ ಬೆಂಕಿ ಹೊತ್ತಿದೆ. ಅಪ್ಪನ ಕತೆ ಎಂತತ ಗ್ಯಾನ ಮಾಡ್ದೆ. ಗೊತ್ತಾತ್‌ಲೆ. ಅಪ್ಪನೇ ಕೇಳ್ನೊತೇಳ್ರೆ ಊಡ್‌ವ ಕೋಲ್‌ಲೆ ಬಾರ್ಸಿರೆ ಏನ್ ಮಾಡ್ತು? ಅವ್ವನ ಕೇಳ್ದೆ. ಆಗ ಅವ್ವ ಹೇಳ್ತ್ "ಎತ್ ಹಲ್‌ನ ಮುದ್ದೆ ಮುದ್ದೆ ಉಗ್ದದೆ. ಅದಿಕೆ ಹಲ್ ಗಟ್ಟಿ ಇಲ್ಲೆ. ಕೊಂಬು ಕಾಸಿರೆ ಗಟ್ಟಿ ಆದೆತ ಯಾರೋ ಹೇಳ್ದೊಗಡ! ಅದಿಕೆ ಅಪ್ಪ ಎತ್‌ನ ಕೊಂಬಿಗೆ ಬೆಂಕಿ ಕೊಟ್ಟದ್"ತ ಅವ್ವ ಹೇಳ್ತ್. ಅಲ್ಲ ಗ್ಯಾನ ಮಾಡಿ. ಆ ಎತ್ ಎಷ್ಟ್ ಕಷ್ಟಪಟ್ಟಿರ್ದು. ಹೊತಾರೆ ನೋಡ್ದೆ. ಕೊಂಬು ಕಪ್ಪಾವುಟ್ಟು. ಹೊಟ್ಟೆಲಿದ್ದ ಸಗ್‌ಣಿನ ಬುಕ್ಕಿ ಬುಕ್ಕಿ ಹಾಕಿಟು. ಎತ್‌ಗೆ ನಿಲ್ಲಿಕೂ ಆದುಲೆ ಮಲ್ಗಿಕೂ ಆದುಲೆ. ಅಷ್ಟ್ ತುಂಡಾಗಿ ಕಟ್ಟಿರೆ ಹೆಂಗೆ ಮಲ್ಗುದು?

ಇದಾಗಿ ಹದ್ನೈದ್ ದಿನ ಆಗಿರ್ದು, ನಾನ್ ಅಕ್ಕಯ್ಯ ಇಸ್ಕೂಲಿಗೆ ಹೋಗಿ ಮನೆಗೆ ಬಂದರೆ ಅವ್ವಪ್ಪ ಇಬ್ಬರೂ ಮನೆಲಿಲ್ಲೆ. ಹಟ್ಟಿಕಡೆ ಸದ್ದಾದಂಗೆ ಆತ್. ನಾವು ನೆಟ್ಟಂಗೆ ಹಟ್ಟಿಗೋದೊ.ಅಲ್ಲಿ ನೋಡ್ರೆ ಅವ್ವ ಎತ್‌ನ ಬಾಲ ಹಿಡ್ತ್ ಎಳ್ದದೆ, ಅಪ್ಪ ಕೊಂಬುನ ಎಳ್ದದೆ, ಎತ್ ಮಾತ್ರ ಮಸ್‌ಗುದುಲೆ! ಕೆಂಜು ನಾಯಿಗೆ ಕುಸಿಯೋ ಕುಸಿ. ಅದ್ ಅತ್ತೊಮ್ಮೆ ಇತ್ತೊಮ್ಮೆ ಬೊಕ್ ಬೊವ್‌ತ ಹಾರಾಡ್ದೆ. ಅಪ್ಪ ಅಂಬಟ್ಟೆ ಕಚ್ಚಿಕಂಡ್ "ಏಳ್ ಏಳ್ ನಿನ್ನ ಬಾಯಿಗೆ"......ತೇಳ್ಕಂಡ್ ಎತ್ತಿದೆ. ಅದೆಲ್ಲಿ ಎದ್ದದೆ, ಕಾಲ್ಕೈಗೆ ಕೋಟ ಹತ್ತಿಟು. ನಂಗೆ ಒಂದ್ಕಡೆಂದ ಕುಸೀ ಆತ್. ಯಾಕೆ ಗೊತ್ತುಟಾ? ಎತ್ ಸತ್ತರೆ ಜಡ್ ತಿಂಬಕೆ ಹದ್‌ಗ ಬಂದವೆ, ಆಗ ಹದ್‌ಗಳಿಗೆ ಕಲ್ ಹೊಡಿಯಕ್, ಜಡ್ ತಿಂಬಕೆ ನಾಯಿಗ ಕಚ್ಚಾಡ್‌ಕನ ದೊಣ್ಣೆ ತಕಂಡ್ ಬಡಿಯಕ್‌ತ.

ಅಪ್ಪ ಮನೆಗೆ ಹೋಗಿ ಕೈಕಾಲ್ ತೊಳ್ದ್ ನಾಕಾಣೆ ಪಾವುಲಿನ ಬೆಳಿ ಬಟ್ಟೆಲಿ ಕಟ್ಟಿಕಂಡ್ ಹಟ್ಟಿಗೆ ಬಾತ್. ಕಾಲ್ ಜೋಡ್ಸಿಕಂಡ್ ಹರಿಕೆ ಹೇಳಿಕೆ ಸುರು ಮಾಡ್ತ್. "ಸಾಮಿ ಅಂಗರಂಗೆ ಹೇಳ್ಕಂಬೊದು ಏನ್‌ತೇಳ್ರೆ-ನೀನ್ ನೋಡ್ತ್ಂಗೆ ಎತ್ ಅಡ್ಡ ಬಿದ್ದೋವುಟು. ನಿನ್ನ ಹೆಸ್ರ್‌ಲಿ ಹಣ್ಕಾಯಿ ಮಾಡ್ತವೊಳೆ. ಮೀದ ನೀರ್‌ಲಾಗಲಿ, ಒಡ್ಡ ಕಾಯಿಲಾಗಲಿ, ಮುರ್ದ ಬಾಳೆಹಣ್‌ಲಾಗಲಿ ತೊಪ್ಪ ಇರ್ದು, ಆದ ತೊಪ್ಪನೊಪ್ಪ ಪಾಲ್ಸಿಕಣೋಕು. ಚೆನಿಯ ಎತ್ ಇನ್ನೂ ಬಾತ್‌ಲೆ, ಅದರ ಹಟ್ಟಿಗೆ ಬರ್‌ವಂಗೆ ಮಾಡೋಕು, ಹುಲಿ ಬಾಯಿಗೆ ಸಿಕ್ಕಿರೂ ಕಾಪಾಡ್ಬ ಬಾರ ನಿಂದ್. ದನಕರ್‌ಗ ಹೋದಲ್ಲಿ ಬಂದಲ್ಲಿ ಸುಖಮುಖ ಕೊಡೊಕು. ಬಂದ ಕಷ್ಟ ಬಂದೋತು, ಇನ್ ಬಾಕೆ ಬೊತ್, ಈ ನಾಕಾಣೆ ಹಣಲಿ ನೀನ್ ಹಿಡ್ದ್ ನಿಲ್ಲೊಕು. ಸಾಮೀ..."ಂತೇಳಿ ಸೂರಿಗೆ ಕಟ್ಟಿತ್. ಅಪ್ಪನ ಹೇಳಿಕೆ ಮುಗಿಯಕನ ಅವ್ವ ಸಣ್ಣ ಮೆಣ್ಸ್‌ನ ಅರ್ದ್ ತಾತ್.

ಸಣ್ಣ ಮೆಣ್ಸ್‌ನ ಬೆದರ್ ಗೊಟ್ಟಕೆ ತುಂಬಿಸಿ ಎತ್‌ನ ಬಾಯಿ ಬುಡ್ಸಿ ಹೊಯ್ದೊ. ಸೊಲ್ಪ ಹೊತ್ತಿಗೆ ಎತ್ ಕೆಬಿ ಆಡ್ಸಿತ್. ಆಗ ಹಿಡಿಬಡಿತ ಹೇಳಿ ಏನೇನೋ ಮಾಡ್ಕನ ಎತ್ ಎದ್ ನಿಲ್ಲೊಕಾ? ನಿತ್ತ ಎತ್ ಉರಿ ತಡಿಯಕಾಗದೆ ಚೊರೋತ ಉಚ್ಚೆ ಹೊಯ್ತ್. ನಂಗೆ ಬೇಜರಾತ್. ನಾ ಮೊಕ ಪೂಜಿಕಂಡ್ ಮನೆಗೆ ಹೋದೆ.

ಮಾರ್ನೆ ದಿನ ಚೆನಿಯ ಎತ್ ಹಟ್ಟಿಗೆ ಬಾತ್. ಅದರ ಬೆನ್ ನೋಡ್ರೆ ಪೂರಾ ಬರೆ ಹಂಗಂಗೇ ಕಂಡದೆ. ಯಾರ ಗದ್ದೆಗೆ ಹೋಗಿತ್ತೊ ಏನೋ. ಕಟ್ಟಿ ಹಾಕಿ ಸಮಾ ಬಡ್ದೊಳೊ.

ನಾನ್ ಕಾಯಿ ತಕ್ಕಂಡ್ ಅಂಗರನ ಕಲ್ಲಿಗೆ ಹೊಡ್ದ್ ನೀರ್‌ನ ನಾನೇ ಕುಡ್ದೆ. ಒಂದ್ ಚೂರು ಕಾಯಿನ ಕಲ್‌ಲೇ ಇಸಿದೆ. ಕಡೇಲಿ ಬಂದ್‌ತಿಂದನೆತ ಗ್ಯಾನ ಮಾಡ್ಕಂಡ್ ಅಷ್ಟ್ ದೂರ ಹೋಗೊಳೆಯೋ ಇಲ್ಲೆಯೋ ಆ ಕೆಂಜು ನಾಯಿ ಕಾಯಿಚೂರ್‌ನ ತಿಂದ್ ಅದೇ ಕಲ್ಲಿಗೆ ಉಚ್ಚೆ ಹೊಯಿದ್‌ಬುಡೊಕಾ? ಛೇ! ಅಂಗರನ ಕಲ್ಲಿಗೆ ಅದ್ ಅಶುದ್ಧ ಮಾಡ್ತಲೆ. ನಾನ್ ಕಲ್‌ನ ತೊಳ್ದರೆ ನಾಯಿ ಹಿಂಗೆ ಮಾಡ್ತಲೆ, ದೇವ್ರುನ ಬಯ್ಕಂಡೆ-ಸಮಧಾನ ಆತ್. ಯಾಕೆತೇಳ್ರೆ ಅದರನ್ನೆಲ್ಲ ದೇವ್ರು ಮರೇಲಿ ನೋಡ್ದೆ. ಎದ್ರಿಗೆ ಅದ್ ಬಾದುಲೆ! ಅಂದೂ ಅಷ್ಟೆ-ಇಂದೂ ಅಷ್ಟೆ. ದೇವ್ರು ಎದ್ರಿಗೆ ಬಾತೂ ಇಲ್ಲೆ, ಅದ್ ಬಾಕೂ ಇಲ್ಲೆ!



# 12. ಅಣ್ಣ ತಮ್ಮ

**ಕೊದಿಕೂಸಿಗೆ** ಮೂವತ್ತೆರಡ್ ವರ್ಷ ದಾಟಿ ಮೂವತ್ಮೂರು ನಡಿತಾ ಉಟ್ಟು. ಕೊದಿ ಕೂಸುಂತೇಳಿರೆ ಸುರೂನ ಕೂಸು. ಈ ಕೂಸು ಹುಟ್ಟಿದ ಮಾರ್ನೆ ವರ್ಷ ಎರಡ್ನೇ ಕೂಸು ಹುಟ್ಟಿತ್. ಈ ಎರಡ್ನೇ ಕೂಸಿಗೂ ಈಗ ಮೂವತ್ತೊಂದ್ ದಾಟಿ ಮೂವತ್ತೆರಡ್ ವರ್ಷ! ಇಬ್ಬರೂ ಬೆಣ್ಣೆ ಮುದ್ದೆ ಹಂಗೆ ಬೆಳ್ದೊ. ಮನೆಯವು ಅತ್ತ ಬಡವೂ ಅಲ್ಲದ ಇತ್ತ ಸಿರಿವಂತರೂ ಅಲ್ಲದವು. ಇಡೀ ವರ್ಷ ಹಾರ್ಲಿಕ್ಸ್, ಫೆರಕ್ಸ್ ತಿನ್ನದಿದ್ದರೂ ಒಂದೆರಡ್ ತಿಂಗ ತಿಂದ ಮಕ್ಕ ಅವು. ಅಂತೂ ಆರಕ್ಕೆ ಏರದ ಮೂರಕ್ಕೆ ಇಳಿಯದ ಸ್ಥಿತಿಲಿ ಬದ್‌ಕ್‌ತಾ ಇದ್ದೊ.

ಸುರೂನ ಹೈದಂಗೆ ತೊಟ್ಲ್ ಹೆಸ್‌ರ್ ಪ್ರಸಾದಂತ. ಬಟ್ಲ್ ಹೆಸ್‌ರ್ 'ಪಚ್ಚಾಂತ'. ಬಟ್ಲ್ ಹೆಸ್‌ರ್‌ತೇಳಿರೆ ಅಡ್ಡ ಹೆಸ್‌ರ್. ಎರಡ್ನೇ ಹೈದಂದ್ ತೊಟ್ಲ್ ಹೆಸರ್ ಕುಶಾಲಪ್ಪ. ಬಟ್ಲ್ ಹೆಸ್‌ರ್ 'ಕುಪ್ಪ'. ಪ್ರಸಾದ-ಪಚ್ಚ, ಕುಶಾಲಪ್ಪ-ಕುಪ್ಪ! ಆಹಾ! ಪಚ್ಚನೂ ಕುಪ್ಪನೂ ತಿಂದ್‌ಕಂಡ್ ಕೊಣ್ಕಂಡ್ ಒಟ್ಟಿಗೇ ಬೆಳ್ದೊ. ಸಾಮಾನ್ಯಾಗಿ ಸುರೂನ ಮಕ್ಕ ಸಾಧುಗಾಗಿದ್ದವೆ. ಹಂಗೆ ಸುರೂನ ಹೈದ ಪಚ್ಚ ಪರಮ ಸಾಧು. ಯಂತ ಬೇಕಾರೂ ಅವ್ವನಕ್ಕಲೆ 'ಪಿಸಿ ಪಿಸೀಂತ' ಹೇಳ್ವಲ್ಲದೆ ಅಪ್ಪನಕ್ಕಲೆ ಯಂತನೂ ಹೇಳಿಕಿಲ್ಲೆ. ಯಾಗಾಗರೊಮ್ಮೊಮ್ಮೆ ಅಪ್ಪನಕ್ಕಲೆ ಏನಾರ್ ಮಾತಾಡಿರೂ ಅಂವನ ಮಾತ್ ಅವಂಗೇ ಕೇಳಿಕಿಲ್ಲೆ. ಒಳ್ಳ ಮಾತಾಡೊಕುಂತ ಇಂವ ಮಾತಾಡಿರೂ ದೊಂಡೆಂದ ಜೋರಾಗಿ ಹೊರ್ಟ್‌ಮಾತ್ ಬಾಯಿಗೆ ಬಾಕನ ಮೆಲ್ಲ ಆಬುಡ್‌ತಿತ್. ಆದರೆ ಇಂವನ ತಮ್ಮ 'ಕುಪ್ಪ' ಹಂಗಲ್ಲ. ಹಣ್ಣ ಚುರುಕು ಜಾಸ್ತಿ. ಅಪ್ಪ ಒಂದ್ ಹೇಳಿರೆ ಇಂವಂದ್ ನಾಕ್ ಹೇಳಿ ಆಗಿದ್ದದೆ. ಹತ್ ರೂಪಾಯಿ ಮನಿ ಕೊಟ್ ಅಂಗ್ಡಿಗೆ ಕಳ್ಸಿರೆ ಇಂವ ಹನ್ನೆರಡ್ ರೂಪಾಯಿದ್ ಸಾಮಾನ್ ತಕ್ಕಂಡ್ ಬಾಕಿ ಎರಡ್ ರೂಪಾಯಿ 'ಪಿನ್ನೆ ಕೊಡ್ಕಂತ' ಹೇಳಿ ಮತ್ತೆ 'ಕೈ ಕೊಡುವ' ಪೈಕಿ! ಆದರೆ ಹಿರಿ ಮಜ ಪಚ್ಚ ಹಂಗಲ್ಲ. ಹತ್ ರೂಪಾಯಿ ಕೊಟ್ಟರೆ ಎಂಟ್ ರೂಪಾಯಿದ್ ಸಾಮಾನ್ ತಕ್ಕಂಡ್ ಎರಡ್ ರೂಪಾಯಿನ ಅಲ್ಲೇ ಬುಟ್ 'ಪಿನ್ನೆ ಕೊಡ್ಡಿಂತ' ಹೇಳಿ ಬರುವ ಪೈಕಿ!

ಇಬ್ಬರೂ ಹೈಸ್ಕೂಲ್ ಹತ್ತನೇ ಕ್ಲಾಸ್ ಮುಟ್ಟ 'ಧಂ ಕಟ್ಟಿ' ಮುಟ್ಟಿದೊ. ಚಡಾವ್ ಹತ್ತಕನ ಗಾಡಿ ಹಿಂದಕ್ಕೆ ಬಂದದಲ್ಲ, ಆಗ ಚಕ್ರಕ್ಕೆ ಕಟ್ಟೆಕೊಟ್ಟರೆ ನಿತ್ತದೆ ನೋಡಿ ಹಂಗೆ ಹತ್ತನೇ ಕ್ಲಾಸ್‌ಲೇ ನಿತ್ ಬುಟ್ಟೊ. ಚಕ್ರಕೆ ಕೊಟ್ಟ ಕಟ್ಟೆನ ಎಳ್ದರೆ ಗಾಡಿ ಹಿಂದಕೆ ಬರುವ ಹಂಗೆ ಎರಡ್ ಹೈದಂಗಳೂ ಸ್ಕೂಲ್‌ಬುಟ್ ಮನೆ ಸೇರಿಕಂಡೊ. ಮನೆಲಿ ಅಪ್ಪಂದ್ ಗಡು ಗುಡು ಸುರಾತ್. ಮನೆ ಬುಟ್ ಪೋಯಾಂತ ಹೈದಂಗ ಗ್ಯಾನ ಮಾಡ್ಪೊ. ಆದರೆ ಎಲ್ಲಿಗೇ ಹೋಗಲಿ, ಹಾಳಾದವು 'ನೀ ಎಟ್ ಒದ್ಯೊಳಾಂತ' ಕೇಳಿವೆ. ಇಷ್ಟ ಕಮ್ಮಿ

ಓದಿಕಂಡ್ ಹೊರಗೆ ಹೋದರೆ ಮೂಸವು ಯಾರೊಳೋ? ಛೇ, ಯಂತ ಮಾಡ್ದುತ ಹೈದಂಗ ತಲೆ ಬೆಚ್ಚ ಮಾಡಿಕೊಂಡೊ. ಕಡೆಗೆ ಗ್ಯಾನ ಮಾಡ್ರೊ: ಎತ್ತಳೂ ಹೋದು ಬ್ಯಾಡ. ನಮ್ಮ ಜಾಗಲೇ ಎದೆ ಮುರ್ಯನೊ. ಅವುಕೆ ಇವುಕೆ ಯಂತಕೆ 'ಸಲಾಂ' ಹೊಡೆಕು? ಏನ್ ಹೇಳಿಯರಾಂತ ತಮ್ಮ ಅಣ್ಣನ ಕೇಳ್ತ್. ಆಗ ಅಣ್ಣ ಹೇಳ್ತ್" ಅದೇ ಸರಿತ ನಂಗೂ ಕಂಡದೆ, ನಾವಿಲ್ಲೇ ಗೆಯ್ಯನೊ." ಹಿಂಗೆ ಹೇಳಿಕಂಡ್ ಮಕ್ಕ ಅವ್ವನ ಬಾಡಿಕಂಡ ಮೊಕ ನೋಡಿ ಬೇಜಾರ ಮಾಡಿಕಂಡೊ. ಅವ್ವನಕ್ಕಲೆ ಹಿಂಗೆಂಗವ್ವಾ ಹಿಂಗಿಂಗೆ, ನಾವೆಲ್ಲೂ ಹೋದುಲೆ. ನಿಮ್ಮೊಟ್ಟಿಗೇ ಇದ್ದವೆಂತ ಹೇಳ್ರೊ. ಅವ್ವಂಗೆ ಕುಸೀ ಆತ್. ಏನಾರಾಗಲಿ ಮಕ್ಕ ಮನೆ ಬುಟ್ ಹೋದುಲಲೆಂತ ಮನ್ಸೊಳಗೇ ನಗಾಡಿಕಂಡ್ ಒಂದೆರಡ್ ಧಂ ನಶ್ಯ ಸೇದಿತ್. ಹಿಂಗಿರಕನ ಅಪ್ಪ ಸಿಡಿಸಿಡಿ ಆಡಿಕಂಡ್ ಒಳಗೆ ಹೊರಗೆ ಓಡಾಡ್ತ್. ಹೈದಂಗ ಕತ್ತಿಕೊಟ್ ತಕ್ಕಂಡ್ ಗದ್ದೆತೋಟ ಕಡೆ ಹೋದು ನೋಡಿ 'ಸಧ್ಯ ಮಕ್ಕಳಿಗೆ ಬುದ್ಧಿ ಬಾತಲ್ಲ'ತ ಗ್ಯಾನ ಮಾಡಿಕಂಡ್ ಬೀಡಿ ಹೋಸಿ ಹೊಗೆ ಬುಟ್ಟತ್.

ಅಪ್ಪ ರಭಸದ ಜನ. ಯಂತ ಮಾತಾಡಿರೂ 'ಕಡ್ಪ' ಮಾತಾಡ್ದು. ಸಮಾಧಾನದ ಮಾತೇ ಆಡಿಕಿಲ್ಲೆ. ಹಂಗಾಗಿ ಅವ್ವನೂ ಅಪ್ಪನಕ್ಕಲೆ ಹೇಳಿಕೆ ಹಿಂದೆ ಮುಂದೆ ನೋಡ್ದು. ಅಪ್ಪ ಯಾಗೋಳು ಪಿರಿಪಿರಿ. ಸೌದೆ ಆತ್ಲೆ, ಕೋಳಿ ಗೂಡಾತ್ಲೆ, ಹಂದಿ ಗೂಡು ಕಟ್ರೊಕು, ಸಾಲಕ್ಕೆ ಬರಿಯೊಕು, ದನದ ಹಟ್ಟಿ ಬೀಳಿಕಾವುಟು. ಮಳೆಗಾಲಲಿ ಬಿದ್ದರೆ ಸರಕಾರ ನಷ್ಟ ಪರಿಹಾರ ಕೊಟ್ಟದೆ ಗಡಾ. ಇದೇ ಪದ ಅಲ್ಲದೆ ಹೊಸ ಟೇಪು ಅಪ್ಪನಕ್ಕಲೆ ಇಲ್ಲೆ.

ಒಂದಿನ ನಡೂ ಮಳೆಗಾಲಲಿ ಹಟ್ಟಿದ್ ಒಂದ್ ಕಂಬ ಲಟಕ್‌ತ ಹೇಳ್ತ್. "ಬನ್ನಿನೆ ಮಕ್ಕಳೆ ಹೊಸಾ ಕಂಬ ಹಾಕನೊ"ಂತೇಳಿ ಅಪ್ಪ ಕರ್ತ್. ಕಾಡಿಗೆ ಹೋಗಿ ಹೊಸಾ ಕಂಬನ ಕಡ್ಕಂಡ್ ಬಂದೊ. ಮಳೆ ಬೇರೆ ಜೊರೋಂತ ಸುರಿತಾ ಉಟ್ಟು. ಸರಿ, ಗುಂಡಿ ತಗ್ರೊ. ಅಪ್ಪ ಗುಂಡಿಗೆ ಕಂಬ ಇಳ್ಸಿಕೆ, ಮಕ್ಕ ಹಟ್ಟಿದ್ ಅಡ್ಡ ಪಟ್ಟಿನ ನೇಚಿಕೆ ಸುರು ಮಾಡ್ರೊ. ಹಿಂಗೆ ನೇಚಿಕಾಕನ ಅಡ್ಡಪಟ್ಟಿ ಕುಂಬಾಗಿತ್ತೇನೋ ಲಟಕ್‌ತ ನಡೂಂದ ಮುರ್ತ್. ಹಂಗೆ ಮುರೆಕಾಕನ ಗಳುಗಿಳೆಲ್ಲಾ ಲಡಬಡಾಂತ ಮುರ್ಕಂಡ್ ಬೀತ್. ಒಂದ್ ಕಡೆದ್ ಹಂಚಿ ಬಿದ್ ಚಾರ್ ಚೂರಾತ್. ಅಪ್ಪನ ಬೆನ್ ಮೇಲೆ ಒಂದೆರಡ್ ಹಂಚಿ ಬೀತೋ ಇಲ್ಲೆಯೋ ಓಡಿನೇ ಮಕ್ಕಳೇಂತೇಳಿಕಂಡ್ ಅಪ್ಪ ಹಟ್ಟಿಂದ ಹೊರಗೆ ಬಾತ್. ಎರಡನೇ ಮಜ ಕುಪ್ಪ ಸುರುಲೇ ಹಾರಿಬಿದ್ ಓಡಿಬುಟ್ಟುಟು. ಆದರೆ ಪಚ್ಚ ಮಾತ್ರ ಒಳಗೆ ಪಚ್ಚಡಿ ಆದಂಗಾಗಿ ಅಯ್ಯೋಂತ ಹೇಳ್ತಾ ಇರಕನ ಅಪ್ಪ ಮಜ ಸೇರಿ ಎಳ್ರೊ. ಮಳೆ ಮಾತ್ರ ಜೋರೋಂತ ಸುರಿತನೇ ಇತ್. ಹಟ್ಟಿದ್ ಭಾರ ಒಂದೇ ಕಡೆ ಆತ್. ನೋಡಿಕಂಡ್ ನೋಡಿಕಂಡ್ ಇದ್ದಂಗೆ ಇಡೀ ಹಟ್ಟಿ ಬಸ್ಕಂತ ಕಂಪರ ಮಲ್ಗಿತ್. ಕೆಲವು ಎತ್‌ಗ ಗದ್ದೆಲಿ ಊಡಿಕೆ ಬಾರದೆ ಕಳ್ಳಚಾಲ್ ಮಾಡಿವೆಯಲ್ಲ, ನೀರೊಳಗೆ ಕಂಪರ ಮಲಿಗಿವೆಯಲ್ಲ ಹಂಗೆ ಹಟ್ಟಿ ಮಲ್ಗಿಬುಟ್ಟತ್.

ಹಟ್ಟಿ ಬಿದ್ದೋತು. ಅವ್ವಂಗೆ ಬೇಜಾರಾತ್. ಅಪ್ಪಂಗೆ ಕುಸೀ ಆದಂಗೆ ಆತ್. ಹೈದಂಗಳಿಗೆ ಆ ಮಳೆಲಿ ಚೆಂಡಿ ಆದೇ ಬಾತ್. ಅಪ್ಪ ಹೇಳ್ತ್: "ಆದೆಲ್ಲಾ ಆತ್. ನಾಳೆನೆ ಒಂದ್ ಅರ್ಜಿ ಬರೆನಿನೆ. ಸರಕಾರದವು ನಷ್ಟ ಪರಿಹಾರ ಕೊಟ್ಟವೆ ಗಡ. ನಾ ಹೋಗಿ ಮಾಡ್ಸಿಕಂಡ್ ಬನ್ನೆ"ಂತೇಳಿಕಂಡ್ ಬೀಡಿ ಸೇದಿ ಬುಗ್ ಬುಗೂಂತ ಹೊಗೆ ಬುಟ್ಟತ್.

ಹೈದಂಗ ಇಬ್ಬರೂ ಕೂಡಿಕಂಡ್ ಅರ್ಜಿ ಬರ್ದ್ರೊ. ಅರ್ಜಿ ಸರಿ ಉಟ್ಟೋ ಏನೋ ತೋರ್ಸಿಬುಡ್ನೋಂತೇಳಿ ಅಡ್ಡೆ ಮನೆ ಬಾಗ್‌ಲ್‌ಂದ ಹೊರಗೆ ಓಡ್ರೊ. ಓಡ್ದವು ನಿತ್ತದ್ ಸೋಂಪಣ್ಣನ ಅಂಗ್ಡಿ ಹತ್ರ. "ಸೋಂಪಣ್ಣ ಸೋಂಪಣ್ಣ ಈ ಅರ್ಜಿ ಸರಿ ಉಟ್ಟಾ ನೋಡಿ ಕೊಡಿ, ಮನೆಲಿ ಅಪ್ಪ ಲಡಾಯಿ ಮಾಡ್ತಾ ಉಟ್ಟು" ಅಂಗ್ಡಿ ಸೋಂಪ ಅರ್ಜಿನ ನೋಡಿ ಲೈಲ್ಯಾಂಡ್ ಲಾರಿ ಬುಸೂಂತ ಉಸ್‌ರ್ ಬುಟ್ಟಂಗೆ ದೀರ್ಘ ಉಸುರ್ ಬುಟ್ಟತ್. ಆಗ ಹೈದಂಗ ಕೇಳ್ದ್ರೊ "ಏನಾತ್ ಸೋಂಪಣ್ಣಾ, ತಪ್ಪು ಕಂಡಾಪಟ್ಟೆ ಉಟ್ಟಾ?" "ಹಂಗೆನೂ ತಪ್ಪು ಇಲ್ಲೆ. ಏನಾರ್ ಸರಿ ಇದ್ದರಲ್ಲಾ ತಪ್ಪುನ ಹುಡ್ಕುದು? ಅಲ್ಲಿ ಬರ್ದದ್ ಪೂರಾ ತಪ್ಪು. ನೀವು ದನ ಮೇಯ್ಸಿಕೂ ಲಾಯಕ್ಕಿಲ್ಲೆ"ಂತ ಸೋಂಪ ಹೇಳ್ತ್. "ಸೋಂಪಣ್ಣ ಸೋಂಪಣ್ಣ ನೀವು ಬಯ್ಯೋದಾದರೆ ಎಲ್ಲವುಕೆ ಕೇಳಂಗೆ ಬಯ್ಬೇಡಿ. ಬಯ್ದೇ ಬಯ್ಯೊಕುತಾದರೆ ಒಳಗೆ ಕರ್ಕಂಡೋಗಿ ಬಯ್ಯಿ"ಂತ ಹೈದಂಗ ಹೇಳಕನ ಸೋಂಪಣ್ಣಂಗೆ ನಗೆ ತಡೆಕೆ ಬೊತ್ತದೆ ನಾನೇ ಬರ್ದನೆಂತ ಹೊಸಾ ಅರ್ಜಿನ ಬರ್ದ್ ಕೊಟ್ಟತ್. ಹೈದಂಗ ಹೈ ಸ್ಪೀಡ್‌ಲಿ ಮನೆಕಡೆ ಓಡ್ರೊ. ಮಳೆ ಬುಟ್ಟಿತ್ ನೋಡಿ ಕೊಡೆ ಅಂಗ್ಡಿಲೇ ಬಾಕಿ.

ಅಪ್ಪ ಅರ್ಜಿನ ತಕ್ಕಂಡ್ ಅಲ್ಲಿ ಇಲ್ಲಿ ಓಡಾಡ್ತ್. ಆಗ ಸಂಬಂಧ ಪಟ್ಟವು "ನಾವು ನೋಡಿಕೆ ಬಂದವೆ. ಏನೇನ್ ನಷ್ಟ ಆವುಟು ಅದರ ವರದಿನ ಕಳಿಸಿವೆ. ಹಟ್ಟಿಬಿದ್ದರ ಏನೂ ಮಾಡ್‌ಬಡಿ. ಅದ್ ಹಂಗೇ ಇರ್ಲಿ"ತ ಹೇಳ್ರೊ. ಅಪ್ಪ ಮನೆಗೆ ಬಾತ್. ಒಂದು ವಾರ ಬುಟ್‌ಕಂಡ್ ಇಲಾಖೆಂದ ಒಂದಿಬ್ಬರ್ ತನಿಖೆಗೆ ಬಂದೊ. ಬಂದವುಕೆ ಕೋಳಿ ಕಳ್‌ತ ಗದ್ದಾಳಾತ್. ಕಳ್ ಕುಡ್ದಲೇ ವರದಿನೂ ಬರ್ದ್ರೊ. ಹಂಗೆ ಬರೆಕನ "ಹಟ್ಟಿ ಬೀಳಕನ ಒಳಗೆ ಒಂದ್ ಜೊತೆ ಎತ್‌ಗಳೂ ಇದ್ದೊ. ಆ ಎತ್‌ಗಳೂ ಸತ್ ಹೋದೋ"ಂತ ಬರ್ದ್ರೊ. ಹಂಗೆ ಬರ್ದರ ನೋಡಿ ಅಪ್ಪ ಕುಪ್ಪಿನ ಪುನಾ ಬಗ್ಗಿಸಿತ್. ಬಂದವು ಟೈಟ್ ಆದೊ. "ನಾವು ಯಂತಕೆ ಬಂದವುಂತೇಳ್ದು ನೀವ್‌ಗೆ ಗೊತ್ತುಟಲಾ. ನಾವು ಈ ವರದಿನ ಕೊಡಕನ ನಿಮ್ಮ ಮನೆನೂ ಬಿದ್‌ಹೋತುಂತ ಬರ್ದವೆ. ಸರಕಾರಂದ ಸಿಕ್ಕುದರ ಯಾಕೆ ಹಂಗೆ ಬುಡೊಕು"ಂತ ಒಬ್ಬ ಹೇಳಕನ ಅಪ್ಪಂಗೆ ಇನ್ನೂ ಕುಸೀ ಆತ್. ನೂರುನೂರು ಎರಡ್ ನೋಟುಗಳ ಬೇರೆ ಬೇರೆ ಕವರಿಗೆ ಹಾಕಿ ಇಬ್ಬರಿಗೆ "ಹಣ ಕಟ್ಟಿತ್." ಬಂದವು ಹೋದೊ.

ಹೋದವು ಮತ್ತೆ ಬಾತ್ಲೆ. ಅಪ್ಪ ತಿರ್ಗಿತ್ ತಿರ್ಗಿತ್. ತಿರ್ಗಿದೇ ಬಾತ್. ಒಂದು ಜೊತೆ ಬೂಟೂ ಸವ್‌ತ್. ಮಳೆಗಾಲ ಕಳ್ತ್. ಚಳಿಗಾಲ ಸುರಾತ್. ಆ ಚಳಿಗಾಲಲೂ ಅಪ್ಪ ಬೆವರ್‌ನೀರ್ ಇಳ್ಸಿಕಂಡ್ ತಿರ್ಗಿತ್. ಕಡೇಗೆ ನಷ್ಟ ಪರಿಹಾರಕ್ಕೆಂತ ಬರ್ದ ಅರ್ಜಿ

ಯಾವ ಹೊಳೆಲಿ ತೇಲಿ ಹೋತೋ ಯಾರಿಗೂ ಗೊತ್ತಾತ್‌ಲೆ. ಇನ್ ಮುಂದೆ ಕಂಡವರ ಕಂಬುಳಿ ಬ್ಯಾಡಾಂತ ಹೇಳಿಕಂಡ ಅಪ್ಪ ಬೆಪ್ಪನಂಗಾತ್.

ಒಂದಿನ ಕುಪ್ಪ ಹೈದ ಗಡ್ಡ ಪೂಜಿಕಂಡ್ ಮೊಕ ಬಾಡ್ಸಿಕಂಡ್ ಕುದ್ದಿತ್. ಹಿಂಗೆ ಕುದ್ದಿರಕನ ಅಪ್ಪ ಯಂತಕೆನೇ ಮೊಕ ಬಾಡಿಕಂಡ್ ಕುದ್ದೊಳಾಂತ ಕೇಳ್ತ್. ಇದೇ ಒಳ್ಳ ಸಂದರ್ಪಂತ ಕುಪ್ಪನ ಮನ್ಸಿಲಿದ್ದರ ಹೇಳ್ತ್. "ಅಲ್ಲಪ್ಪಾ ಅಣ್ಣಂಗೆ ವಯಸ್ಸ್ ಎಷ್ಟಾತ್‌ತ ನಿಂಗೆ ಗೊತ್ತುಟಾ? ಅಂವಂಗೆ ಮೊದುವೆ ಮಾಡೊಕುತ ನಿಂಗೆ ಗ್ಯಾನ ಉಟ್ಟಾ? ಅವ್ವ ಎಷ್ಟ್ ವರ್ಷಾಂತ ದುಡ್‌ಕಂಡೇ ಇರೊಕು?" ಇಷ್ಟ್ ಮಾತಾಡಿ ಆಕನ ಕುಪ್ಪ ಬೆವುರಿ ಹೋತು. ತುಟಿ ಒಣಂಗಿತ್. ಮತ್ತೆ ಮೈ ತಣ್ಣಂಗೆ ಆದಂಗಾಗಿ ಹೊಟ್ಟೆಯೊಳಗೆ ಸಳಿ ಕುದ್ದಂಗಾಗಿ ಮೈ ನಡ್‌ಗಿ ಹೋತು. ಈ ಹೈದನ ಈ ಎಲ್ಲಾ ಮಾತ್ ಕೇಳ್ದ ಅಪ್ಪ ಮನೆ ಒಳಗೆ ಹೊರಗೆ ದಡ್‌ಗುಡ್ ಸದ್ ಮಾಡಿಕಂಡ್ ಓಡಾಡ್ತ್. ಹಳೇ ಕೋಟ್‌ನ ಕೊಡ್ಕಿ ಹಾಕಂಡತ್. ಸಣ್ಣದಾಗಿ ಕೆಮ್ಮಿಕಂಡ್ ಅಂಗಳಕೆ ಇಳ್ತ್. ಬೀಡಿ ಹೋಸಿ ಪುಕುಪುಕು ಹೊಗೆ ಬುಟ್ಟತ್. ಪುನಾ ಮನೆಗೆ ಬಂದ್ ಕುರ್ಚಿಲಿ ಕುದ್ದತ್. ಮಾತಿಲ್ಲೆ, ಕಥೆಯಿಲ್ಲೆ. "ಓಹೋ ಅಪ್ಪಂಗೆ ಕುಪ್ಪ ಕೊಟ್ಟ 'ಮದ್' ಕೆಂದಿಟು"ತ ಮನೆಯವುಕೆ ಗೊತ್ತಾತ್. ಅಪ್ಪ ಹಿಂಗೆ ಒಂದ್ ವಾರಮುಟ್ಟ ಯಾರಕ್ಕಲೆನೂ ಮಾತಾಡದೆ ಸಣ್ಣದಾಗಿ ಗುಟುರು ಹಾಕುವಂಗೆ ದೊಂಡೆನ ಸರಿ ಮಾಡಿಕಂಡ್ ಪೇಚಾಡಿಕಂಡೇ ಇತ್.

ಒಂದಿನ ಹೆಣ್‌ನ ಕೂರ್ಸಿಕಂಡ್ "ಅಲ್ಲನೆ ಮೊನ್ನೆ ಕುಪ್ಪ ಹಿಂಗೆ ಹಿಂಗೆ ಹೇಳ್ತ್. ಹೌದುನೇ ಪಚ್ಚಂಗೆ ಮೊದುವೆ ಮಾಡಿ ಬುಡ್ನೊ. ಅದ್ರೊಟ್ಟಿಗೆ ಕುಪ್ಪಂಗೂ ಮಾಡಿರೆ ಆದುಕಂಡದೆ. ಒಂದೇ ಚಪ್ಪರಲಿ ಇಬ್ಬರಿಗೂ ಮಾಡಿರೆ ಆದು." ಹಿಂಗೆ ಅಪ್ಪ ಹೇಳಕನ ಅವ್ವನ ಮುಖ ಅರಳಿ ಡೇಲಿಯಾ ಹೂನಂಗಾತ್. "ಹೌದು ಮದುವೆ ಮಾಡೇ ಮಾಡೋಕು. ಈ ಮುಂಗಾರಿಗೆ ಮುಂದೇ ಮಾಡ್ನೋ"ಂತ ಹೇಳ್ತ್. ಈ ಎಲ್ಲಾ ಮಾತ್‌ಗಳ ಕೋಂಬರೆಲಿ ಕುದ್ ಕೇಳ್ತಾ ಇದ್ದ ಹೈದಂಗ ಅವನ ಮೀಸೆನ ಇವನೂ ಇವನ ಮೀಸೆನ ಅವನೂ ತಿರ್ಗಿಸಿಕಂಡೊ.

ಮೊದುವೆ ಕಾಗದ ನೀವ್‌ಗೂ ಬಾದುಕಂಡದೆ. ನಾವೆಲ್ಲಾ ಒಟ್ಟಿಗೆ ಪೋಯಿ.



# 13. ಅಕ್ಕಾ, ನೀವು ರೆಸ್ಟ್ ತಕಣಿ

**ಕೊಡಗ್‌ನವು** ಮಂಗ್ಳೂರು, ಬೆಂಗ್ಳೂರು, ಮೈಸೂರು ಅಲ್ಲದೆ ಇನ್ ಬೇರೆ ಬೇರೆ ದೂರ ದೂರದ ನಗರಗಳ್‌ಲಿ ವಾಸ ಮಾಡ್ತಾ ಒಳೊ. ಹಿಂಗೆ ದೂರದ ಊರ್‌ಲಿ ಇರವು ಒಂದೋ ಗಂಡ ಇಲ್ಲರೆ ಹೆಣ್ ಅಥವಾ ಇಬ್ಬರೂ ಚಾಕರಿಲಿರವೇ. ಕೆಲವು ಪೊರ್ಲುಲಿ ಬದುಕ್‌ತಾ ಒಳೊ. ಇನ್ ಕೆಲವು ಇಲ್ಲಿಂದಳೇ ಅಕ್ಕಿನೋ ಮತ್ತೊಂದೋ ತಕ್ಕಂಡ್ ಹೋದವೆ. ಈಗ ಶುಂಠಿ ಬಂದ ಮೇಲೆ ಅಕ್ಕಿ ತಕ್ಕಂಡ್ ಹೋದು ಕಮ್ಮಿ ಆಗ್ತಾ ಉಟ್ಟು. ಅದೆಲ್ಲಾ ಇರ್‍ಲಿ. ನಾವು ಎಲ್ಲೇ ಇದ್ದರೂ ಈ ಹಾಳಾದ ಕಾಯಿಲೆ ಮಾತ್ರ ಒಟ್ಟಿಗೆ ಇದ್ದದೆ. ಕಾಯಿಲೆಗೆ ಹೊಸ ಊರಾದರೇನ್ ಹಳೇ ಊರಾದರೇನ್?

ಇದೊಂದ್ ಸಂಸಾರ- ಎಲ್ಲಾ ಸಂಸಾರಗಳಂಗೆ. ಮೂರು ಮಕ್ಕ ಓದ್‌ತಾ ಒಳೊ. ಗಂಡಂಗೂ ಹೆಣ್ಣಿಗೂ ಚಾಕರಿ ಉಟ್ಟು. ಗಂಡಂಗೆ ಸಿನೇತರ್ ಜಾಸ್ತಿ. ಬೆಳಿಗ್ಗೆ ಮನೆ ಬುಟ್ಟರೆ ಬಾದು ರಾತ್ರಿ ಒಂಭತ್ತೊ, ಹತ್ತೊ. ಹೆಣ್‌ಗೆ ಡಬಲ್ ಡ್ಯೂಟಿ. ಮನೆಕೆಲ್ಸ ಮಾಡಿಕಂಡ್, ಮಕ್ಕಳ ಇಸ್ಕೂಲಿಗೆ ಕಳ್ಸಿಕಂಡ್ ತಾನೂ ಹತ್ತೂವರೆಗೆಲ್ಲಾ ಆಫೀಸ್‌ಲಿ ಇರೊಕು. ಅರ್ಧಗಂಟೆ ತಡಾ ಆದರೆ ಆಫೀಸರ್ ರಜೆ ಬರ್‍ದಿದ್ದದೆ. ಹಂಗಾಗಿ ಸಮಯಕ್ಕೆ ಸರಿಯಾಗಿ ಆಫೀಸ್‌ಗೆ ಎತ್ತಿಕಣೋಕು. ಮನೆಕೆಲ್ಸ ಮಾಡಿ ಆಫೀಸ್‌ಗೆ ಎತ್ತಕನ ಸಾಕ್‌ಬೇಕಾದೆ. ಈ ಕೆಲ್ಸನೇ ಬೇಡಂತ ಒಮ್ಮೊಮ್ಮೆ ಮನ್ಸಿಗಾದೆ. ಹೆಂಗಾರ್ ಐದ್ ವರ್ಷ ತಳ್ಳಿ ಬುಡ್ದು. ಮತ್ತೆ 'ಸ್ವಯಂ ನಿವೃತ್ತಿಗೆ' ಬರೆಕುತೆಲ್ಲಾ ಗ್ಯಾನ ಮಾಡ್ದೆ.

ಒಂದೇ ಊರವು ಸಿಟಿಲಿರಕನ ಭಾರೀ ಪ್ರೀತಿ! ಬಾದು ಹೋದು ಜೋರು. ರಜೆ ಬಂದರೆ ಸಾಕ್. ಕೆಲವುಕೆ ಆ ಮನೆ ಈ ಮನೆತ ಸುತ್ತಾಟನೇ ಆದೆ. ಮನೆಗೆ ಬಂದವರ ಹಂಗೇ ಕಳ್ಸುದು ಕೊಡಗ್‌ನವರ ಪದ್ಧತಿ ಅಲ್ಲ ನೋಡಿ. ಹಂಗಾಗಿ ಬೆಳಿಗ್ಗೆ ಬಂದರೆ, ಬಂದವುಕೆ ತಿಂಡಿ. ಹತ್ತೋ ಹನ್ನೊಂದೋ ಗಂಟೆಗಾದರೆ ಟಿ, ಕಾಫಿ. ಮಧ್ಯಾಹ್ನ ಮನಿ ಆದರೆ ಊಟ...... ಹಿಂಗೆ ಹೊತ್‌ಗೆ ಸರಿಯಾಗಿ ಕೊಟ್ಟವೆ. ಬಂದವರೊಟ್ಟಿಗೆ ನಂಗೆ ಅಲ್ಲಿ ಬೇನೆ, ಇಲ್ಲಿ ಬೇನೆತ ಹೇಳಿಕಂಡಿದ್ದರೆ ಏನ್ ಪ್ರಯೋಜನ?

ಒಮ್ಮೆ ಅಕ್ಕಂಗೆ ಜರ ಜೋರು. ಡ್ಯೂಟಿಗೆ ರಜೆ ಹಾಕಿತ್. ಮಕ್ಕಳ ಹೆಂಗೋ ಇಸ್ಕೂಲಿಗೆ ಕಳ್ಸಿತ್. ಗಂಡನೂ ಅಂದ್ ತಡಾಗಿ ಹೊರಗೆ ಹೋತು. ತಾನೂ ತಿಂದಂಗೆ ಮಾಡ್ತ್. ಗುಳಿಗೆ ನುಂಗಿ ಮಲ್ಗಿನೆತ ಬೆಡ್ ರೂಂಗೆ ಹೋಕನ ಯಾರೋ ಬಂದ್‌ಕಂಡ್ ಕಾಲಿಂಗ್ ಬೆಲ್ ಒತ್ತಿದೊ. ಆ ಸನಿಗ ಬೆಲ್ ಮೇಲೆ ಕೈ ಮಡ್ಗಿದವು ಬಾಗ್‌ಲ್ ತೆಗೆಮುಟ್ಟ ಅಲ್ಲಿಂದ ಕೈ ತೆಗ್‌ತ್‌ಲೆ. ಬಂದವು ಕುದ್ದೊ. ಕುದ್ದವುಕೆ ಉಪಚಾರ ಆತ್. ಬೇಡಾದ ಪಂಚಾತಿ ಹೊಡ್ದೊ. ಹೊರ್‍ಡಕನ 'ನೀವೂ ಬನ್ನಿತ' ಹೇಳಿ ಹೋದೊ. ಸಧ್ಯ, ಇನ್ನಾರ್ ಮಲ್ಕಣೆತ ಅವುಳು ಕೋಂಬರೆಗೆ ಬಂದ್ ತಲೆ ದಿಂಬುನ ಸರಿಮಾಡ್ತಾ ಇರಕನ ಅವುಳ

ಆಫೀಸವು ಯಾರೋ ಬೆಲ್ ಮಾಡ್ರೊ. "ಏನಿಲ್ಲಾ ಮೇಡಂ ನಿಮ್ಮ ಆರೋಗ್ಯ ಹೇಗಿದೇಂತ ವಿಚಾರ್ಸಿಕಂಡ್ ಹೋಗೋಣಾಂತ ಬಂದ್ವಿ"ತ ಹೇಳ್ರೊ. ಓ! ಥ್ಯಾಂಕ್ಸ್. ಈಗ ಪರ್ವಾಗಿಲ್ಲ. ಜ್ವರ ನಿನ್ನೆಗಿಂತ್ಲೂ ಕಡಿಮೆ ಆಗಿದೆ. ಆದ್ರೆ ಸುಸ್ತು. "ಹೌದು ಮೇಡಂ ಜ್ವರ ಬಂದ್ರೆ ಹಾಗೆನೆ. ನೀವು ಫುಲ್ ರೆಸ್ಟ್‌ಲಿ ಇರೋದು ಒಳ್ಳೇದು. ಇನ್ನೊಂದೆರಡ್ ದಿನ ರಜೆ ಬರೀರಿ ಮೇಡಂ. ನಾವ್ ಸಾಹೇಬ್ರಿಗೆ ಹೇಳ್ತೇವೆ"ತ ಹೇಳಿ ಟೀ ಕುಡ್ದ್ ತಿಂಡಿ ತಿಂದ್ ಹೊರ್‍ಟೊ.

ಕೆಲ್ಸದವಳು ಬರದೆ ವಾರ ಆಕೆ ಆತ್. ಅವುಳ ದರ್ಶನ ಇನ್ ಯಾಗೋ, ಏನೋತ ಗುಣುಗುಣು ಹೇಳಿಕಂಡ್ ಗಲಾಸ್‌ಗಳ ತೊಳ್ದ್ ಇಸಿ ಬಂದ್ ಮಲ್ಗಿತ್. ತಲೆ ಸಿಡ್ತ ಸುರಾತ್. ಜ್ವರನೂ ಬಂದಂಗಾತ್. ಮತ್ತೆ ಇನ್ಯಾರೋ ಬೆಲ್ ಒತ್ತಿಕೆ ಸುರು ಮಾಡ್ರೊ. ನರಳಾಡಿಕಂಡ್ ಬಂದ್ ಬಾಗಲ್ ತಗ್ತ್. "ಸಾರ್ ಇದ್ದಾರ?" 'ಇಲ್ಲ' "ಅವುರ್ನೇ ಕಾಣ್‌ಬೇಕಿತ್ತು. ಸಂಜೆ ಬರ್‍ತೀವಿ ಮೇಡಂತ" ಹೇಳಿ ಪುಣ್ಯಾತ್ಮರು ಹೋದೊ.

ಥೂ! ಜನಗ ಈ ರೀತಿ ಬಂದ್‌ಕಂಡ್ ಪೀಡ್‌ಸ್‌ವೆ. ಏನ್ ಮಾಡ್ದು? ಹ್ಞಾ! ಒಂದು ಉಪಾಯ ಮಾಡಿನೆಂತ ಏನ್ ಮಾಡ್ತ್‌ಗೊತ್ತುಟಾ? ಎದ್ರ ಬಾಗ್‌ಲ್‌ಗೆ ಬೀಗ ಹಾಕಿತ್. ಹಿಂದೆಂದ ಬಂದ್ ಒಳಗೆ ನುಗ್ಗಿತ್. ತಾಳ ಹಾಕಿತ್. ಬಂದ್ ಮಲ್ಗಿತ್. ಯಾರೋ ಗುಣುಗುಣು ಮಾತಾಡಿಕಂಡ್ ಬಂದವು ಬೀಗ ನೋಡಿ ಬೆಲ್ ಒತ್ತದೆ ಹೋದೊ. ಸಧ್ಯ! ಈ ಉಪಾಯ ನಂಗೆ ಮುಂದೇ ಬಂದಿದ್ದರೆತ ಗ್ಯಾನ ಮಾಡಿ ಹೊದ್ ಮಲ್ಗಿತ್. ಮಲ್ಗಿ ಒಂದ್ ಗಂಟೆ ಕಳ್ದ ಮೇಲೆ ಎದ್ ಬಿಸಿ ಏನಾರ್ ಕಾಸಿಕಂಡ್ ಕುಡ್ದನೆತ ಅಡಿಗೆ ಮನೆಗೆ ಹೋತು. ಹಂಗೆ ಹೋಗಿ ಪಾತ್ರ ಎತ್ತಕನ ಕೈ ಜಾರಿ ಬೀತ್. ಆ ಬಿದ್ದ ಸದ್ ಹಕ್ಕಲೆ ಇದ್ದ ಮನೆವುಕೆ ಕೇಳ್ತ್. ಓಡಿ ಬಂದೋ. ಬಂದವು ಬೀಗ ಹಾಕಿದರ ನೋಡ್ರೊ. ಅಷ್ಟ್ ಹೊತ್ತಿಗೆ ಮನೆ ಒಳಗೆ ಯಾರೋ ಅತ್ತ ಇತ್ತ ಓಡಾಡ್ವಂಗೆ ಕಂಡತ್. 'ಕಳ್ಳ ಕಳ್ಳತ' ಬೊಬ್ಬೆ ಹಾಕಿದೊ. ಅವು ಇವು ಸೇರ್‍ರೊ. ಟಿ. ವಿ. ಕದೆಕೆ ಬಂದ ಕಳ್ಳನೇತ ಜನ ಓಡಾಡ್ರೊ. ಆಗ ಇವುಳು ಏನ್ ಮಾಡೊಕು ಹೇಳಿ? ಕಿಡಿಕೆ ತೆಗ್ದ್ ನಾನೇ ಕಣ್ರೀತ ಹೇಳ್ತ್‌ಗಡ.

ಮಾರನೆ ಸಾಯಂಕಾಲ ಅವುಳು ಸುಸ್ತಾಗಿ ಮಲ್ಗಿತ್. ಮಕ್ಕಳೇ ಅದೂ ಇದೂ ಅಡ್ಗೆ ಮಾಡ್ರೊ. ಅಷ್ಟೊತ್ತಿಗೆ ಅಪ್ಪನೂ ಬಂದ್ ಎತ್ತಿತ್. ಎಲ್ಲವೂ ಉಂಡೊ. ರಾತ್ರಿ ಹತ್‌ಗಂಟೆ ಆಗಿರ್ದು. ಹಾಸಿಗೆ ಹಾಸಿದೊ. ಸೊಳ್ಳೆ ಪರದೆ ಕಟ್ಟಿ ಮಲ್ಗಿಕೆ ರೆಡಿ ಆಗ್ತಾ ಇರಕನ ಯಾರೋ ಇಬ್ಬರು ಮನೆಗೆ ಬಂದೊ. "ಅಕ್ಕಾ ನೀವು ಈಗ ಹೆಂಗೆ ಒಳರಿ? ನೀವ್‌ಗೆ ಉಷಾರಿಲ್ಲೆತ ಯಾರೋ ಹೇಳ್ದೊ. ನಾವು ಬೆಂಗ್ಳೂರ್‌ಗೆ ಹೊರ್‍ಟವು. ರಾತ್ರಿ ಪ್ರಯಾಣ ಮಾಡ್ದು ಬೇಡಾಂತ ಗ್ಯಾನ ಮಾಡಿ ನಿಮ್ಮನ ಮಾತಾಡ್ಸಿದಂಗೂ ಆತ್ ಬೆಳಿಗ್ಗೆ ಇಲ್ಲಿಂದ ಹೋಕೆ ಸುಲುಭನೂ ಆದೆತ ಇಲ್ಲಿಗೆ ಬಂದೊ. ಬೆಳಿಗ್ಗೆ ಬೇಗ ಹೊರ್‍ಟ್‌ಬುಟ್ಟವೆತ" ಹೇಳ್ದೊ. ಬಂದವುಕೆ ಏನೋ ಮಾಡಿ ಊಟ ಕೊಟ್ಟೊ. ಮಲ್ಗಿದೊ...

ಬೆಳಿಗ್ಗೆ ಹಸೀ ಹೊಟ್ಟೆಲಿ ಕಳ್ಸದು ಹೆಂಗೆ? ಉಪ್ಪಿಟ್, ಕಾಫಿ ಮಾಡಿ ಕೊಟ್ಟೆತ್. ನಂಟ್ರ್ಗ ತಿಂದೊ. ಹೊರ್ಟ್ರೊ. ಹೊರ್ಡ್ಕನ 'ಅಕ್ಕಾ, ನೀವು ರೆಸ್ಟ್ ತಕಣಿ, ನೀವೇ ಎದ್ ಹಿಂಗೆ ಕೆಲ್ಸ ಮಾಡಿರೆ ಸುಸ್ತು ಜಾಸ್ತಿ ಆದು. ನಾವು ಇನ್ ಬಂದವೆ'ತ ಹೇಳಿ ಹೋದೊ. ಇದಿಷ್ಟ್ ಸಿಟಿಲಿರುವ ಮನೆಯವರ ಒಂದ್ ಸ್ಯಾಂಪಲ್. ಇನ್ ಹಳ್ಳಿಲಿರುವವರ ಪಾಡೂ ಹಿಂಗಿರುದಾ?

ಹಳ್ಳಿಲಿರುವವರ ಪಾಡ್ ಇದ್ಕಿಂತ ವಿಚಿತ್ರ. ಸಿಟಿಯವರ ಮನೆಲಾದರೆ ಒಂದ್ ನಾಕ್ ಹೂನ ಗಿಡ. ಅದ್ಕೆ ನೀರಿದ್ದರೆ ನೀರಾಕುದು. ಬಾಕಿಯೆಲ್ಲಾ ಕೆಲ್ಸ ಮನೆಯೊಳಗೇ. ಅಡ್ಗೆ, ಪಾತ್ರೆ, ಬಟ್ಟೆ, ಬರವು ಹೋಗವು, ಗುಡ್ಸುದು, ತೊಳೆದು, ಟಿ. ವಿ.ನೋ, ಸಿನಿಮಾನೋ ಎಂತದೋ ಆತ್. ಆದರೆ ಹಳ್ಳಿದ್ ಕಥೆ ಬೇರೆ.

ಹಳ್ಳಿಲಿ ಬೆಳಗಾತೋ-ಸುರಾತ್. ಒಲೆಗೆ ಬೆಂಕಿ ಮಾಡ್ಬು. ಪೂ..... ಪೂ..... ಊದಿ ಊದಿ ಒಲೆದ್ ಮೂಗಿಗೆ ಹೆಟ್ಟಿ ಕುಟ್ಟಿ, ಮನೆ ಪೂರಾ ಹೊಗೆ ಆಗಿ ಗಂಡಂಗೂ ಮಕ್ಕಳಿಗೂ ಸೇರ್ಸಿ ಉದಯರಾಗ ಸುರಾಬುಟ್ಟದೆ. ಬೆಂಕಿ ಹೊತ್ತಿತೋ, ಬಿಸಿ ನೀರ್, ಕಾಫಿ, ರೊಟ್ಟಿ..... ಕೋಳಿಗ, ಬಾಗ್ಲಲಿ ಕುದ್ದ ನಾಯಿ, ಅಲ್ಲೇ ಜಗಲ್ ಕರೆಲಿ ಹಂದಿಗ ಗುರುಗುಟ್ಟಿಕಂಡ್ ಹತ್ತಿ ಬಾದು, ಅಷ್ಟೊತ್ತಿಗೆ ಅಂಬೇತ ಕರ್‌ಗ ಅರಚುದು, ಅಮ್ಮಾ ಬುತ್ತಿ ಕೊಡು, ತಲೆ ಬಾಚ್‌ತ ಮಕ್ಕ ಕಿರುಚುದು. ಎಲ್ಲಿನೇ ನನ್ನ ತೊಪ್ಪಿತ ಗಂಡ ಕೇಳ್ದು. ಅದ್ ಹುಡ್ಕಿ ಕೊಡಕನ ಒಲೆಲಿ ಹಾಲ್ ಉಕ್ಕಿ ಹೋದು, ಗದ್ದೆ ಕರೆಲಿ ಪೋಲಿ ದನಗಳ ಓಡ್ಸಿಬುಡುನೇತ ಹೇಳಿ ಪ್ಯಾಂಟ್ ಕೋಸಿ ಕೋಟ್ ಹಾಕಿ ಗಂಡ ಸಂತೆಗೆ ಹೋದು...

ಹೆಣ್ ಗದ್ದೆಗೆ ಹೋಗಿ ದನಗಳ ಓಡ್ಸಿ ಇತ್ತ ಬಾಕನ ಒಂದ್ ಹಂದಿ ಕಿರಿಯೋತ ಕಿರ್‌ಚ್‌ತಾ ಉಟ್ಟು. ಸನಿ ಹಿಡ್ದದ್‌ಕೆ ಎಂತ ಆತ್‌ತ ಓಡಿ ಬಂದರೆ ಅದ್ ಹಗ್ಗ ಸುತ್ತಿಕಂಡ್ ಕೊಣ್ಣಾಡ್ದೆ. ಆ ಗಂಟ್‌ನ ಬಿಚ್ಚೊಕರೆ ಸಾಕ್ ಬೇಕಾದೆ. ಅಷ್ಟ್ ಹೊತ್ತಿಗೆ "ಮನೆಲಿ ಯಾರ್? ಯಾರ್ ಕಾಂಬಲೆ. ಓ ಅಕ್ಕಾಂತ" ರಾಗ ಎಳ್ಕಂಡ್ ಬರುವ ನಂಟ್ರ್. ಮಧ್ಯಾಹ್ನಕ್ಕೆ ಹೊಸಾ ಅಡಿಗೆ ಮಾಡಿ ನಂಟ್ರ್‌ಗೆ ಇಕ್ಕಿ, ತಾನೂ ಉಂಡಂಗೆ ಮಾಡಿ ಉಷ್ ಅಪ್ಪಾಂತ ಕೂರಕನ ಹಣೆ ಮೇಲೆ ಬೆವುರು. ಸುಸ್ತುತ ಮಲ್ಗಿ ಏಳ್‌ಕನ ಜರ! ತಲೆ ಸಿಡ್ತ. ಮೈ ಕೈ ಬೇನೆ. ಫ್ಲೂ ಜರ! ವಾರಗಟ್ಟಲೆ ಸತಾಯಿಸಿದ ಜರ ಬುಡಕನ ಇವುಳು ಮೂಡ್‌ಸ್‌ಮೆ ಎತ್‌ನಂಗೆ ಲಾಚಾರ್. ಆದರೂ ಬರವು ಹೋಗವು ಒಳೇ ಒಳೊ. ಬಂದವರ ಸುಧಾರ್ಸಿ ಕಳ್ಸೊಕು, ಅಷ್ಟೇ ಅಲ್ಲದೆ ನಿತ್ಯದ ಕೆಲ್ಸ ತನ್ನ ಮೇಲೇ ಬಿದ್ದಿದ್ದದೆ. ಬಂದವ್ ಊಟ ಮಾಡಿ ಊಟದ ಬಟ್ಲ್‌ನೂ ಅಲ್ಲೆ ಬುಟ್ ಎದ್ದವೆ. ಬಟ್ಲ್‌ನ ಉಂಡವೇ ತೊಳ್ದರೆ ನಂಟ್ರ್ ಬಾದ್ ಜಾಸ್ತಿಗಡ! ಸೋಂಬೇರಿಗಳಿಗೆ ಅಷ್ಟೇ ಸಾಕಲ್ಲ. ಉಂಡೋ ತೇಗಿಕಂಡ್ ಎದ್ದೊ. ಕೈ ತೊಳ್ದ್ ಎಲೆ ಅಡಿಕೆ ಹಾಕಂಡೊ. "ಅಕ್ಕಾ ನೀವ್ ರೆಸ್ಟ್ ತಕಣೇಂತ " ಹೇಳಿ ಹೊರ್ಟವೆ.



# 14. ಮಾಸದ ಒಟ್ಟಿಗೆ ಕೊಲೆ ಬಂದದೆ ಗಡ!

**ಕಾಡ್** ಮಾಸನೇ ಇರ್ಲಿ, ನಾಡ್ ಮಾಸನೇ ಇರ್ಲಿ ಅದರ ತಕ್ಕಂಡ್ ಸೀದ ಮನೆಗೆ ನುಗ್ಗಿಕಾಗದ್. ಯಾಕೇಂತೇಳಿರೆ ಮಾಸ ತಂದವನ ಒಟ್ಟಿಗೆ ಕೊಲೆ ಬಂದಿದ್ದದೆ ಗಡ! ಅದ್ಕೆ ಮನೆಗೆ ಹತ್ತಿಕೆ ಮುಂದೆ ಅಂಗಳಲಿ ನಿತ್ತಿರಕನೇ ಬೆಂಕಿಕೊಳ್ಳಿ ತಂದ್ ಮಾಸದ ಬ್ಯಾಗ್‌ಗೆ ಹೊಗೆ ಕೊಡೊಕು. ಹಂಗೆ ಮಾಡದೇ ಇದ್ದರೆ ಒಂದೋ ಮಾಡ್ವ ಗೈಪು ಹಾಳಾಗಿದ್ದದೆ, ಇಲ್ಲರೆ ಗೈಪು ತಿಂದವನ ಹೊಟ್ಟೆ 'ಗಡುಗುಡು' ಹೇಳ್ವೆಗಡ. ಅಷ್ಟೇ ಅಲ್ಲ ಜಿಲಾಪುನೂ ಶುರಾದೆಗಡ! ಆದರೆ ಇಂದ್ ಕಾಡ್ ಮಾಸನೂ ಇಲ್ಲೆ. ಗ್ಯಾಸ್ ಒಲೆ ಬಂದ ಮೇಲೆ ಬೆಂಕಿ ಕೊಳ್ಳಿನೂ ಇಲ್ಲೆ. ಹಂಗಾಗಿ ಪೀಡೆನೂ ಇಲ್ಲೆ.

ಮಕ್ಕಳಿಗೆ ಮಾಸ ಗೈಪು ತಿನ್ನೊಕುತ ಆಸೆ ಇದ್ದರೆ ಕೆಲವು ಮಕ್ಕ ಆಸೆನ ಹೇಳಿಕಂಡವೆ. ಇನ್ನೂ ಕೆಲವು 'ಕಡ್ಪ' ಅಯ್ಯೆಕ ಇದ್ದಲ್ಲಿ ಹೇಳ್ದುಲೆ. ಮನ್ಸ್‌ಲೇ ಆಸೆ ಮಾಡಿಕಂಡಿದ್ದವೆ. ಒಂದಪ ಒಂದ್ ಮನೆಲಿ ಕತ್ತಲಾಕನ ಮಾಸ ತಂದಿದ್ದೊಗಡ. ಅವ್ವ ಅದರ ಗೈಪು ಮಾಡ್ತ್. ಮಕ್ಕಳಿಗೆ ಮಧ್ಯಾಹ್ನದ ಎಂತದೋ ಗೈಪು ಇಕ್ಕಿತ್. ಮಾಸ ಗೈಪು ನಾಳೆಗಾಗಲೀಂತ ಹಂಗೇ ಇಸಿತ್.ಮಕ್ಕಳಿಗೆ ಒಂದು ತುಂಡೂ ಕೂಡ ಕೊಟ್ಟಿತ್‌ಲೆ. ಪಾಪ, ಮಕ್ಕ ಬಾಯಿಬುಟ್ ಕೇಳ್ತ್‌ಲೆ. ಅವ್ವ ಯಾಗೋಳು "ಉರಿದುಂಡ್‌ನಂಗೆ" ಇರವುಳು. ಒಳ್ಳ ರಾಕ್ರಾಸಿಯಂಗೆ ಆಡ್ದು. ದೆವ್ವ ಬಡ್ದಂಗೆ ಕೊರ್‍ಚಿಕಂಡ್ ಇರ್ದು. ಇದರ ಹಣೆಬರ ಹಿಂಗೇಂತ ಮಕ್ಕ ಮಕ್ಕಳ ಪಾಡಿಗೆ ಇದ್ದೊ. ಆದರೆ ಅಂದ್ ರಾತ್ರಿ ಒಬ್ಬ ಹೈದಂಗೆ ಮಾಸ ಗೈಪು ಆಸೆ ಆಗಿ ಬತ್. ಕೇಳಂಗಿಲ್ಲೆ. ಅದೇ ಆಸೆಲಿ ಮಲ್ಗಿತ್. ಎಲ್ಲವೂ ಮಲ್ಗಿದೊ. ಯಾರೂ ಮಾಸಗೈಪುನ ತೀಂತ್‌ಲೆ. ನಡು ಇರ್‌ಲ್‌ಲಿ ಅಪ್ಪ ಎದ್ ಉಚ್ಚೆ ಒಯ್ಯಕೆತ ಹೈದನ ಕರ್ತ್. ಹೈದ ಮಸ್‌ಗಿತ್‌ಲೆ. ಅರೆ! ಇವಂಗೇನಾತ್ 'ಏಯ್' ಏಳ್‌ನೇಂತ ಹೇಳಿರೂ ಹೈದ ಅಲ್ಲಾಡ್ತ್‌ಲೆ. ದೀಪ ಹೋಸಿ ನೋಡಿರೆ ಜೀವವೇ ಇಲ್ಲದಂಗೆ ಮಲ್ಗಿಟ್ಟು. ಹಾ! ಶಿವ್ನೇ ಇವಂಗೇನಾತ್‌ತ ದಡಬಡ ಓಡಾಡ್ತ್. "ಏ, ನೀನ್ ಮಕ್ಕಳಿಗೆ ಮಾಸ ತುಂಡು ಕೊಟ್ಟೊಳನೆ"ಂತ ಹೆಣ್‌ನ ಕೇಳ್ತ್. "ಇಲ್ಲೆ" ತ ಹೇಳ್ತ್ ಹೆಣ್. ಇಂವ ಸೀದ ಅಡ್ಗೆ ಮನೆಗೆ ಹೋತು. ಮಾಸ ಗೈಪುದು ಬಾವಡೆ ತೆಗ್ತ್. ಮತ್ತೆ ಓಡಿ ಬಂದ್ ನೋಡಕನ ಹೈದ ಉಸ್‌ರಾಡ್ತಾ ಇತ್!! ಅಂದರೆ ಆ ಹೈದನ ಉಸ್‌ರ್ ಎಲ್ಲಿತ್? ಆ ಆಸೇಂತೇಳುವ ಉಸ್‌ರ್ ಚೆಟ್ಟಿಯೊಳಗೆ ಇತ್‌ಂತ ಹೇಳುವ ಕಥೆನ ನೀವು ಕೇಳಿರುವರಿ. ಆ ಕಥೆ ಹಂಗೆ ಇರ್ಲಿ. ಮಕ್ಕಳಿಗೆ ಮುಚ್ಚುಮರೆ ಇಲ್ಲದೆ ತುಂಬ ಅಲ್ಲದಿದ್ದರೂ ಆಸೆಗೆ ತಕ್ಕ ತಿಂಬಕೆ ಕೊಡೊಕು.

ಒಮ್ಮೆ ಒಬ್ಬ ಬೇಟೆಗಾರ ಒಳಿ ಕುದ್ ಒಂದ್ ಸಾರಗ ಹೊಡ್ತ್. ಸರಸರಾಂತ ಮರಂದ ಇಳ್ದ್ ಓಡಿ ಬಂದ್ ಬಿದ್ದ ಸಾರಗನ ಮುಟ್ಟಿತ್. ಹಂಗೆ ಮುಟ್ಟದೆ ಇದ್ದರೆ ಪೀಡೆ ಅದರ ಕಾಣದಂಗೆ ಮಾಡ್ದೆ ಗಡ. ಅದ್ ಈ ಬೇಟೆಗಾರಂಗೂ ಗೊತ್ತಿತ್. ಹಂಗಾಗಿ

ಇದರ ಮುಟ್ಟಿ ಬೇಟೆಗಾರ ಕಾಡ್‌ಂದ ಬೇಗ ಮನೆಗೆ ಬಾತ್. ಬೇಟೆ ಆದ ಜಾಗಕ್ಕೂ ಮನೆಗೂ ಒಂದೆರಡ್ ಮೈಲ್ ದೂರಾದು. ನಾಕ್ ಜನರ ಕರ್‍ಕಂಡ್ ಬೇಗ ಬೇಗ ಹೋಗಿ ಸಾರಗ ಬಿದ್ದ ಜಾಗಕ್ಕೆ ಎತ್ತಿದೊ. ಆದರೆ ಅಲ್ಲಿ ಸಾರಗ ಇಲ್ಲೆ! ಅರೆ! ಇಲ್ಲೇ ಬಿದ್ದಿತ್. ನಾ ಅದರ ಮುಟ್ಟಿಯೊಳೆ. ಒಳ್ಳ ಕೈಪಾರೆಗೆ ಗುಂಡ್ ಬಡ್ಡಿತ್. ಎರಡ್ ಹೆಜ್ಜೆ ಹಾರಿ ಬಿದ್ದ ಸಾರಗ ಈಗ ಏನಾತ್? ಒಟ್ಟಿಗೆ ಬಂದ ಈ ನಾಕ್ ಜನಕೆ ಎಂತ ಹೇಳ್ವಂತ ಬೇಟೆಗಾರ ತಲೆ ಬಿಸಿ ಮಾಡಿಕಂಡತ್. ರಕ್ತ ಬಿದ್ದ ಕಲೆನ ತೋರ್‍ಸಿತ್. ಮತ್ತೆ ಒಳಿ ಕುದ್ದ ಮರಕ್ಕೆ ಹತ್ತಿತ್. ಹಿಂಗೆ ಹಿಂಗೆ ಹೊಡ್ದೇತ ತೋರ್‍ಸಿತ್. ಮರಂದ ಇಳ್ತ್. ತಲೆಗೆ ಕೈ ಹೊತ್ ಕುದ್ದತ್. ಕಲೆ ಹುಡ್ಕನೋಂತ ಆ ಕಡೆ ಹತ್ ಮಾರ್ ಹುಡ್ಕಿದೊ. ಸಾರಗ ನಾಪತ್ತೆ!! ಅಲ್ಲಾ ಅಷ್ಟ್ ಲಾಯ್ಕ ನಾ ಮುಟ್ಟಿಯೊಳೆ. ಮನುಷ್ಯ ಮುಟ್ಟಿದರ ಪೀಡೆ ಮುಟ್ಟುದಾತ ಬೇಟೆಗಾರ ಕೇಳ್ತ್. "ಕೆಲವು ಪೀಡೆಗಳಿಗೆ ಅದೆಲ್ಲ ಲೆಕ್ಕಕ್ಕಿಲ್ಲೆ"ಂತ ಒಬ್ಬ ಹೇಳ್ತ್. "ಈ ಕಾಡ್‌ಲಿ ನಾಕೈದ್ ಪೀಡೆಗ ಒಳೊ"ಂತ ಇನ್ನೊಬ್ಬ ಹೇಳ್ತ್. ಅಂತೂ ಪೀಡೆದೇ ಕಿತಾಪತಿಂತ ಹೇಳಿಕಂಡ್ ಮೊಕ ಪೂಜಿಕಂಡ್ ಮನೆಗೆ ಬಂದೊ.

ಇದಾಗಿ ವಾರ ಕಳ್ದಿರ್ದುರ್. ಅಲ್ಲಿ ಇಲ್ಲಿ ಗುಸು ಗುಸು ಪಿಸಿ ಪಿಸಿತ ಮಾತ್ ಹೊರ್ಟತ್. ನಾರ್ ತಾಕೆತ ಹೋದ ಕೆಂಚಪ್ಪನೂ ರಾಘವಯ್ಯನೂ ಆ ಸಾರಗನ ಕಾಣದಂಗೆ ಮಾಡಿ 'ಗಮ್ಮತ್' ಮಾಡ್ದೊಗಡ!!



# 15. ಎರ್ಡ್ ತಲೆ ಕೋಳಿ

ಒಂದೇ ಸಮ ಸುರೀತಿದ್ದ ಮಳೆಗೆ ಕೋಳಿಗೆಲ್ಲ ಕೊಟ್ಟೆಗೆಲಿ ಕುದ್ದಿದ್ದೊ. ಒಂದೆರಡ್ ಗಂಟೆ ಸುರ್ದ ಮಳೆ ಹಞ ನಿತ್ತಂಗಾತ್, ಬಿಸ್ಲ್ ಬಾತ್. ಕೋಳಿಗ ರೆಕ್ಕೆ ಪುಕ್ಕ ಬಿಚ್ಚಿ ಬಿಸ್ಲ್‌ಲಿ ಬಿದ್‌ಕಂಡ್ ಬಿಸಿ ತಾಂಗಿಸಿಕಂಡ್ ಸುಖಪಡ್ತಾ ಇದ್ದೊ. ಮತ್ತೆ ಅಲ್ಲಿಂದ ಎದ್ ಅತ್ತ, ಇತ್ತ ಮೇಚಿ ಹುಡ್ಕಿಕಂಡ್ ಹೊರ್ಟ್ರೊ. ಇತ್ತಂದ ಕೋಳಿಗ ಮೇಚಿಗೆ ಹೊರ್ಟ್ವಂಗೆ ಅತ್ತಂದ ಕುದ್ಕ ಇತ್ತ ಹೊರ್ಟ್ವತ್. ಅಲ್ಲಿ ಮೂಸಿ ಇಲ್ಲಿ ಮೂಸಿಕಂಡ್ ಬಂದ ಕುದ್ಕಂಗೆ ಕೋಳಿಗ ಮೇಚಿ ಮಾಡ್ತು ಕಂಡತ್. ಅಬ್ಬಾ! ನನ್ನ ಪೂರ್ವ ಜನ್ಮದ ಪುಣ್ಯಂತ ಗ್ಯಾನ ಮಾಡ್ಕಂಡ್ ಗಡದ್ದಾಗಿ ಕೋಳಿ ಊಟ ಮಾಡ್ನೆಂತ ಮರದ ಬುಡಲಿ ಅಡಂಗಿ ಕುದ್ದತ್. "ಯಾವುದರ್ನ ಹಿಡಿಯೊದು? ಹುಂಜನೇ ಹಿಡ್ದರೆ ಹೆಂಗೆ? ಬೇಡ ಬೇಡಾ ಅದರ ಹಿಡ್ದರೆ ನಾಕ್ ಊರಿಗೆ ಕೇಳ್ವಂಗೆ ಕೊರ್ರೆಗುಟ್ಟಿದೆ. ಮನೆಯವುಕೆ ಎಚ್ಚರಾಗಿ ಬಂದರೆ ನನ್ನ ಬೆನ್ ಹೊಡಿ ಮಾಡ್ತೊ. ಹಂಗಾರೆ ಯಾವುದಾದು? ಲಾಕಿಗ ಒಳೊ. ಛೇ! ಆ ಲಾಕಿಗ ಯಾವ ಲೆಕ್ಕ? ಆನೆ ಹೊಟ್ಟೆಗೆ ಹಲ್ಸ್‌ನ ತೋಳೆ ಸಿಕ್ಕಿದಂಗೆ ಅಷ್ಟೆ. ಆ ಮೊಟ್ಟೆ ಹೇಂಟೆನೇ ಬೆಸ್ಟ್. ಯಾಕೆ ಗೊತ್ತುಟ? ಅದರ ಹಿಡ್ಯಕೂ ಸುಲುಭ. ಹೇಂಟೆಗೆ ಓಡಿಕೂ ಬತ್ತದೆ, ಹಾರಿಕೂ ಬತ್ತದೆ ಸಿಕ್ಕಿಕಂಡದೆ.ಸಿಕ್ಕಿರೆ ತಿಂಬಕೂ ರುಚಿಯಾಗಿದ್ದದೆ"ಂತೆಲ್ಲಾ ಗ್ಯಾನ ಮಾಡಿಕಂಡಿರ್ಕನ ಕೋಳಿಗ ಬಂದೇಬುಟ್ಟೊ. ಕುದ್ಕ ನೆಲ ಕಚ್ಚಿ ಮಲ್ಗಿಕಂಡ್ ಸಾರಿಯಾಡಿಕಂಡ್, ಸಾರಿಯಾಡಿಕಂಡ್ ತೆಗ್ದ್ ಹಾರಿ ಹೇಂಟೆನ ಹಿಡ್ದೇ ಹಿಡ್ತ್. ಆಗ ಕೋಳಿಗೆಲ್ಲಾ ಬಾಂಬ್ ಸಿಡ್ದಂಗೆ ಕೊಟಕೊಟಾಂತ ಹಾರ್ದೊ. ಕುದ್ಕನ ಬಾಯಿಲಿದ್ದ ಹೇಂಟೆ ಕೊರ್ರೇ ಕೊರ್ರೇಂತ ರೆಕ್ಕೆ ಬಡ್ಡಾಡಿಕಂಡ್ ಜೀವಕ್ಕಾಗಿ ಭಿಕ್ಷೆ ಬೇಡ್ತಾ ಉಟ್ಟು. ಈ ಎಲ್ಲಾ ಸದ್‌ಗೆ ಮನೆಯವು ಎಚ್ಚರಾದೊ. ಅಯ್ಯೆ, ಮಕ್ಕ ಎಲ್ಲ ನಾಯಿ ಬುಟ್ಟ್‌ಕಂಡ್ ಚೂ.....ಅದ್ದಾ.....ಹಿಡೀಂತ ..... ಬೊಬ್ಬೆ ಹೊಡ್ಕಂಡ್ ಇತ್ತ ಓಡಿ ಬರ್ತಾ ಇರ್ಕನ ಕೋಳಿ ಕುದ್ಕನ ಬಾಯಿಂದ ಬುಟ್ಟ್ ಹೋತು. ಆಗ ಕುದ್ಕ ಮತ್ತೊಮ್ಮೆ ಹಾರಿ ಹಿಡ್ದ್ ಬೇಲಿ ನುಗ್ಗುವ ಹೊತ್ತಿಗೆ ನಾಯಿಗ ಬಂದೇಬುಟ್ಟೊ. ಬದ್ಕಿರೆ ಬೇಡಿಯಾರ್ ತಿಂಬೆಂತ ಕೋಳಿನ ಬುಟ್ಟ್ ಕುದ್ಕ ಓಡ್ತ್. ಕೋಳಿ ಕೊಸ್ಕ್ ಕೊಸ್ಕ್‌ತೇಳ್ಕಂಡ್ ಬಿದ್ ಒದ್ದಾಡ್ತಾ ಇರ್ಕನ ಮನೆಯವು ಅಲ್ಲಿಗೆ ಎತ್ತಿದೊ. ಕೋಳಿನ ಎತ್ತಿಕಂಡೊ. ಒಮ್ಮೆ ಮೈ ಅಲ್ಲಾಡ್ಸಿದ ಕೋಳಿ ಸತ್ತೇ ಹೋತು.

ಇತ್ತ ಗಂಡ ಗುಡಿಹೊದ್ ಮಲ್ಗಿತ್. "ಹೋಗಿನೆ ಮಕ್ಕಳೆ ಕೋಳಿ ಸಿಕ್ಕಿತ್‌ತ ಅಪ್ಪಂಗೆ ಹೇಳಿ"ಂತ ಅವ್ವ ಹೇಳ್ಕನ ಮಕ್ಕ ಓಡಿ ಹೋಗಿ ಹೇಳ್ದೊ. ಆಗ ಅಪ್ಪ "ಯಂತ ಮಕ್ಕಳೇ ಕೋಳಿ ಸಿಕ್ಕಿತಾ? ಒಳ್ಳದಾತ್. ಅಚ್‌ಕಟ್ ಮಾಡಿ"ಂತ ಹೇಳಿಕಂಡ್ ಗುಡಿಯೊಳ್ಗೆ ತಿರ್ಗಿ ಮಲ್ಗಿತ್. ಅವ್ವ ಮಕ್ಕ ಸೇರಿಕಂಡ್ ತೊಪ್ಪುಟ ಕಿತ್ತೊ. ಹೊಟ್ಟೆ ಬಗೆಕನ ನಾಳೆ ಇಕ್ಕೆಕೇಂತ ಇದ್ದ ಮೊಟ್ಟೆನ ನೋಡಿ "ಅಯ್ಯೋ ನಾಳೆ ಹಾಕಕಾದ ಮೊಟ್ಟೆ ಇತ್ತಲ್ಲಾ, ಇಲ್ಲಿ ನೋಡಿನೆ ಮಕ್ಕಳೇ ಮಣಿ ಮಣಿನಂಗೆ ಹೊಟ್ಟೆ ತುಂಬಾ ಮೊಟ್ಟೆ. ಆ ಕುದ್ಕನ

ದೊಂಡೆ ಕಟ್ಟೇಹೋಗಲಿ ಅದರ ಸಂತಾನ ಮುತ್ತಿಕೆಂ"ತೆಲ್ಲ ಅವ್ವ ಬಯ್ಕಂಡತ್. ಒಗ್ಗರಣೆ ಹಾಕಿ ಮಾಸನ ಬೇಯಕೆ ಇಸಿತ್. ಉಪ್ಪು ಹಾಕಿ ಮುಚ್ಚಿತ್. ಮೆಣ್ಸ್ ಕಡ್ಪು ಇಸ್‌ಕನ ಹಟ್ಟಿಗೆ ದನಗಳೂ ಬಂದೊ. "ನೋಡಿಕಣಿನೇ, ನಾ ಹೋಗಿ ದನ ಕಟ್ಟಿ ಬನ್ನೆ"ಂತ ಅವ್ವ ಹಟ್ಟಿ ಕಡೆ ಹೋತು.

ಇಲ್ಲಿ ಮಾಸ ಬೆಂದ ಗಮ, ಮೆಣ್ಸ್‌ದ್ ಗಮ ಕೂಡಿಕಂಡ್ ಇಡೀ ಮನೇಲಿ ಅಡಿಗೆದ್ ಗಮ್‌ಗಮಾ ಹೊಡಿತಾ ಇತ್. ಹಿಂಗೆ ಗಮನ ಹೊರ್ಡ್‌ಕನ ಚಿಪ್ಪು ಹಂದಿನಂಗೆ ಅಪ್ಪ ಮೆಲ್ಲೆ ಕಂಬುಳಿಂದ ಹೊರಗೆ ಬಾತ್. ಎದ್ ಬಂದ್ "ಎಲ್ಲಿ ಮಕ್ಕಳೆ ಹಞ ಜಾಗ ಬುಡಿನೆ. ಹಾಳ್ ಸಳಿ ಬುಡುದೇಲೆ"ಂತ ರಾಗ ಎಳ್ದ್ ಒಲೆ ಬುಡಲಿ ಕುದ್ದತ್. "ಆ ಸೆಡೆ ಕೊಡಿನೆ ಮಕ್ಕಳೆ. ಮಾಸ ಬೆಂದುಟಾಂತ ನೋಡ್ನೆ"ಂತ ಸೆಡೆನ ತಕಂಡ್ ಗೈಪುನ ಮೊಗಚಿತ್. ಒಂದ್ ತುಂಡು ತಕಂಡ್ ಕಚ್ಚಿತ್. "ಓಹೋ...... ಮೂಳೆಂದ ಮಾಸ ಬುಡ್ತಾ ಉಟ್ಟು, ಬೆಂದುಟು. ಜಾಸ್ತಿ ಬೇಯಕಾಗದ್"ಂತ ಹೇಳಿಕಂಡ್ ಇನ್ನೊಂದು ತುಂಡುನೂ ತೀಂತ್. ಮಕ್ಕಳಿಗೂ ಕೊಟ್ಟತ್. ಅಷ್ಟೊತ್ತಿಗೆ ಆ ಕುಪ್ಪಿ ಅಡೀಲಿದ್ದ ಕಳ್‌ನೂ ಗಲಾಸಿಗೆ ಬಗ್ಗಿಸಿಕಣ್ತ್. ಕುಡ್ಕಂಡ್ ಕುಡ್ಕಂಡ್ ಒಳ್ಳೊಳ್ಳ ತುಂಡುಗಳ್ನ ತಿಂಬಕೆ ಸುರು ಮಾಡ್ತ್. ಮಕ್ಕಳೂ ಅಪ್ಪನೊಟ್ಟಿಗೆ ಕೂಡಿಕಂಡ್ ಸಮಾ ತಿಂದೊ. ಕಡೆಗೆ ಚೆಟ್ಟಿಲಿ ಒಳ್ದದ್ ತಲೆ, ಕಾಲ್, ರೆಕ್ಕೆ, ಮೂಳೆ ಅಷ್ಟೆ. ಅಪ್ಪ ಕೈ ನೆಕ್ಕಿಕಂಡ್ ಒಲೆ ಬುಡಂದ ಎದ್ದತ್. ಗಂಡ್‌ಜನ ಕೋಳಿ ಕಾಲ್ ತಿಂಬಕಾಗದ್‌ಗಡ! ಯಾಕೆಂತೇಳ್ರೆ ಅವು ಮರ ಹತ್‌ಕನ ಕಾಲ್ ನಡ್ಗಿದೆ, ಹಿಂಗೆ ಯಾರೋ ಹೆಣ್ ಮಕ್ಕ ಬುದ್ಧಿ ಉಪಯೋಗಿಸಿ ಈ ಪದ್ಧತಿನ ಜಾರಿಗೆ ತಂದದ್ ಒಳ್ಳದಾತ್. ಸಧ್ಯ ಹೆಣ್ ಮಕ್ಕಳಿಗೆ ಈ ಕಾರಣಂದಾರ್ ಕೋಳಿ ಕಾಲ್ ತಿಂಬಕೆ ಸಿಕ್ಕಿದೆ. ಇಲ್ಲರೆ ಆ ಕಾಲ್‌ಗಳ್ನೂ ಕೆಲ ಗಂಡ್‌ಜನ ಗುಳುಂ ಮಾಡ್ತಿದ್ದೊ. ಚೆಟ್ಟಿ ಖಾಲಿ ಆಗ್ತಾ ಇರ್ಕನ ಅವ್ವ ಹಟ್ಟಿ ಕಡೆಂದ ಬಾತ್. ಬಂದಂಗೆ ಚೆಟ್ಟಿನ ನೋಡ್ತ್. ಅಲ್ಲಿ ನೋಡ್ರೆ ಎಂತುಟ್ಟು? ತಲೆ, ಕಾಲ್, ಕಣಕಣಾಂತ ಉರುಳುವೆ. ಬಾಕಿ? ಅವ್ವಂಗೆ ಸಿಟ್ ನೆತ್ತಿಗೇರ್ತಾ ಉಟ್ಟು. ಇನ್ನೇನ್ ಗಂಡನೊಟ್ಟಿಗೆ ರಂಪ ಮಾಡೊಕೂಂತ ಗ್ಯಾನ ಮಾಡ್ಕನ ಹೊರ್ಗ್ಗಿಂದ "ಮನೆಲಿ ಯಾರ್ ಒಳರೀಂತ" ಕರ್ದ್ದಂಗಾತ್ "ಮನೇಲಿ ಯಾರಿರೊಕು! ನಾವೇ ಮನೆಯವು ಇರ್ದುತ" ಅಪ್ಪ ದೊಂಡೆ ದಪ್ಪ ಮಾಡಿ ಹೇಳಿಕಂಡ್ ಹೊರೆಗೆ ಹೋಕನ ನಂಟ ನಿತ್ತುಟು. ನಂಟ ಮತ್ತಿನ್ಯಾರೂ ಅಲ್ಲ. ಹೆಣ್‌ನ ಅಣ್ಣ!! "ಓ! ಬನ್ನಿ ಭಾವಾ ಬನ್ನಿಂತ" ಅಪ್ಪ ಕರ್ತ್. ಅವ್ವ ಕಣ್ ನೀರ್ ಪೂಜಿಕಂಡ್ ಕಾಲ್ಗೆ ನೀರ್ ಕೊಟ್ಟತ್. ಮಕ್ಕ ಮಾವನ ಕಾಲಿಗೆ ಬಿದ್ದೊ.

ಅದ್ ಇದ್ ಮಾತೆಲ್ಲ ಆತ್. ಕಾಫಿ ಗೀಫಿ ಕೊಟ್ಟಾತ್. ರಾತ್ರೆ ಆಗ್ತಾ ಉಟ್ಟು. ಮನೆ ತುಂಬಾ ಕೋಳಿ ಮಾಸದ ಗಮನ. ಆದ್ರೆ ಊಟಕ್ಕೆ ಮಾಸ ಇಲ್ಲೆ. ಯಂತ ಮಾಡ್ದು? ಇಂಥಾ ಗಂಡನ ಕಟ್ಟಿಕಂಡ್ ನನ್ನ ಹಣೆಬರ ಹಿಂಗಾತಲ್ಲಾಂತ ಬೇಜಾರ ಮಾಡಿಕಂಡ್

ಅವ್ವ ಇನ್ನೊಂದು ಕೋಳಿನ ಕುತ್ತಿಗೆ ಮುರ್ತ್. ಇಷ್ಟೆಲಾದ್ರೂ ನಂಟನಕ್ಕಲೆ ಅಪ್ಪ ಮಕ್ಕ ಕೂಡಿಕಂಡ್ ಇಡೀ ಕೋಳಿನ ಒಲೆ ಮೇಲೆಂದಲೇ ತಿಂದರ ಮಾತ್ರ ಹೇಳ್ತ್‌ಲೆ. "ಒಳಗಿನ ಗುಟ್ಟು ಶಿವನೇ ಬಲ್ಲಂತ" ಹೇಳ್ವಂಗೆ ಅಣ್ಣನೊಟ್ಟಿಗೆ ಗಂಡನ ಬಗ್ಗೆ ದೂರು ಹೇಳ್ಡು ಸರಿಯಲ್ಲಂತ ಸುಮ್ಮನಾತ್. ಸರಿ, ಗೈಪೂ ಆತ್. ಎಂಟತ್ ರೊಟ್ಟಿನೂ ಮೆತ್ತಿತ್. ಊಟಕ್ಕೆ ಕುದ್ರೊ. ಗಂಡ ಹೆಣ್‌ನ ಮುಖ ನೋಡಿಕಿಲ್ಲೆ. ಹೆಣ್ಣೂ ಸಾ ಹಂಗೇ ಮಾಡ್ತ್. ಬೆಸಗೆಲಿ ಒಂದೆರಡ್ ಹೋಳುನ ಇಸಿತ್. ಅಣ್ಣನ ಬಟ್ಲ್‌ಗೆ ಗೈಪು ಇಕ್ಕಿತ್. ಗಡಿಬಿಡಿಲಿ ಇಕ್‌ಕಾಕನ ಏನಾತ್? ಅಣ್ಣನ ಬಟ್ಲ್‌ಗೆ ಎರ್ಡ್ ಕೋಳಿ ತಲೆ ಬಿದ್ದೋತು. ಇದೇನ್? ನೀ ಕೊಂದದ್ ಒಂದು ಕೋಳಿ. ಇಲ್ಲಿ ನೋಡ್ರೆ ಎರ್ಡ್ ತಲೆ ಉಟ್ಟಲೆ. ನಿಮ್ಮ ಕೋಳಿಗೆ ಎರ್ಡ್ ತಲೆ ಉಟ್ಟಾಂತ ಆಶ್ಚರ್ಯಪಟ್‌ಕಂಡ್ ಅಣ್ಣ ಕೇಳ್ತಾ ಉಟ್ಟು. ಗಂಡ ಹೆಣ್ ಮುಖ ಮುಖ ನೋಡಿಕಂಡೊ. ಹೇಳ್‌ಬಡಾಂತ ಗಂಡ ಕಣ್ ಬಾಯಿಲಿ ಸನ್ನೆ ಮಾಡ್ತಾ ಉಟ್ಟು. ಈ ಪೀಕಲಾಟನ ಮಕ್ಕಳೂ ನೋಡ್ತಾ ಒಳೊ, ಕುಟುಕುಟುಂತ ನಗಾಡ್ತ ಒಳೊ. ಒಳಗೊಳಗೆ ಸಿಟ್ ಕೊದಿತಾ ಇತ್ತಲ್ಲ. ಅದೆಲ್ಲಾ ರಟ್ಟೆ ಹೋತು. ನಗೆ ತಡೆಕೆ ಬೊತ್ತದೆ ಅಪ್ಪ ಅವ್ವ ಮಕ್ಕ ಎಲ್ಲ ಸೇರಿಕಂಡ್ ಜೋರಾಗಿ ನಗಾಡ್ತಾ ಒಳೊ. ನಂಟಂಗೆ ಇದರ ತಲೆ ಬಾಲ ಒಂದೂ ಗೊತ್ತಾತ್ಲೆ. ಬುಟ್ಟ ಬಾಯಿ ಬುಟ್ಟಂಗೆ ನಂಟ ಕುದ್‌ಕಣ್ತ್. ಮತ್ತೆ ಅವ್ವನೇ ಅಪ್ಪನ ಶೂರತನನ ನಗಾಡಿಕಂಡೇ ಹೇಳ್ಕನ ಅಣ್ಣನೂ ಬಿದ್ ಬಿದ್ ನಗಾಡ್ತ್.



# 16. ಚೆನ್ನಿ ಗೂಡೆ

**ಚೆ**ನ್ನಿ ಗೂಡೆ ಹೆತ್ತುಟು! ಹೆರಿಗೆ ಸಮಯಲಿ ಕಿರ್‌ಚಾಡಿ, ಬೊಬ್ಬೆ ಹಾಕಿ ರಂಪ ಮಾಡಿ ಅಂತೂ ಹೆರಿಗೆ ಆತ್. ಅದೂ ಮನೇಲಿ ಹೆತ್ತದ್. ಆಸ್ಪತ್ರೆ ಗೀಸ್ಪತ್ರೆಂತ ಸುತ್ತಾಡ್ತ್‌ಲೆ. ಯಾಕೆಂತೇಳಿರೆ ಅಲ್ಲಿ ಮಾತೆತ್ತಿರೆ ಆಪರೇಷನ್! ಕೂಸು ತಿರ್‌ಗಿತ್‌ಲೆ ಹಂಗೆ ಉಟ್ಟು ಹಿಂಗೆ ಉಟ್ಟುತೇಳಿ ಮಂಗ ಮಾಡಿ ದುಡ್ ಎಳೆಕೆ ನೋಡುವೆ "ನಾನಂತು ಸೊಸೆನ ಆಸ್ಪತ್ರೆಗೆ ಮಾತ್ರ ಸೇರ್ಸುದ್‌ಲೇಂತ" ಅತ್ತೆದ್ ಹಠ! ಹಾಂಗಾಗಿ ಚೆನ್ನಿಗೂಡೆ ಮನೇಲೆ ಹೆರಿಕಾತ್.

ಚೆನ್ನಿಗೂಡೆ ಒಂದ್ ವಾರದ ಹಸೀ ಬಾಣಂತಿ. ಕೂಸ್ನ ನೋಡ್ರೆ ಇದ್ ಯಂತದೊಂದು ಪ್ರಾಣೀಂತ ಒಂಥರಾ ಮುಖ ಮಾಡಿಕಂಡದೆ. ಅದ್ಕೆ ಹಾಲ್ ಕುಡ್ಸುದ್ ಹೆಂಗೆ, ಅದರ ಎತ್ತಿಕಂಬದ್ ಹೆಂಗೆ, ಮಲಗ್ಸಿಕಂಬೊದ್ ಹೆಂಗೇಂತ ಗೊತ್ತುಟಾ? ಕೂಸು ಮರ್ಟರೆಮನಿ ಇವ್ಳ್ಯಾ ಸ ಮರ್ಟ್‌ಕಂಬೊದು ! ಅದರ್‍ನ ಸಮಾಧಾನ ಮಾಡಿಕೂ ಗೊತ್ಲೆ. ಕೂಸೇನಾರ್ ಹಾಸಿಗೆ 'ಮೆತ್ತಂಗೆ' ಮಾಡಿಕಂಡ್ರೆ ಅಯ್ಯಯೋಂತೇಳ್ದೆ. ಅದೇನಾರ್ ಹೇತ್‌ಕಂಡ್ರಂತೂ ಮೂಗ್ ಮುಚ್ಚಿಕಂಡ್ ನೋಡ್ದೆ. ಥತ್‌ತೇರಿಕೆ ಇನ್ನೂ ಈ ಕೂಸು ಅನ್ನ ತಿಂಬಕೆ ಸುರ್ ಮಾಡ್ತ್‌ಲೆ. ಬರೀ ಹಾಲ್ ಕುಡ್ದದಕ್ಕೆ ಹೀಂಗೆ ಹೇತರೆ ಇನ್ ಅನ್ನ ತಿಂಬಕೆ ಸುರು ಮಾಡಿರೆ ಹಾಸಿಗೇನೇ ಕಕ್ಕಸ್‌ಮನೆ ಮಾಡಿ ಕಂಡರೆ ನಾ ಏನ್ ಮಾಡ್ದು? ಇದೆಲ್ಲಾ ಯಾಕೆ ಬೇಕಿತ್? ಹಾ ವೆಂಕಟರಮಣಾಂತ ಮರ್ಟ್‌ಕಂಡದೆ! ನಿಜ ಹೇಳ್ಳೊಕುಂತೇಳಿರೆ ಚೆನ್ನಿ ಗೂಡೆಗೆ ಏನೂ ಗೊತ್‌ಲೆ. ಅವ್ಳು ಸೀರೆ ಉಡ್ವ ಪೊರ್ಲ್ ನೋಡೋಕು. ಕಂಬಕೆ ಬಟ್ಟೆ ಸುತ್ತುವೆಲ್ಲಾ ಹಾಂಗೆ ಸೀರೆನ ಸುತ್ತಿಕೆ ಗೊತ್ತುಟ್ಟಿಲ್ಲದೆ ನೆರಿಗೆ ಮಾಡಿಕ್ಕಾಗಲಿ, ಸೆರಗ್ ಹಾಕಿಕಂಬಕ್ಕಾಗಲಿ ಗೊತ್‌ಲೆ.

ಪಾಪ ಚೆನ್ನಿದ್ ತಪ್ಪಲ್ಲ. ಅಪ್ಪ ಅವ್ವ ಮಾಡ್ದ್ ತಪ್. ಚೆನ್ನಿ ಆಡಿಕಂಡಿದ್ದ ಗೂಡೆ. ಹದ್ನೈದ್ ಹದ್ನಾರ್ ವರ್ಷದ ಗೂಡೆ. ಯಾರೋ 'ತಂದ್' ಬಂದೊಳೊ. ಈಗ ಲಗ್ನ ಕೂಡಿ ಬಂದುಟ್ಟು. ಈಗಳೇ ಲಗ್ನ ಮಾಡದೆ ಹೋದ್ರೆ ಇನ್ ಮೂವತ್ತೋ ನಲ್ವತ್ತೋ ವರ್ಷಕ್ಕೇ ಲಗ್ನಾಂತ ಯಾರೋ "ತಲೆ ಕೆಟ್ಟವು" ಹೇಳ್ದೊಗಡ. ಸ್ವಂತ ಮೆದುಳು ಇಲ್ಲದ ಈ ಅಪ್ಪ-ಅವ್ವ ಅದೇ ಸೈಂತ ಒಪ್ಪಿಕಂಡೋ. ಗೂಡೆನ ಬೇಗ ದಾಟ್ಸಿಬುಡುದೇ ಒಳ್ಳೆದ್‌ತ ಗ್ಯಾನ ಮಾಡ್ದೊ. ಹಿಡ್ದ್ ಮೊದುವೆ ಮಾಡಿ ಕೊಟ್ಟೊ. ಅದಾ ತಕಣೆ, ಈಗ ಗೂಡೆದ್ ಪರ್‍ದಾಟನ ಯಾರೊಟ್ಟಿಗೆ ಹೇಳ್ದು?

ಹಳ್ಳಿಲಿ ಬಾಣಂತಿ ಮಾತಾಡ್ಸಿಕೇಂತ ಬಂದವೆ. ಬಂದವು ಹೀಂಗೆಲ್ಲ ಹಾಂಗೆ, ಹಾಂಗೆಲ್ಲ ಹೀಂಗೆಂತ ಚೆನ್ನಿಗೆ ಬುದ್ಧಿ ಹೇಳ್ತಾ ಇದ್ದವೆ. ಚೆನ್ನಿದ್ ಅತ್ತೆ ಸ್ವಲ್ಪ ಚುರುಕ್ ಉಟ್ಟು. ಬಂದವರ್‍ನ ಸುಧಾರ್ಸಿಬುಟ್ಟದೆ. ಬಂದವು ಕಾಫಿ-ಗೀಫಿ ಕುಡ್ದ್, ಎಲೆ ಅಡಿಕೆ

ತಿಂದ್, ಅಂಗಳ ತುಂಬಾ ಉಗ್ದ್ ಹೋದವೆ. ಚೆನ್ನಿದ್ ಮಾಂವ ಮೂಲೆಲೆ.

ಒಂದಿನ ಚೆನ್ನಿ ತಿಂಬೊದರ್ಲಿ ಹಳಿ ಹೆಚ್‌ಕಮ್ಮಿ ಮಾಡಿಬುಡ್ತ್. ತಿಂದ್‌ಕಂಡಿದ್ದ ಬಾಯಿ ನೋಡಿ. ಇವ್ಳಿಗೆ ಬಾಯಿ ಕಟ್ಟಿಕಾತ್‌ಲೆ. ಜರ ಸುರಾತ್. ಅದೂ ಸಳಿಜರ! ಅಯ್ಯೋ ಹಿಂಗಾತಲೇಂತ ಅತ್ತೆ ತಲೆ ಬಿಸಿ ಮಾಡಿಕಂಡ್ ಕಂಡಕಂಡ ದೇವ್ರಿಗೆ ಹರಿಕೆ ಮಾಡ್ತ್. ಯಾವ್‌ಯಾವ್ದೋ ಮದ್ ಮಾಡ್ತ್. ಚೆನ್ನಿಗೆ ಸೊಯನೇ ಇಲ್ಲೆ !! ಅವ್ಳ ಅಪ್ಪನೂ ಬಾತ್‌ಲೆ, ಅವ್ವನೂ ಬಾತ್‌ಲೆ. ಅತ್ತೆಗೆ ತಕುಪುಕು ಸುರಾತ್. ಎಲ್ಲಾರ್ ಸೊಸೆ ಸತ್‌ಗಿತ್ ಹೋದರೆ ಏನ್ ಮಾಡ್ದು? ಕೂಸು ತಬ್ಬಲಿ ಆಗಿಬುಡ್ದಲೆ. ಅದ್ ಬೇರೆ ಗಂಡ್ ಕೂಸು. ಅಯ್ಯೋ ಗಂಡೋ ಹೆಣ್ಣೋ. ಅದ್ ಯಾವುದಾದ್ರೇನ್. ಎಲ್ಲಾ ಒಂದೇ. ಅಂತೂ ಕೂಸ್ನ ತಬ್ಬಲಿ ಆಕೆ ಬುಡಿಕಿಲೆಂತ ಚನ್ನಪ್ಪಣ್ಣನ ಮನೆಗೆ ಅತ್ತೆ ಓಡ್ತ್. "ಹೀಂಗೆ ಹೀಂಗೆ ಆಗೋಗ್‌ಟು. ಒಮ್ಮೆ ಜೀಪ್ ತಕಬಾ. ಎಟ್ಟಾರೂ ಆಗ್ಲಿ. ಒಮ್ಮೆ ಆಸ್ಪತ್ರೆಗೆ ಕರ್‌ಕಂಡ್‌ಪೋಯಿ"ಂತೇಳಿ ಆಸ್ಪತ್ರೆಗೆ ಕರ್ಕಂಡ್ ಹೋತು. ಅಬ್ಬಾ! ಸಧ್ಯ ಚೆನ್ನಿ ಗೂಡೆದ್ ಜೀವ ಉಳ್ತ್.

ಇತ್ತ ಗಂಡ ಹೆಂಗುಟ್ಟುತ ನಾ ಹೇಳ್ತ್‌ಲೆ. ಅಂವ ಅರೆಪಿರಾಂದ. ಅವಂಗೆ ಜವಾಬ್ದಾರಿಂತೇಳ್ದು ಇಲ್ಲೆ. ತೊಂಬೆ ತೇಲುವಷ್ಟು ಕುಡ್ದದೆ. ಈಗಂತೂ ಈ ಬೈನೆ ಕಳ್ ಬೇರೆ ಸುರಾವುಟು. ಬೆಳಿಗ್ಗೆ ಎದ್ದರೆ ಶಿವ ಶಿವಾಂತೇಳಿಕಂಡ್ ಸೀದ ಬೈನೆ ಬುಡಕ್ಕೆ ಹೋದೆ. ಹೊಟ್ಟೆ ತುಂಬ ಕುಡಿಯೋದು. ಅರ್ಧಗಂಟೆ ಒಯ್ಯೋದ್. ಮಧ್ಯಾಹ್ನ ಹೊತ್ತಿಗೆಲ್ಲಾ ಜೂಂಗಿ ಕಂಡೇ ಇದ್ದದೆ. ಸಾಯಂಕಾಲ ಆತೋ ಇಲ್ಲೆಯೋ ಪುನಃ ಹೋದು ಬೈನೆ ಬುಡಕ್ಕೆ. ಹೆಣ್ಣಿಗೇನಾರ್ ಮದ್ ತಂದ್ ಕೊಡನೋ, ಕೂಸ್‌ಗೇನಾರ್ ಕಷ್ಟ ಆದು. ಅದ್ ಯಾವ್ದೂ ಗ್ಯಾನ ಇಲ್ಲದ ಗಂಡ. ಚೆನ್ನಿ ಪಾಲಿಗೆ ಅಂವೊಬ್ಬ ಗಂಡಲ್ಲ,ಬರೀ ದಂಡ!

ಅಪ್ಪನೂ ಬಾತ್‌ಲೆ, ಅವ್ವನೂ ಬಾತ್‌ಲೆ, ಗಂಡನೂ ಹೀಂಗೆ. ಸಂಸಾರನ ಹೆಂಗೆ ನಿಭಾಯ್ಸೊಕುಂತೇನಾರ್ ಚೆನ್ನಿಗೆ ಗೊತ್ತುಟಾ? ಅದೇನೋ ಕಷ್ಟಗಾರ್ತಿ ಅತ್ತೆ ಆದಕ್ಕೆ ಆತ್. ಇಲ್ಲರೆ? ನೀವ್ ಏನೇ ಹೇಳಿ ಗೂಡೆನ ಮೊದುವೆ ಮಾಡೊಕೊರೆ ಕಮ್ಮಿಂತೇಳಿರೆ ಇಪ್ಪತ್ ವರ್ಷನಾರ್ ಆಕು. "ಮರನೋಡಿ ಬಳ್ಳಿ ಬುಡು"ಂತ ಹೇಳ್ವಂಗೆ ಒಳ್ಳೆ ಗಂಡನ್ನೆ ನೋಡಿ ಮೊದುವೆ ಮಾಡೋಕು.



# 17. ಜಾಣ ಪೆದ್ದ ವೆಂಕು

ಒಂದಿನ ವೆಂಕುನ ಅವ್ವ ವೆಂಕುನೊಟ್ಟಿಗೆ "ಪಾರೆ ಮನೆ ಚೋಮುಣಿನವುಕೆ ಎರ್ಡ್ ಕೋಳಿ ಕೊಡಿಕೆ ಉಟ್ಟು. ನೀ ಹೋಗಿ ಕೊಟ್‌ಬಾ"ಂತ ಹೇಳ್ತ್. ಆಗ ವೆಂಕು ಆತವ್ವಾ ಬೇಗ ಹಿಡ್ದ್ ಕೊಡುಂತೇಳ್ತ್. ಆಗ ಸಾಯಂಕಾಲ ನಾಕ್ ಗಂಟೆ ಹೊತ್. ಅವ್ವ ಎರ್ಡ್ ಲಾಕಿಗಳ ಹಿಡ್ದ್ ಕೊಟ್ಟತ್. ಇಂವ ಕೋಳಿಗಳ ಹಿಡ್ಕಂಡ್ ಹೊರ್ಟತ್. ಹೊರ್ಡ್ದೋ ರಭಸಲ್ಲಿ ಕೋಳಿ ಕಾಲಿಗೆ ಹಗ್ಗ ಕಟ್ಟತ್ಲೆ. ಸಣ್ಣ ಕೋಳಿಗಲ್ಲ, ಹೆಂಗಾರ್ ಹಿಡ್ಕಂಡ್ ಹೋವೆಂತೇಳಿ ಒಂದೊಂದರ ಒಂದೊಂದ್ ಕೈಲಿ ಹಿಡ್ಕಂಡತ್. ಒಂದೆರ್ಡ್ ಫರ್ಲಾಂಗ್ ದೂರ ಹೋತೋ ಇಲ್ಲೆಯೋ. ಹಿಂಗೇ ಹೋಗ್ತಾ ಇರಕನ ಏನಾತ್? ಇಂವ ಹಾಕಂಡಿದ್ದ ಚಡ್ಡಿ ಇವನ ಮಾತ್ ಕೇಳುವಂಥದ್ದಲ್ಲ. ಆ ಚೆಡ್ಡಿದ್ ಕೊಂಡಿ ಕಣ್ ದೊಡ್ಡದಾಗಿ ಕೊಂಡಿ ಆಗಾಗ ಬಿಚ್ಚಿಬಿಚ್ಚಿ ಹೋದು. ಇವಂಗೆ ಈ ಚೆಡ್ಡಿ ಈಗಳೇ ಕೈಕೊಟ್ಟದೆಂತ ಗೊತ್ಲೆ. ವೆಂಕು ಬೇಗ ಬೇಗ ಹೋಗ್ತಾ ಇರಕನ ದಾರಿ ಮಧ್ಯಲಿ ಚೆಡ್ಡಿದ್ ಕೊಂಡಿ ಬಿಚ್ಚಿ ಹೋತು. ಚೆಡ್ಡಿ ಜಾರಿ ಬಿದ್ದೋತು. ಈಗ ಏನ್ ಮಾಡ್ದು? ಒಂದೊಂದು ಕೈಲಿ ಒಂದೊಂದು ಕೋಳಿಗ ಒಳೊ. ಕೋಳಿನ ಬುಟ್ಟರೆ ಅದ್ ಮತ್ತೆ ಸಿಕ್ಕಿಕಿಲೆ. ಹಿಂಗೆ ನಿತ್‌ಕಂಡ್ರೆ ದಾರಿಲಿ ಹೋಗವುಕೆ ಬರೋವುಕೆ ಪುಕ್ಸಟೆ ಪ್ರದರ್ಶನ ಬೇರೆ! ಇಂಥಾ ಸಂಕಟಲಿ ವೆಂಕುನ ಗೋಳುನ ಯಾರೊಟ್ಟಿಗೆ ಹೇಳ್ದು? ಅತ್ತಂದ ಬೇರೆ ಯಾರೋ ಬರ್ತಾ ಒಳೊ. ಹಾಳಾಗಿ ಹೋಗಲಿಂತ ಎರಡೂ ಕೋಳಿಗಳ ಬುಟ್ಟತ್. ಚೆಡ್ಡಿನ ಎತ್ತಿ ಸೊಂಟಕೆ ಸಿಕ್ಕಿಸಿಕಂಡತ್. ಕೊಂಡಿನ ಹಾಕಿತ್. ಅಲ್ಲೇ ಬೇಲಿಲಿದ್ದ ಬಳ್ಳಿನ ಎಳ್ದ್ ಸೊಂಟಕೆ ಸುತ್ತಿಕಂಡತ್. ಇಷ್ಟೆಲ್ಲಾ ಆಕನ ಕೋಳಿಗ ಯಾರ್ದೋ ತೋಟದೊಳಗೆ ನುಗ್ಗಿಕಂಡೊ. "ಕೋಳಿ ಬಾಬಾ, ಇಂದ ಬಾಬಾ"ತ ಕರ್ತ್. ಹೆಂಗೆ ಕರ್ದರೂ ಕೋಳಿಗ ಅತ್ತತ್ತಳೇ ಹೋದೊ. ಈಗ ಏನ್ ಮಾಡ್ದು? ಮನೆಗೆ ಹೋದರೆ ಅವ್ವ ಬಡಿಯದೆ ಬುಡಿಕಿಲೆ. ಬಡ್ದರೂ ಬಡೇಲಿಂತ ಧೈರ ಮಾಡಿಕಂಡ್ ಮನೆಗೆ ಹೋಗಿ ಹಿಂಗಿಂಗಾತವ್ವಾಂತೇಳ್ಕನ ಅವ್ವಂಗೂ ನಗೆ ತಡೆಕೆ ಬೊತ್ತಾತ್.

ಇನ್ನೊಮ್ಮೆ ಹಿಂಗಾತ್: ಮನೆಗೆ ಯಾರೋ ನಂಟ ಬಂದುಟ್ಟುತೇಳಿ ವೆಂಕುನ ಅಂಗ್ಡಿಗೆ ಕಳ್ಸಿತ್. ಅರ್ಜೆಂಟಾಗಿ ಎರ್ಡ್ ಮೊಟ್ಟೆ ತಕಂಬಾ. ಅಂಗ್ಡಿಲಿ ಜನ್ರ ಬಾಯಿ ಬಾಯಿ ನೋಡಿಕಂಡೇ ನಿಲ್‌ಬಡಂತೇಳಿ ಕಳ್ಸಿತ್. ವೆಂಕು ಅಂಗ್ಡಿಗೆ ಓಡಿಕಂಡೇ ಹೋತು. ಹೋದಂಗೆ ಎರ್ಡ್ ಮೊಟ್ಟೆ ತಕಂಡತ್. ಆ ಮೊಟ್ಟೆನ ಕೈಲಿ ಹಿಡ್ಕಂಡತ್‌ಲೆ. ಸುರಾಲ್ ಜೋಬಿಗೆ ಒಂದೊಂದ್ ಮೊಟ್ಟೆ ಹಾಕಂಡತ್. ಓಡಿಕಂಡೆ ಬಾತ್. ಆ ಸುರಾಲ್ ಹಾಕಿರೆ ಬಿಚ್ಚಿಕೆ ಬತ್ತದೆ, ಬಿಚ್ಚಿರೆ ಹಾಕಿಕೆ ಬತ್ತದೆ. "ಟೈಟ್‌ಪ್ಯಾಂಟ್‌ದ್" ಕಾಲ. ಹಿಂಗಿರುವ ಆ ಸುರಾಲ್‌ದ್ ಜೋಬು ಹೆಂಗಿರ್ದು? ಇಂವ ಓಡಿಕಂಡೇ ಬಾತ್ ನೋಡಿ. ಬಂದ್ ಮನೆಲಿ ನೋಡಕನೇ ಗೊತ್ತು ಮೊಟ್ಟೆ ಏನಾತ್‌ತ. ಎರ್ಡೂ ಮೊಟ್ಟೆ ಒಡ್ದೋಗಿ ಎರ್ಡೂ ಕಾಲಿಗಾಗಿ ಮೊಟ್ಟೆದ್ ಲೋಳೆ ಇಳ್ದ್ ಬರ್ತಾ ಇತ್ತ್.

ಇಂಥಾ ಜಾಣ ಪೆದ್ದರ್ ನಿಮ್ಮ ಕಡೆನೂ ಒಳೋನಾ?



# 18. ಪುಟ್ಟಯ್ಯನೂ ಹೆಣ್‌ನೂ........

**ಪುಟ್ಟಯ್ಯ** ತಕುಪುಕು ಹೈದ. ಇರ್‌ಲ್ಲಿ ಹೊರಗೆ ಒಬ್ಬನೇ ಹೋದಂವ ಅಲ್ಲ. ಅವ್ವ ಒಟ್ಟಿಗೆ ಇರೊಕು. ಅವ್ವ ಏನಾರ್ ಇರ್‌ಲ್ಲಿ ಇಲ್ಲದೆ ಹೋತೋ ಈ ಹೈದ ಹೆದ್ರಿ ಗುಬ್ಬಚ್ಚಿ ಮರಿಯಂಗೆ ಆಗೋತಿತ್. ಮನೆಲಿ ಅವ್ವನ ಹೊರತು ಬೇರೆ ಯಾರಿದ್ದರೂ ಇವಂಗೆ ಸರಿ ಆಕಿಲ್ಲೆ. ಅವ್ವ ಇಲ್ಲದ ಇರ್‌ಲ್ಲಿ ಹಾಸಿಗೆ ಚಂಡಿ ಆಗೋತಿತ್. ಬೇಸಿಗೆಲಾದರೆ ಹೆಂಗೂ ಆದೆ. ಹಾಸಿಗೆನ ಬಿಸ್‌ಲಿಗೆ ಹಾಕಿ ಒಣಗ್‌ಸ್‌ತಿದ್ದೊ. ಮಳೆಗಾಲಲೇ ಇರ್ದು ಕಷ್ಟ. ಮುಂದೇ ಶೀತ. ಒಗ್ದ ಬಟ್ಟೆನ ಒಣಗ್‌ಸ್‌ದೇ ಕಷ್ಟ. ಅಂತರ್‌ಲಿ ಹಾಸಿಗೆನೇ ಚಂಡಿ ಆದರೆ? ಓಡ್‌ಲಿ ಕೆಂಡನ ತಂದ್ ಕಟ್‌ಲ್ಲಿ ಕೆಳಗೆ ಇಸಕಾಗಿತ್.

ಪುಟ್ಟಯ್ಯ ಯಾಕೆ ಅಷ್ಟೊಂದ್ ಪುಕ್ಕಲಾತ್? ಇದ್ಕೆ ದೊಡ್ಡವೇ ಕಾರಣ. ಇಂವ ಸಣ್ಣವಾಗಿರಕನ ಯಾರೋ ಬೇಡಾದ ಕಥೆ ಹೇಳಿ ಹೆದ್ರಿಸಿ ಬುಟ್ಟೊಳೊ. ಆ ಹೆದ್ರಿಕೆ ಹೈದನಲ್ಲಿ ಗಟ್ಟಿಯಾಗಿ ಕುದ್‌ಬುಟ್ಟಿತ್. ಕಣಿ ಕೇಳ್ಸಿದೊ. ಬಲಿ ತೆಗ್ಸಿದೊ. ಏನ್ ಮಾಡಿರೂ ಈ ಹೈದ ಪುಕ್ಕಲನೇ ಆಗಿ ಬುಡ್ತ್. ಹೈದ ಗಟ್ಟಿಮುಟ್ಟಾದ ಆಳ್ ಆಕನ ತಲೆ ಬೆಳ್ಡವು ಈ ಹೈದಂಗೊಂದು ಮೊದುವೆ ಮಾಡಿರೆ ಎಲ್ಲಾ ಸರಿ ಆದೆತ ಹೇಳ್ದೊ. ಅದೂ ಸರಿತ ಮನೆಯವುಕೆ ಆತ್.

ಹೆಣ್ ನೋಡ್ದೊ. ಗಂಡ್‌ನ ಮೈಕಟ್ ನೋಡಿ ಆಕನ 'ಸೈಂತ' ಒಪ್ಪಿಗೆ ಕೊಟ್ಟೊ ಆತ್. ಧಾಂ ಧೂಂತ ಮದುವೆನೂ ಆಗೋತ್. ತುಪ್ಪ ತಕ್ಕಂಡೋದು ಬಾದೆಲ್ಲ ಉಟ್ಟಲ್ಲ, ಅದೂ ಆತ್. ಹತ್ತೊಳೆದು, ಆಟಿ ಕೂರ್ದ್ದೊ ಆತ್. ಇಷ್ಟೆಲ್ಲಾ ಆಕನ ಪುಟ್ಟಯ್ಯ ಎಲ್ಲಿಟ್ಟು? ಹೆಣ್‌ನೊಟ್ಟಿಗೆ ಉಟ್ಟು. ಹೆಣ್‌ನ ಬುಟ್ ಒಂದಿನನೂ ಇದ್ದಂವ ಅಲ್ಲ. ನೋಡ್ಡವು ಹಾ! ಒಳ್ಳ ಗಂಡನ ಪಡ್ದೊಳಂತೆಲ್ಲಾ ಹೊಗ್‌ಳ್ದೊ. ಒಳ್ಳ ಅಳಿಯನೇ ಸಿಕ್ಕುಟ್ಟುತ ಅತ್ತೆ ಮಾವ ಭುಜ ಕೊಣ್ಸಿದೊ.

ಆ ವರ್ಷ ಗದ್ದೆಗೆ ಕಾಡಂದಿಗಳ ಕಾಟ ಜೋರಾತ್. ಇರ್‌ಲ್ಲಿ ಗದ್ದೆಲಿ ಮಲ್ಗದೆ ಹೋತೋ-ಆ ವರ್ಷದ ಬೆಳೆದ್ ಕಥೆ ಮುಗ್ದಂಗೆ. ಇರ್‌ಲ್ಲಿ ಮಲ್ಗವು ಯಾರ್? ಆಳ್‌ನ ಗದ್ದೆಲಿ ಮಲ್‌ಗಿಸಿತೋ ಬೆಳೆ ಪೂರಾ ಹಾಳ್. ಸರಿ, ಪುಟ್ಟಯ್ಯ ಧೈರ್ಯ ಮಾಡಿ ಇರ್‌ಲ್ಲಿ ಗದ್ದೆಲಿ ಮಲ್ಗಿಕೆ ತಯಾರಾತ್. ಆದರೆ ಅಂದ್ ಬೆಳಿಗ್ಗೆಂದೇ ಮುಖ ಬಾಡಿ ಹೋತು. ಮಧ್ಯಾಹ್ನದ ಊಟ ಸರಿಯಾಗಿ ಸೇರ್‌ತ್‌ಲೆ. ಕತ್ತಲೆ ಆಕಂಡ್ ಬಾಕನ ತುಟಿ ಒಣಂಗಿತ್. "ನೋಡ್ಡೆ, ಜರ ಬಂದುಟಾಂತ" ಹೆಣ್‌ಗೆ ಹೇಳ್ತ್. ಹೆಣ್ ಇವನ ಹಣೆ ಮೇಲೆ ಕೈ ಮಡ್ಗಿ ನೋಡಕನ ಹೌದು, ಜರ!

ನೀವು ಇರ್‌ಲ್ಲಿ ಗದ್ದೆಗೆ ಮಲ್ಗಿಕೆ ಹೋದುಬೇಡ. ಜರ ಜೋರಾದರೆ ನೋಡುವು ಯಾರ್? ನೀವ್‌ಗೆ ಯಾಕೆ ಜರ ಬಾತ್? ನಾನೇ ಇರ್‌ಲ್ಲಿ ಗದ್ದೆಗೆ ಹೋಗಿ ಚೂ ಕೂಡಿ

ಬನ್ನೆತ ಹೆಣ್ ಹೇಳಕನ 'ಥೂ ನಾನೆಂತ ಗಂಡ್'ತ ಮನ್‌ಸ್‌ಲೇ ಬೇಜರ ಮಾಡಿಕಂಡತ್.

ಅವ್ವಂಗೆ ಮಜನ ನಿಜ ಸಂಗತಿ ಗೊತ್ತುಟು. ಸೊಸೆನಕ್ಕಲೆ ಇವನ ಪುಕ್ಕುಲುತನನ ಹೇಳ್‌ತ್‌ಲೆ. ಇಂದಲ್ಲ ನಾಳೆ ಅವುಳಿಗೇ ಗೊತ್ತಾಗಲಿತ ಬೇಜಾರ ಮಾಡಿಕಂಡ್ ಸುಮ್ಮನಾತ್. ಇರ್ಲ್ 10-11 ಗಂಟೆಗೆ ಹೆಣ್ ಗದ್ದೆಗೆ ಹೋಗಿ ಚೂಕೂಡಿ ಬಾತ್. ಹಿಂಗೆ ಬಾಕನ ಗಂಡ ಗುಡಿ ಹೊದ್‌ಮಲ್ಗಿತ್. ಕಾಲ್‌ಂದ ತಲೆ ಮುಟ್ಟ ಸೊಲ್ಪನೂ ಆಚೀಚೆ ಸೆರೆ ಇಲ್ಲದಂಗೆ ಸುತ್ತಿ ಮಲ್ಗಿತ್. ನಿದ್ದೆ ಮಾಡ್ತ್‌ಲೆ. ಹೆಣ್‌ಬಂದ್ ಮಲ್ಗಕನ ಗಂಡನ ಹಣೆ ಮುಟ್ಟಿ ನೋಡ್ತ್. ಜರ ನಾಪತ್ತೆ. ಬೆಳಗ ಮುಟ್ಟ ಜರ ಬಾತೇಲೆ. ಹಿಂಗೆ ಕತ್ತಲೆಗೆ ಜರ ಬಾದು. ಹೆಣ್ ಗದ್ದೆಗೆ ಹೋಗಿ ಬಂದ ಮೇಲೆ ಜರ ಬುಡ್ದು ಆಗ್ತಾ ಇತ್. ಒಂದ್ ಇರ್ಲ್ ಹೆಣ್ ಗದ್ದೆಗೆ ಹೊರ್ಡಕನ ಪುಟ್ಟಯ್ಯ ಹೇಳ್ತ್ "ನಾ ಬನ್ನೆ" ಸರಿ ಹೆಣ್‌ಸೊಟ್ಟಿಗೆ ಗಂಡ ಗದ್ದೆಗೆ ಹೋಗಿ ಸುತ್ತಾಡಿ ಚೂಕೂಡಿ ಬಂದೊ. "ನಾಳೆಂದ ನಾನೇ ಗದ್ದೆಲಿ ಮಲ್ಗಿನೆ, ಆದರೆ ನೀ ಬಾನೇಂತ" ರಾಗ ಎಳ್ತ್. ಹೆಣ್‌ಗೆ ಪಾಪತ ಆತ್. ಅಲ್ಲಿಂದ ಮುಂದೆ ಇಬ್ಬರೂ ಗದ್ದೆ ಪಾರಕ್ಕೆ ಹೋಗಿ ಅಲ್ಲೇ ಮಲ್‌ಗ್‌ತಿದ್ದೊ. ಅಲ್ಲಿ ಮಲ್ಗಿರೂ ಇಂವ ಮಲ್‌ಗ್‌ತಿದ್ದದ್ ಹೆಂಗೆ? ಗುಡಿ ಹೊದ್‌ಕಂಡೇ. ಅಲ್ಲಿಂದಲೇ ಚೂಂತ ಹೇಳ್‌ತಿತ್. ಆದರೆ ಹೆಣ್ ಹಂಗಲ್ಲ. ಅವ್ಳು ಎದ್ ಮೆಂಟೆ ಬಡ್ದ್, ಬೆಂಕಿ ಮಾಡಿ ಚೂಕೂಡಿ ಮಲ್‌ಗ್‌ತಿತ್.

ಹಿಂಗಿರಕನ ಮೆಲ್ಲ ಮೆಲ್ಲ ಹೆಣ್‌ಗೆ ಗೊತ್ತಾತ್, ಗಂಡ ಅಡೀ ಪುಕ್ಕುಲತ! ದಾರಿ ಕರೆಲಿ ಸುಡುಕುಣಿ ಮನಿ ಇದ್ದರೆ ಇಂವ ಆ ದಾರಿನೇ ಬುಟ್‌ಬುಡ್ತಾಇತ್. ಊರೊಳಗೆ ಯಾರಾರ್ ಸತ್ತ ಸುದ್ದಿಬಾತೊ? ಇಂವ ಆರ್‌ಗಂಟೆಗೆಲ್ಲಾ ಮನೆ ಒಳಗೆ ಇರ್ತಾ ಇತ್. ಇನ್ ಅಮಾಸೆ ಹುಣಿಮೆಲಿ ಹೇಳ್ದೇ ಬ್ಯಾಡ.

ಒಂದಿನ ಅಡ್ಗೆಮನೆ ನೀರ್ ಹಂಡೆ ಕರೆಲಿ ಒಂದ್ ಹಾವು ಸಿಂಪೆಯಂಗೆ ಸುತ್ತಿ ಮಲ್ಗಿತ್. ಹೆಣ್ ಗಂಡನ ಕರ್ತ್. "ಬನ್ನಿ ಒಮ್ಮೆ ಇಲ್ಲಿ ನೋಡಿ ಒಮ್ಮೆ, ಒಮ್ಮೆ ಬಡ್ದ್ ಹಾಕಿ". ಆಗ ಇಂವ "ಅದ್ ಎಂತನೇ? ಅದರ ಅದರ ಮಡ್ಗಿಕಾಗದ್. ಅದೆಂತತ ಸರಿಯಾಗಿ ಹೇಳ್‌ತ" ಅಲ್ಲಿಂದಳೇ ಜೋರ್ ಮಾಡ್ತ್. "ಹಾವು, ಬನ್ನಿ ಬೇಗಾತ" ಹೆಣ್ ಬೊಬ್ಬೆ ಹಾಕಿತ್.

"ಎಂತನೇ ಅದ್? ಹಾವಾ? ಎಂತ ಹಾವುನೇ ಅದ್?"

"ಎಂತ ಹಾವುತ ಗೊತ್‌ಲೆ"

"ಉದ್ದಕೆ ಮಲ್ಕಂಡ್‌ಟ್ಟೊ?, ಸುತ್ತಿ ಮಲ್ಗಿಟೊ?"

"ಸುತ್ತಿ ಮಲ್ಗುಟ್ಟು."

"ಸಣ್ಣದಾ ದೊಡ್ಡದಾ"

"ನಿಮ್ಮ ಎರಡ್ ಬೆರಳ್ ದಪ್ಪ ಇರ್ದು".

"ಅದರ ತಲೆ ಚಪ್ಪಟೆನಾ, ಉರುಟಾ".

"ನಿಮ್ಮ ತಲೆ ಹಂಗೆ ಉಟ್ಟು. ಒಮ್ಮೆ ಬನ್ನಿ. ತಲೆ, ಬಾಲ ಹೆಂಗುಟ್ಟುತ ನೋಡಿಕಂಡಿದ್ದರೆ ಅದ್ ಗೋಡೆ ಸೆರೆಗೆ ಹೋಬುಟ್ಟದೆ."

"ಅಲ್ಲನೇ ಇಂದ್ ಎಂತ ವಾರ? "

"ಮಂಗಳವಾರನೋ, ಬುಧೋರನೋ, ಸರಿ ಗ್ಯಾನ ಇಲ್ಲೆ".

"ಅಲ್ಲನೇ ನಾ ಮಂಗಳವಾರ ಬುಧೋರ ಹಾವು ಕೊಲ್ಲಿಕಾಗದ್‌ನೆ. ನೀನೆ ಬಡ್ದಾಕ್."

ಅಷ್ಟೊತ್ತಿಗೆ ಹೆಣ್ ಅಲ್ಲಿ ಇಲ್ಲಿ ಸುತ್ತಾಡಿ ಸೌದೆ ಕೊಳ್ಳಿನೋ ಎಂಥದೋ ತಂದ್ ಬಡ್ತ್. ಬಡ್ದ್ ಅಂಗಳ ಕರೆಗೆ ಹಾಕಿತ್. ಹಾವು ಸತ್ತ ಮೇಲೆ ಪುಟ್ಟಯ್ಯ ಓಡಿ ಬಾತ್. "ಸರಿಯಾಗಿ ಸತ್ತುಟಾ, ಇಲ್ಲೆಯೋಂತೇಳಿ" ಹೆಣ್‌ನ ಕೈಲಿದ್ದ ದೊಣ್ಣೆ ತಕ್ಕಂಡ್ ಸತ್ತ ಹಾವುಗೆ ಬಡ್ತ್ ಬಡ್ತ್ ಬಡ್ತ್ -ಸೊಂಟದ ಮೇಲೆ ಕೈಮಡ್ಗಿ "ನಿನ್ನ ನಿನ್ನಾ, ಇಲ್ಲಿಗೆ ಬಂದೊಳಲ್ಲಾ. ಮನೆಯೊಳಗೆ ಬಂದರ ಹಂಗೆ ಬುಡಿಕಾಗದ್. ಮಂಗ್ಳೋರಾದರೇನ್, ಬುಧೋರಾದರೇನ್"ತ ಹೇಳಿಕಂಡ್ ಇನ್ನೆರಡ್ ಬಡ್ಟ್ ಮೀಸೆ ಮೇಲೆ ಕೈ ಮಡ್ಗಿ ಹೆಣ್‌ನ ನೋಡ್ತ್.

"ನಿಮ್ಮ ಮೀಸೆಯೋ ನೀವೋತ"ಹೆಣ್ ಮನ್‌ಸ್‌ಲೇ ಹೇಳಿಕಂಡತ್.

ತಿಂಗಳು ಬೆಳ್ಕ್‌ಲಿ ಪುಟ್ಟಯ್ಯ ನಡೆದು ನೋಡಿಕೆ ನಿಮ್ಮ ಎರಡ್ ಕಣ್ ಸಾಲಿಕಿಲೆ. ಇಂವಂಗೆ ಕಪ್ಪು ಕಂಡಲೆಲ್ಲಾ ಹಾರಿಕಂಡ್ ಹಾರಿಕಂಡ್ ಹೋದು. ಅಡ್ಡ ಬೇರ್ ಮನಿ ಇತ್ತೋ, ಅದ್ ಹಾವುತೇ ಇಂವ ಗ್ಯಾನ ಮಾಡ್ದು. ತಿಂಗಳು ಬೆಳಕ್ ಹಾಲ್ ಸೂಸಿದಂಗೆ ಇದ್ದರೂ ಇವನ ಕೈಲಿ ಟಾರ್ಚ್ ಇದ್ದೇ ಇದ್ದದೆ. ಹಂಗಿದ್ದರೂ ಇಂವ ಒಂಟಿಯಾಗಿ ಹೋಗುವ ಪೈಕಿ ಅಲ್ಲವೇ ಅಲ್ಲ.

ಹಿಂಗಿರಕನ ಒಮ್ಮೆ ಹಿಂಗಾತ್:

ಸಂತೆಗೆ ಹೋತು. ಒಬ್ಬನೇ ಬೇರೆ. ಸಾಮಾನೆಲ್ಲಾ ತಕ್ಕಂಡಾತ್. ಇನ್ ಕುರಿ ಮಾಸ ತಕ್ಕಣೆಂತೇಳಿ ಹೋಗಿ ಅದರ ತಕ್ಕಂಡ್ ಉದ್ದೂದ್ದ ಕಾಲ್ ಹಾಕಂಡ್ ಸ್ಟಾಂಡಿಗೆ ಬಾತ್. ಹೊತ್ತಿಗೆ ಸರಿಯಾಗಿ ಹೋಕಾದ ಬಸ್ ಅಂದ್ ಇಲ್ಲೇ! ಒಂದ್ ಬಸ್‌ಗೆ ಎರಡ್ ಬಸ್ ಜನ ಕಾಯ್ತಾ ಒಳೊ. ಅಷ್ಟೊತ್ತಿಗೆ ಬಸ್ ಬಾತ್. ಜನ ದೊಡ್ಡಿಗೆ ದನ ನುಗ್ಗಿದಂಗೆ ನುಗ್ಗಿದೊ. ಇಳೆಕಿರವು ಬಸ್ಸೊಳಗೆ ಆಬುಟ್ಟೊ. ನಾವ್ ಹಂಗೆತನೇ. ನಮ್ಮ ಕೆಲ್ಸ ಆದರೆ ಆತ್. ಬಾಕಿದ್ದವು ನೆಗ್ದ್ ಬಿದ್ದರೆ ನಾವಿಗೇನ್? ಹಂಗೆ ಇಳೆಕೆ ಪೇಚಾಡ್ತಾ ಇದ್ದವು ಬಯ್ಕಂಡ್ ಬಯ್ಕಂಡ್ ತೇಲಾಡಿಕಂಡ್ ಹೆಂಗೊ ಇಳ್ದೊ. ಡ್ರೈವರ್ ಸೀಟ್‌ಂದ ಕಡೆ ಬಾಗ್ಲ್ ಮುಟ್ಟ ಜನ ತುಂಬಿ ಹೋದೊ. ಬಸ್‌ದ್ ಬಾಗ್ಲ್ ಹಾಕಿಕೆ ಬೊತ್ತಾತ್. ರೈಟ್ ಹೇಳಿ ಆತ್. ಬಸ್ ಹೊರ್‍ಟೂ ಆತ್. ನಮ್ಮ ಪುಟ್ಟಯ್ಯ ಕೆಳಗೇ ಬಾಕಿ. ಇನ್ ಲಾಸ್ಟ್ ಬಸ್ಸೇ ಗತಿ. ಅದು ಹೊರ್‍ಡುದು ಆರ್ ಗಂಟೆಗೆ. ಇಂವ ಬಸ್ ಇಳೆದು ಏಳ್ ಗಂಟೆಗೆ. ನಡ್ಕಂಡ್ ಮನೆಗೆ ಎತ್ತುದು ಎಂಟ್ ಗಂಟೆಗೆ. ಒಬ್ಬನೇ ಬೇರೆ. ಕೈಲಿ ಕುರಿಮಾಸ ಬೇರೆ

ಉಟ್ಟು. ಪುಟ್ಟಯ್ಯನ ಸ್ಥಿತಿ ಈಗ ಏನಾಗ್ ಬೇಡ? ಅತ್ತ ನೋಡ್ತ್, ಇತ್ತ ನೋಡ್ತ್ ಯಾವ ವಾಹನವೂ ಇಲ್ಲೆ. ಬೇಡಾದ ಮುಸುಂಡುಗಲ್ಲದೆ ಒಂದೇ ಒಂದು ಬೇಕಾದ, ಪರಿಚಯದ ಮುಸುಂಡು ಕಾಣ್ತಾ ಇಲ್ಲೆ. ಗಂಟೆ ಆರಾತ್. ಬಾಕಾದ ಬಸ್ ನಾಪತ್ತೆ. ಇವಂಗೆ ತಲೆ ಸಿಡೆಕೆ ಸುರಾತ್. ಥೂ ದರಿದ್ರ ಬಸ್‌ಗ. ಬಾಡಿಗೆ ಜೀಪೂ ಇಲ್ಲೆ-ಹಿಂಗೆಲ್ಲಾ ಪೇಚಾಡಿಕಂಡಿರಕನ ಬಸ್ ಬಾತ್. ಹತ್ತಿ ಬೊಸ್ಕತ್ ಕುದ್ದತ್. ಬಸ್‌ಲಿ ಹತ್‌ನಲವತ್‌ಜನ ಇದ್ದಿರ್‌ವೊ. ಟಿಕೇಟೂ ಆತ್. ಬಸ್ ಹೊರ್ಟತ್. ಅರ್ಧ ದಾರಿಗೆತ್ತಕನ ಚಕ್ಕಿಂಗವು ಹತ್ತಿಕಂಡೊ. ಇಳಿವ ಜಾಗ ಬಾತ್. ಪುಟ್ಟಯ್ಯ ಬಸ್ ಇಳ್ತ್.

ಗಂಟೆ ರಾತ್ರಿ ಎಂಟಾಗಿರ್ದು. ತಲೆ ಮೇಲೆ ಮರ ಬಿದ್ದಂಗಾತ್. ನಿತ್‌ಕಂಡ್ ತನ್ನ ದಾರಿನ್ನೊಮ್ಮೆ ಗ್ಯಾನ ಮಾಡ್ತ್. ಕೆರೆ ಕರೇಲಿ ಹೋಗಿ ನಾಕ್ ಕಡ್ಕಲ್ ಹತ್ತಿ ಇಳ್ದ್, ಗದ್ದೆ ಪುಣಿಲೇ ಹೋಗಿ ಒಬ್ಬರ ಗೆರೆಕಾಡ್ ದಾಟಿ, ತೋಡು ದಾಟಿ............ ಗ್ಯಾನ ಮಾಡ್ತಾ ಇದ್ದಂಗೆ ತಲೆ ಗಿರ್‌ತ ತಿರ್ಗುವಂಗಾತ್. ಹೆಣ್‌ನ ನೂರು ದಪ ಗ್ಯಾನ ಮಾಡ್ತ್. ಅವ್ವನ ನೆನ್‌ಕಂಡತ್. ಲಾಚಾರ್ ದೇವುರುಗಳ್‌ಂದ ಹಿಡ್ದ್ ದೊಡ್ಡ ದೇವ್ರುಗಳ್ನೆಲ್ಲಾ ನೆನ್ತ್.

ಸಧ್ಯ ತಿಂಗಳು ಬೆಳಕ್ ಇದ್ದರ್‌ಂದ ದಾರಿ ಸರ್ಮ್‌ದದ್ ಕಂಡದೆ. ಪುಟ್ಟಯ್ಯ ಅಷ್ಟುದೂರ ಎತ್ತಿರ್ದು. ಹಿಂಗಿರಕನ "ಅಣ್ಣಾಂತ" ಯಾರೋ ಕರ್ದಂಗಾತ್. ಝುರ್‌ತ ಪುಟ್ಟಯ್ಯ ಸರ್ಕಂತ ತಿರ್ಗಿತ್. "ನಾನಣ್ಣ ಚಂದ್ರಯ್ಯ". "ಓ! ಚಂದ್ರಯ್ಯ, ತಡಾಬುಡ್ತ್‌ಕಂಡದೆ". "ಹೌದು ಕತ್ತಲಾಕನ 'ಡೋಸ್' ಇಲ್ಲರೆ ಆದೇ ಇಲ್ಲೆ. ಹಂಗೆ ಹೋಗಿದ್ದೆ. ಎರಡ್ ಗಲಾಸ್ ಬುಟ್ಟೆ. ನೀವು ತಡಾಗಿ ಬುಟ್ರೀ. ಹಿಂಗೆಲ್ಲಾ ತಡಾ ಆದುಲೆಲಾ"ಂತ ಚಂದ್ರಯ್ಯ ಕೇಳ್ತ್. ಸಧ್ಯ ಜೊತೆಗೆ ಇಂವ ಸಿಕ್ಕಿದರ್‌ಂದ ಇವಂಗೆ ನಾಕ್ ಆಳ್ ಶಕ್ತಿ ಬಂದಂಗಾತ್. "ಹಾಳ್ ಬಸ್ ತಡಾಗಿ ಬುಡ್ತ್‌ರಾತ" ಬಸ್‌ನವುಕೆ, ಚೆಕಿಂಗ್‌ನವುಕೆ ಸೇರ್ಸಿ ನಾಕ್ ಸರಿಯಾಗಿ ಬಯ್ತ್. "ಚಂದ್ರಯ್ಯ, ನೀ ನಮ್ಮನೆ ಕರೆಗಾಗಿ ದಾಟಿಬುಡುತ" ಹೇಳ್ತ್. ಆದರೆ ಚಂದ್ರಯ್ಯ ಸಂಚಾರ ಗುಳಿಗನಂಗೆ. ಏರ್ಸಿದ್ದ ಎರಡ್ ಗಲಾಸ್ ಎಲ್ಲಿಹೋತೋ ಏನೊ. ಹಂಗಾಗಿ ಇನ್ನೆಲ್ಲಾರ್ 'ಡೋಸ್' ಸಿಕ್ಕುದಾತ ಗ್ಯಾನ ಮಾಡ್ತಾ ಇದ್ದವಂಗೆ "ನಮ್ಮನೆ ಕರೆಗಾಗಿ ದಾಟಿ ಬುಡುತ" ಹೇಳ್ದ ಮಾತ್ ಸರಿ ಕಂಡತ್‌ಲೆ. ಇವು ನಡ್ದ್ ಅರ್ಧ ದಾರಿ ಆಗಿರ್ದು. ಚಂದ್ರಯ್ಯ ಹೇಳ್ತ್ "ಅಣ್ಣ, ನಂಗೆ ಬೊಕ್ಕಣ್ಣನಕ್ಕಲೆ ಹಣಿ ಕೆಲ್ಸ ಉಟ್ಟು. ನೀವು ಸೊಲ್ಪ ಮುಂದೆ ಹೆಜ್ಜೆ ಹಾಕಿಂತ" ಹೇಳಿ ಚಂದ್ರಯ್ಯ ಎಡ್ದಕಡೆ ದಾರಿಲಿ ಸರ ಸರಾಂತ ಹೋಗೇ ಬುಡ್ತ್.

ಈಗ ಪುಟ್ಟಯ್ಯ ಒಬ್ಬನೇ ಅನಾಥನಂಗಾಗೋತ್. ಧೈರ್ಯ ಮಾಡಿ ನಡಿತಾ ಇರಕನ ಅಡ್ಡ ಒಂದ್ ಕಡ್‌ಕಲ್. ಅದ್ ಹತ್ತಿ ಇಳೆಕನ ಕುರಿ ಮಾಸದ ಬ್ಯಾಗ್‌ನ ಎಂತದೋ ಹಿಂದಕೆ ಎಳ್ದಂಗಾತ್. ಅಷ್ಟೇ ಅಲ್ಲ, ಗೂಟಕೆ ಸೆಕ್ಕಿಕಂಡ ಶರ್ಟ್ ಹರ್ದೇ ಹೋತು. ಪುಟ್ಟಯ್ಯ ತಿರ್ಗಿ ನೋಡ್ತ್‌ಲೆ. ಬೆವುರು ಉಕ್ಕೇರ್ತಾ ಇತ್. "ನನ್ನ ಜೀವದ ಕೊನೆ ಇಂದೇತ ಕಂಡದೆ.

ಹಾ! ಪಾಷಾಣ ಮೂರ್ತಿ! ನಿಂಗೆ ಕೋಲ ಕಟ್ಟಿಸಿನೆ. ಇಂದ್ ನನ್ನ ಒಮ್ಮೆ ಮನೆಗೆ ಎತ್‌ಸಿಬುಡು"ತ ಬೇಡಿಕಂಡತ್. ಹಂಗೆ ಹೇಳಿಕಂಡೇ ನಡಿತಾ ಇತ್. ಆಗ......! ಆ ದೊಡ್ಡ ತಿರ್‍ಗಾಸ್‌ಲಿ! ಆ ತಿರ್‍ಗಾಸ್ ಅಂತಿಂತಾ ತಿರ್‍ಗಾಸಲ್ಲ. ಒಮ್ಮೆ ಲಾರಿಗೆ ಮರ ಲೋಡ್ ಮಾಡಕನ ಮರ ಜಾರಿ ಒಬ್ಬ ಲೋಡು ಮಾಡವನ ಮೇಲೆ ಬೀತ್. ಅಂವ 'ಹರಾಶಿವಾಂತ' ಹೇಳಿಕೆ ಮುಂದೇ ಸತ್ತೇ ಹೋತು. ಅದೇ ಜಾಗ ಈ ತಿರ್‍ಗಾಸ್. ಅಂಥಾ ಜಾಗನ ದಾಟಿ ಹೋದಾದರೂ ಹೆಂಗೆ? ಪುಟ್ಟಯ್ಯನ ಕರುಳೆಲ್ಲಾ ಬಾಯಿಗೆ ಬಂದಂಗಾತ್. ಸರ್ವ ರೋಮಗ ಮುಳ್ಳುಹಂದಿ ಮುಳ್ಳುನಂಗೆ ನಿಮಿರಿ ನಿತ್ತತ್. ನಡೆವ ಶಕ್ತಿ ಕಾಲಿಗಿಲ್ಲದಂಗಾತ್. ನಿತ್ತೇಬುಡ್ತ್. ಮಡೆ ನೀರ್ ನುಂಗಿತ್. ಒಣಂಗಿದ ತುಟಿನ ನೆಕ್ಕಿಕಂಡತ್. ಆದರೆ ನಾಲಿಗೆಲೆಲ್ಲಿಟ್ಟು ಪಸೆ! ಹಿಂದಕೆ ಹೋಗಿ ಬುಡ್ವಾ? ಎಲ್ಲಿಗೆತ ಹೋದು? ಮುಂದೆ ಹೋದಾದರೂ ಹೆಂಗೆ? ಅಲ್ಲ, ನಾ ಗಂಡ್‌ಸ? ಹೌದು. ನಾ ಗಂಡ್‌ಸೇ. ಮೈ ಕೈನೆಲ್ಲಾ ಮುಟ್ಟಿ ನೋಡಿಕಂಡತ್. ಹಂಗೆ ಮುಟ್ಟಕನ ಬೇರೆ ಯಾರೋ ನನ್ನ ಮುಟ್‌ತಾ ಒಳೊನಂತ ತನ್ನ ಕೈನ ತಾನೇ ನಂಬದಂಗಾತ್. ಒಮ್ಮೊಮ್ಮೆ ಉದ್ದ ಜಡೆ ಗೂಡೆಗಳ ಜಡೆ ಒಮ್ಮೆಗೆ ಮುಂದೆ ಬಾಗಕನ ನೆರಳಾಡ್ತೆಲ್ಲ, ಆಗ ಅವು ಹಾವೂಂತ ಹೆದ್ರಿ ಕಿರ್ಚಿಕಂಡವಲ್ಲಾ ಹಂಗಾತ್ ಈ ಪುಟ್ಟಯ್ಯನ ಕಥೆನೂ. ಪುಟ್ಟಯ್ಯ ದೊಂಡೆನ ಸರಿ ಮಾಡಿಕಂಡತ್. ಇರುವ ಧೈರ್ಯನೆಲ್ಲಾ ಒಂಗು ಗುಡ್ಡೆ ಮಾಡಿಕಂಡತ್. ಬ್ಯಾಗೊಳಗೆ ಕೈ ಹಾಕಿ ಕುರಿ ಮಾಸದ ಒಂದ್ ತುಂಡುನ ತೆಗ್ತ್ ದೂರ ಬಿಸಾಕಿತ್. ಆ ತಿರ್‍ಗಾಸ್ ದಾಟಮುಟ್ಟ ಒಂದೇ ಓಟ ಓಡೇ ಬುಡ್ತ್. ಮೆರಾಥನ್ ಓಟದವು ಯಾಕೆ ಬೇಕು? ಹಂಗೆ ಓಡಕನ ಬ್ಯಾಗ್‌ಲಿದ್ದ ಸಾಮಾನೆಲ್ಲಾ ಕೊಣೆತಾ ಇತ್. ಅಂತೂ ಆ ತಿರ್‍ಗಾಸ್ ದಾಟಿತ್. ಸೇಂಕಿಕಂಡ್ ಸೇಂಕಿಕಂಡ್ ಮೆಲ್ಲ ಮೆಲ್ಲ ಓಡ್ತಾ ಇರಕನ ಮುಂದೆ ಮೂರು ದಾರಿ ಕೂಡುವ ಜಾಗ ಸಿಕ್ತ್. ಆ ದೊಡ್ಡ ತಿರ್‍ಗಾಸ್‌ಕಿಂತ ಈ ಕೂಡು ದಾರಿ ಇನ್ನೂ ಭಯಂಕರ! ದೆವ್ವ ಇರುದೇ ಇಲ್ಲಿ! ದಾರಿ ತಪ್ಪಿದಂಗಾಗಿ ಮನೆ ದಾರಿನ ಬುಟ್ ಬೇರೆ ದಾರಿ ಕಡೆ ಜನ ಹೋಗೊಳೊ ಗಡ. ಮಧ್ಯಾಹ್ನ ಹನ್ನೆರಡ್ ಗಂಟೆಗೇ ಒಮ್ಮೆ ಹಿಂಗಾಗಿತ್‌ಗಡ. ಇನ್ ಇರ್‍ಲ್ಲ ಕೇಳೊಕಾ? ಪುಟ್ಟಯ್ಯ ತನ್ನ ಮನೆ ದಾರಿಯೇ ಇದ್ ಹೌದುತ ಗ್ಯಾರಂಟಿ ಮಾಡಿಕಂಡ್ ಹೋಗ್ತಾ ಇರಕನ ಅಷ್ಟಗಲದ ದಾರಿ ಇಷ್ಟೇ ಅಗಲ ಆದಂಗಾತ್! ಅತ್ತ ಕಾಡ್ ಇತ್ತ ಕಾಡ್ ಮುಂದೆ ದಾರಿನೇ ಇಲ್ಲೆ!! ಓ! ದಾರಿ ತಪ್ಪುಸಿಬುಟ್ಟುಟ್ಟು. ಕುರಿ ಮಾಸದ ಇನ್ನೊಂದು ತುಂಡುನ ಬಿಸಾಕಿತ್. ಮತ್ತೆ ದಾರಿ ಹುಡ್ಕಿತ್. ದಾರಿನೇ ಇಲ್ಲೆ. ಹಿಂದೆನೂ ದಾರಿ ಕಾಂಬಕಿಲೆ, ಮುಂದೆನೂ ಹೋಕೆ ಆಗ್ತಾ ಇಲ್ಲೆ. ಜೋರಾಗಿ ಕಿರಿಚಿಬುಡ್ವಾತ ಗ್ಯಾನ ಮಾಡ್ತ್. ಹೆಂಗೆತ ಕಿರುಚುದು? ಯಾರ್‍ನಾಂತ ಕರೆದು? ಕಣ್‌ಕತ್ತಲೆ ಬಂದಂಗಾತ್. ಬೋನಿಗೆ ಸಿಕ್ಕಿದ ಇಲಿಯಂಗಾತ್. ಅಲ್ಲಿ ಇಲ್ಲಿ ಸುತ್ತಾಡ್ತ್. ದೊಡ್ಡ ದೊಡ್ಡ ಸಿಟಿಲಿ ಸುತ್ತಾಡಕನ ಬಂದ ರಸ್ತೆ ಯಾವ್ದ್ ಹೋವ ರಸ್ತೆ ಯಾವುದ್ ಗೊತ್ತಾಗದಂಗಾದಲ್ಲ ಹಂಗೆ ಪುಟ್ಟಯ್ಯನ ಸ್ಥಿತಿ ಆಗೋತ್. ಅಷ್ಟೊತ್ತಿಗೆ

ನಾಯಿ ಬೊಗುಳುವ ಸದ್ ಕೇಳ್ತ್. ಓ! ನಾ ಬಂದ್ ಬಂದ್ ಕುಶಾಲಪ್ಪನ ಮನೆ ಹಕ್ಕಲೆ ಎತ್ತ್ಯೊಳೆ. ಇನ್ ಕೆರೆದಾಟಿ ಬುಟ್ರೆ ಅಲ್ಲಿಂದ ಹೆಂಗೂ ಮುಂದೆ ಹೋವೆತ ಗ್ಯಾನ ಮಾಡಿಕಂಡ್ ಕುಶಾಲಪ್ಪನ ತೋಟದ ಕರೆಗಾಗಿ ದಾಟಿ ಕೆರೆ ದಂಡೆಗೆ ಎತ್ತಿತ್. ಅಲ್ಲಿ ನಿತ್ತತ್. ಇನ್ನೊಂದು ತುಂಡು ಮಾಸ ಬಿಸಾಕಿರೆ ಆದುತ ಕಂಡದೆ. ಇಲ್ಲರೆ ಕೆರೆ ದಾಟಿಕೆ ಬೊತ್ತದೆತ ಹೇಳಿಕಂಡ್ ಬ್ಯಾಗಿಗೆ ಕೈಹಾಕಿ ಇನ್ನೊಂದು ತುಂಡು ಮಾಸನ ಬಿಸಾಕಿತ್. ಯಾಕೋ ಬ್ಯಾಗ್‌ನ ಕೆಳಗೆ ಮುಟ್ಟಕನ ಪಸೆ ಪಸೆ ಸಿಕ್ತಾ ಉಟ್ಟು! ಇದೆಂತಾ? ಒಳ್ಳೆಣ್ಣೆದೋ ತೆಂಗಿನೆಣ್ಣೆದೋ ಕುಪ್ಪಿ ಒಡ್ದೆ ಹೋಗಿರೊಕು. ಆ ದೊಡ್ಡ ತಿರ್ಗಾಸ್‌ಲಿ ಓಡಕನ ಕುಪ್ಪಿಗೆ ಕುಪ್ಪಿ ತಾಂಗಿರ್ದು. ಹಾಳಾಗಿ ಮಣ್‌ತಿಂದೇ ಹೋಗಲಿ ಹಿಂಗೆ ಹೇಳಿಕಂಡ ಪುಟ್ಟಯ್ಯ ಕೆರೆ ಕಡೆ ಕೆಮಿ ಕೊಟ್ಟತ್. ಆ ಕಡೆಂದ ದಢುಂ ದುಢುಂ ಸದ್ ಬರ್‍ತಾ ಉಟ್ಟು. ಇರ್‍ಲ್ ಮೀಯಕೆ ಬಂದ ಪೀಡೆಗಳೇ ಇರೊಕು. ಅಷ್ಟೆ ಅಲ್ಲ, ಚೊಳ್‌ಚೊಳಾತ ನೀರ್ ಮೇಲೆ ಓಡುವ ಸದ್ದೂ ಕೇಳ್ತಾ ಉಟ್ಟು. ಅಷ್ಟೇ ಅಲ್ಲ, ಉದ್ದೋಕೆ ಎಂತದೋ ನೀರ್ ಮೇಲೆ ಕಪ್ಪಾಗಿ ಅತ್ತೊಮ್ಮೆ ಹೋದು, ಇತ್ತೊಮ್ಮೆ ಬಾದು. ಬೇತಾಳ ಕಥೆ ಎಲ್ಲಾ ಗ್ಯಾನಾಗಿ ಹೋತು! ಸಣ್ಣ ಗಾಳಿ ಬೀಸಕನ ತಿಂಗಳು ಬೆಳ್‌ಕ್‌ಲಿ ಆ ಕಪ್ಪಾಕೃತಿ ಇನ್ನೂ ಸ್ಪೀಡಾಗಿ ಹಿಂದಕೆ ಬಾದು ಮುಂದಕೆ ಹೋದು ಮಾಡ್ತಾ ಇತ್. "ನನ್ನ ಜನ್ಮ ಇದ್ದರೆ ಇನ್ ನಾ ಇಂಥ ಹೀನ ಸ್ಥಿತಿಗೆ ಸಿಕ್ಕಿ ಹಾಕಂಬಕಿಲ್ಲೆ. ಓ! ಅಜ್ಜಪ್ಪಾ, ಕೊರ್ತಿ, ಕಾಪಾಡಿಯಪ್ಪಾ"! ಹಿಂಗೆ ಹೇಳಿಕಂಡಿರಕನ ಕೈಲಿದ್ದ ಬ್ಯಾಗ್ ಕೈ ಬುಟ್ಟೇ ಹೋತು. ಅಯ್ಯೋತ ಹೇಳಿಕಂಡ್ ಹೆಣ್‌ನ ಕರೆಕೆ ಬಾಯಿ ತೆರ್‍ತ್. ಹೆಂಗೆತಾ ಕರೆಲಿ. ಇಲ್ಲಿವರೆಗೂ ಹೆಣ್‌ನ ಹೆಸ್ರ್ ಹಿಡ್ದ್ ಕರ್‍ದಂವ ಅಲ್ಲ. ಆದರೂ ಇಂದ್ ಕರೆವ ಪರಿಸ್ಥಿತಿ ಬಂದೇ ಬಾತ್. "ದೇವೀ....... ದೇವಮ್ಮಾ.......! ದೇ......."





# 19. ನೀಲಮ್ಮಾಂಟಿ

**ನ**ಮ್ಮ ನೀಲಮ್ಮಜ್ಜಿಗೆ ಅರವತ್ತೊ ಅರವತ್ತೈದೊ ವರ್ಷ ಪ್ರಾಯ ಆಗಿರ್ದು. ಆದರೂ ತಾನೊಬ್ಬ ಅಜ್ಜಿ ಆಗೊಳೆತ ಒಪ್ಪಿಕಂಡ ಅಜ್ಜಿ ಅಲ್ಲೇ ಅಲ್ಲ. "ಬನ್ನಿ ಅಜ್ಜಿ ಕುದ್ಕಣಿ, ಬನ್ನಿ ಚಾಮೆವ್ವ ಕೂರಿತ" ಯಾರಾರ್ ಕರ್ದರೆ "ಎಂತನೇ ಮಕ್ಕಳೆ, ನನ್ನನ ಅಜ್ಜಿ, ಚಾಮೆವ್ವಾಂತೆಲ್ಲ ಕರೆದು? ನಾನೇನ್ ಅಂಥ ದೊಡ್ಡ ಅಜ್ಜಿ ಆಗೊಳೆನಾ? ಆಂಟಿತ ಕರೆಕೇನ್ ಕೇಡ್"ತ ಬಯ್ದುದೆ. ಅಜ್ಜಿ ಹಂಗೆ ಹೇಳ್ದರ್ಲಿ ತಪ್ಪೇನೂ ಕಾಂಬಲೆ. ಯಾಕೇಂತೇಳಿರೆ ಆ ಅಜ್ಜಿದ್ ಹಲ್ ಇನ್ನೂ ಗಟ್ಟಿ ಮುಟ್ಟಾಗುಟ್ಟು. ಟೂತ್ ಪೇಸ್ಟ್ ಕಂಪನಿಗೆ ಜಾಹಿರಾತ್ ಕೊಡುವ ಹಲ್‌ನಂಗೇ ಉಟ್ಟು. ಒಂದು ದಿನನೂ ಸೊಂಟ ಬೇನತ ಹೇಳ್ತ್‌ಲೆ. ಕೈಕಾಲ್ ಪುಳೇದುತ ಹೇಳ್ತ್‌ಲೆ. ಜುಲಾಬು, ಜರ ಹತ್ರ ಹಣೆಕಿಲೆ. ಟಾನಿಕ್ ಮೀನೆಣ್ಣೆ ಮಾತ್ರೆ ಮುಟ್ಟಿದ ಅಜ್ಜಿ ಅಲ್ಲ.

ಡಜನ್ ಮೇಲೆ ಒಂದೆರಡ್ ಜಾಸ್ತಿ ಮಕ್ಕಳ ಹೆತ್ತ ಅಜ್ಜಿ ಅದ್. ಈಗನವು ಒಂದೆರಡ್ ಹೆತ್‌ಕಂಡ್ ವಾರಕ್ಕೆ ಆರ್ ದಿನ ಆಸ್ಪತ್ರೆಗೆ ಹೋಗಿಬಾದು ಕಂಡರೆ ಇವೆಲ್ಲಾ ಯಾಕೆ ಆವೋಂತ ಹೇಳಿಕಂಡ್ ಅಜ್ಜಿ ನಗಾಡ್ದೆ.

ಅಜ್ಜಿ ತಿಂಬೋದರ ನೋಡಿರೆ ನಿವ್‌ಗೆ ಉಬ್ಬೆಸ ಆದು. ಬಕ್ಕೆ ಹಲ್‌ಸನ ಹಣ್‌ನ ತಿಂಬಕ್ಕೆ ಕುದ್ದರೆ ಎರಡ್ ಚಂಡೆ ಗುಳುಂ ಮಾಡ್ದೆ. ಮಾನಣ್ ತಿಂದರೆ ಗೊರಟ್‌ಲಿ ಅರಷ್ಣ ಬಣ್ಣ ಹೋಗಮುಟ್ಟ ಕರ್‌ಪಿ ಕರ್‌ಪಿ ತಿಂದ್‌ಕಂಡ್ "ಏ ಚೀಂಕ್ರಿ, ಬಾನೆ ಇಲ್ಲಿ. ನಿಂಗೊಂದು ಕಥೆ ಹೇಳ್ನೆ"ತ ಹೇಳ್‌ಕನ ಆ ಚೀಂಕ್ರಿ ಗೂಡೆ 'ಹುಂ'ತ ಹೇಳ್ತ್. ಆಗ ಅಜ್ಜಿ 'ದೂವೆತ' ಹೇಳಿ ನಗಾಡುವ ಪೋಲ್ರ್ಲು ನೋಡಿಕೆ ಬತ್ತಪ್ಪ.

ಚಪ್ಪರ ಮದುವೆಗೆ ಗಂಡ್ ಜನನೇ ಹೋಕುಂತೇನ್ ಇಲ್ಲೆ. ಹೆಣ್ ಜನನೂ ಹೋದವೆ. ಅಜ್ಜಂದ್ರೂ ಅಜ್ಜಿಕಳೂ ಹೋದವೆ. ಹಂಗೆ ಒಮ್ಮೆ ನಮ್ಮ ಈ ನೀಲಮ್ಮಜ್ಜಿನೂ ಹೋತು. ಕತ್ತಲೆ ಕತ್ತಲೆ ಆಕನ ಅವು ಇವುಂತೇಳಿ ಆಕನ ಅಂದಾಜಿ ಮಾಡ್ದ ಜನಕ್ಕಿಂತೂ ಜಾಸ್ತಿ ಜನ ಕೂಡಿಕಂಡೊ, ಅಡ್ಗೆ ಮಾಡವುಕೂ ತಲೆ ಬಿಸಿ ಮಾಡಿಬುಟ್ಟೊ. ಇವು ಹೈದನ ಕಡೆವು, ಇವು ಗೂಡೆನ ಕಡೆವುತ ಭಿನ್ನ ಭೇದ ಮಾಡುವಂಗೆ ಇಲ್ಲೆ. ಎಲ್ಲವ್‌ನೂ ಸಮಾನ ಕಾಂಬೊಕು. ಸರಿ, ಸೂರ್ಯ ಕೆಳಗೆ ಇಳೀತಿದ್ದಂಗೆ ಬಂದವರ ಹೊಟ್ಟೆಗೆ 'ಪರಮಾತ್ಮ' ಇಳಿತಾ ಇತ್. ಅಷ್ಟೊತ್ತಿಗೆ ಚಂಗಣ ನೀಲಮ್ಮಜ್ಜಿನ "ಚಾಮೆವ್ವಾ ಸೊಲ್ಪ ಇತ್ತ ಬನ್ನಿತ" ಕರ್ತ್. "ಯಂತಕೆನೆ ನನ್ನ ಅತ್ತ ಕರಿತಾ ಒಳತ" ಅಜ್ಜಿ ಕೇಳ್ತ್. "ಎಂತಕೂ ಇಲ್ಲೆ. ಒಂದೆರಡ್ ಬೆರಳ್ ಕುಡಿವರಿಯಾತ ಕೇಳಿಕೆ ಕರ್ದದ್ ಚಾಮೆವ್ವಾತ" ಕುಪ್ಪಿನ ಹಿಂದೆ ಹಿಡ್ಕಂಡ್ ಹೇಳ್ತ್. ಆಗ ಚಾಮೆವ್ವ "ಎರಡ್ ಬೆರಳ್ ಯಾಕೆ, ಅರ್ಧಗಲಾಸ್ ಹಾಕ್. ನೀ ಎಂತ ಹೆದ್ರಿ ಹೆದ್ರಿ ಕೇಳ್ತ ಒಳಾ. ತಿಂದ್‌ಕಂಡ್ ಕುಡ್ಕಂಡ್

ಇದ್ದ್ ಜೀವ ನಂದ್. ಎಲ್ಲಿ ಗಲಾಸ್? ಹೊಯ್"ತ ಆರ್ಡರ್ ಮಾಡ್ತ್. ಚಂಗಣ್ಣ ಗಲಾಸ್‌ಗೆ ರಂ ಹೊಯ್ತ್. ನೀರ್‌ಬೊಗ್ಗಿಸಿಕೆ ಹೋತು. ಥೂ ನಿನ್ನ! ಸೀತ ಆಬುಟ್ಟದನೆ. ನೀರ್ ಹಾಕ್‌ಬಡಂತ ಹಂಗೇ ಕುಡೆಕೆ ಗಲಾಸ್ ಎತ್ತಿತ್. ಅಜ್ಜಿ ಗಲಾಸ್ ಎತ್ತಿ ಕುಡಿಯಕನ ಚಂಗಣ್ಣ ಅಲ್ಲಿಂದ ಹೋಕೆ ನೋಡ್ತ್. ಆಗ ಅಜ್ಜಿ "ಏ ಬಾನೆ ಇಲ್ಲಿ, ಕುಪ್ಪಿ ತಕ್ಕಂಡ್ ಎತ್ತ ಓಡ್ತ್. ಇನ್ನೊಂದೆರಡ್ ಬೆರಳ್ ಹಾಕ್‌ತ" ಹೇಳಿ ಹಾಕಿಸಿಕಂಡ್ ಚರ್ಬಿ ಹೊರ್ದದ್ ಇದ್ದರೆ ತಕಂಡ್ ಬಾ"ತ ಹೇಳ್ತ್. ಅಡ್ಗೆ ಮನೆಗೆ ಹೋದ ಚಂಗಣ್ಣ ನೈಬಲೆಸ ಹೊರ್ದರ ಒಂದ್ ಕೀಂತ್ ಎಲೆಗೆ ಹಾಕಂಡ್ ಬಂದ್ ಅಜ್ಜಿಗೆ ಕೊಟ್ಟತ್. ಅಜ್ಜಿನ ನಗೆ ಮಾತ್ ಲೌಡ್ ಸ್ಪೀಕರ್‌ನಂಗೆ ಹೊರ್‌ಡ್ತಾ ಇತ್. ಹುಳಿ ಹುಳಿಯಾದ ಚರ್ಬಿದ್ ಒಂದೆರೆಡ್ ತುಂಡ್‌ನ ಬಾಯಿಗೆ ಹಾಕಕನ (ನಿಮ್ಮ ಬಾಯಿಲೂ ನೀರ್ ಬಂದಿರ್ದು!) "ಏ, ಬಾನೆ ಇಲ್ಲಿ, ಇನ್ ಹಝ ಹುಳಿ ಓಂಪ್‌ನೆತ" ಆರ್ಡರ್ ಮಾಡ್ತ್. ಓಂಗೆ ಇರ್‌ಕನ ಒಬ್ಬ ಬಂದ್‌ಕಂಡ್ ಅಜ್ಜಿನ ಮೊಕಕೆ ಲೈಟ್ ಬುಡ್ತಾ ಇತ್. ಇದ್ ಎಂತಕೆನೆ ನನ್ನ ಓಂಗೆ ನೋಪ್ತಾ ಒಳಾ? ನಾ ನೀಲಮ್ಮ ಆಂಟಿತ ಗೊತ್‌ಲೆನಾ? ನಾ ಎಷ್ಟ್ ಕಡೆ ಹೋಗೊಳೆ. ಎಷ್ಟ್ ಕುಡ್ಡೊಳೆ. ಈಗನವು ನೈಂಟಿ ಹಾಕಿರೂ ಸಾಕ್ ಪಲ್ಪಿ ಆದವೆ. ಬಸ್ಕಟೆಗತ ಲೇಟೆಸ್ಟ್ ಡ್ರಿಂಕರ್‌ಗಳಿಗೆ ಬಯ್ತಾ ಇತ್. ಆ ಲೈಟ್ ಬುಡಂವ ಹಂಗೇ ಬುಟ್‌ಕಂಡೇ ಇತ್. ಈ ಅಜ್ಜಿಗೆ ಶೆಕೆ ಆದಂಗಾಗಿ ಬೆಗ್‌ರ್ ಬಾಕೆ ಶುರಾತ್. ಹಂಗೆ ಲೈಟ್ ಬುಟ್ಟದ್ ವೀಡಿಯೋ ರೆಕಾರ್ಡ್ ಮಾಡವುತ ಪಾಪ ಅಜ್ಜಿಗೆ ಗೊತ್ತೇ ಆತ್‌ಲೆ!

ಅಜ್ಜಿನ ತಲೆಗೆ ರಮ್ ರುಮ್‌ತ ಏರಿಬುಟ್ಟುಟು. ಎದ್ದರೆ ಬಿದ್ದದೆ. ಕುದ್ದಲ್ಲೇ ಇದ್ದರೆ ಊಟ ಇಲ್ಲೆ. ಪಟ್ಟಾಗಿ ಉಂಬೊಕುತ ಆಸೆ ಬೇರೆ! ಕೈ ಓಡ್ಕಂಡ್ ಊಟದ ಕಡೆ ಕರ್ರೊಂಡೋಗ್ವ ಪುಣ್ಯಾತ್ಮರ್ ಯಾರೂ ಇಲ್ಲೆ. ಅಷ್ಟೊತ್ತಿಗೆ ಚಂಗಣ್ಣ ಗೊಣಂಗಿಕಂಡ್ ಬಾತ್. ತತ್ ಈ ಅಜ್ಜಿಗೆ ನಾ ಯಾಕೆ ಕೊಡಿಕೆ ಹೋದೆ? "ಚಾಮೆವ್ವಾ ನೀವ್ ಇಲ್ಲೆ ಒರ್ಗಿ ಕುದ್‌ಕಣಿ. ನಿದ್ದೆ ಬಂದರೆ ಮಾಡಿತ ಹೇಳ್ತ". ಅಜ್ಜಿಗೆ ಸಿಟ್ ಎಲ್ಲಿತ್ತೋ ? "ನಿನ್ನ ಮುಸುಂಡು! ಆಂಟಿತ ಕರಿ. ಇಲ್ಲಿಗೇ ಊಟ ತಕ್ಕಂಡ್ ಬಾ. ನಂಗೆ ಉಂಬೊಕು. ಕುದ್ದಲ್ಲೇ ನಿದ್ದೆ ಮಾಡ್‌ತ ಹೇಳ್ತಾ ಒಳಲ್ಲಾ ಬೊಜ್ಜುನಾ"ಂತೆಲ್ಲಾ ಸರೀ ಬಯ್ತ್. ಈ ಎಲ್ಲಾ ತಲೆ ಬಿಸಿಲಿ ಚಂಗಣ್ಣ " M.M.K.M" (ಮೊದುವೆ ಮನೆ ಕಳ್ ಮ್ಯಾನೇಜರ್) ಆಗಿದ್ದ ಬಿದ್ದಣ್ಣನಕ್ಕಲೆ ಹೋಗಿ ಕಾಡಿ ಬೇಡಿ ನೈಂಟಿ ವಿಸ್ಕಿ ಏರ್ಸಿತ್. ಅಜ್ಜಿಗೆ ಊಟ ತಕ್ಕಂಡ್ ಬಾಕನ ಅಜ್ಜಿ ಎಲ್ಲುಟ್ಟು? ಏಳಿಕೆತ ಹೋಗಿ ಕಾಲಿಗೆ ಕಾಲ್ ತಾಂಗಿ ಕುರ್ಚಿ ಕೆಳಗೆ ತಲೆ ಹಾಕಂಡ್ ಸುರುಟಿ ಬಿದ್ದೋವುಟು! ಅದ್ದಾ, ಆಂಟಿ ಬೀತ್‌ರಾತ ಪಡ್ಡೆ ಹೈದಂಗ ಹೇಳಿಕಂಡ್ ಓಡ್ದೊ! ಮಲ್ಲಿಗೆ ಜಾಗ ಉಟ್ಟಾ? ಥತ್! ರಾತ್ರಿ ಕಾರ್ಯಕ್ಕೆಲ್ಲಾ ಅಜ್ಜಿಕ ಯಾಕೆ ಬರೋಕು? ಬಂದ್ ಹೋಗುವ ತಾಕತ್ ಇದ್ದರೆ ಬರೋಕು. ಇಲ್ಲರೆ ಬಾಕಾಗದ್‌ತ ಚಂಗಣ್ಣ ತಲೆ ಕೆರ್ಕಂಡ್ ಅವರ ಇವರ ಕರ್ದ್ ಅಜ್ಜಿನ ಎತ್ತಿ ಹಾಸಿಗೇಲಿ ಹೊಣ್‌ಕಿಸಿದೊ. ಅಂದ್ ಅಜ್ಜಿಗೆ ಊಟ ಮೂರು ನಾಮ!

ಅಂದ್ ಕರೆಂಟ್ "ಅದೋ ಬಂದೇ, ಅದೋ ಹೋದೆತ" ಮಕ್ಕಳಾಟ ಆಡ್ತಾ ಇತ್. ರಾತ್ರಿದ್ ಊಟ ಆತ್, ಶಾಸ್ತ್ರನೂ ಆತ್. ಚಪ್ಪರ ಕೆಳಗೆ ಕುದ್ದ "ಇಸ್ಪೀಟ್ ರಾಜಂಗ" ಮಾತ್ರ ಮಸ್ಗಿತ್‌ಲೆ. ಬೆಳಗಾನ ಗ್ಯಾಸ್ ಲೈಟ್ ಹೊತ್ತಿಕಂಡೇ ಇತ್. ಹಣ ಮಾಡಂವ ಮಾಡಿಕಂಡ್‌ತ್. ಚಪ್ಪೆ ಆದಂವ ಯಾಲ ತೋಟಕ್ಕಾಗಿ ಮನೆಗೆ ಹೋತು. ದುಡ್ಡು ಮಾಡ್ದಂವ ಇನ್ನೊಂದು ಚಪ್ಪರ ಮದುವೆ ಹುಡ್ಕಿಕಂಡ್ ಹೋತು. ಇಷ್ಟೆಲ್ಲಾ ಆಕನ ನಮ್ಮ "ಆಂಟಿ" ಗೇನಾತ್? ರಾತ್ರಿ ಚರ್ಬಿ ತಿಂದದಲ್ಲಾ....... ಹೊಟ್ಟೆ ಮೊಗ್ಚಿಕಂಡ್ ಬಾಕೆ ಸುರಾತ್. ವಾಂಕ್‌ರ್‌ಕೆ ಬಂದಂಗಾತ್. ಬೊಳಿ ಬೊಳಿ ಬುಡ್ತಾ ಇರ್‌ಕನ ಅಜ್ಜಿ ಎದ್ದತ್. 'ಹಾಳಾದ ಹಂದಿತ' ಹಂದಿಗೆ ಬೊಯ್ಕಂಡ್ ಮನೆಗೆ ಹೊರ್ಟತ್. ಅಲ್ಲೆ ಅಡ್ಡ ಇದ್ದ ಕಡ್ಕಲ್ ಹತ್ತಿತ್. ಹಂಗೆ ಹತ್ತಕನ ಜುಲಾಬು ಒತ್ತಿಕಂಡ್ ಒತ್ತಿಕಂಡ್ ಬಾತ್. 'ದರಿದ್ರ ಹಂದಿತ' ಹಂದಿಗೆ ಪುನಾ ಬೊಯ್ತ್. ತೋಡ್ ಕಡೆ ಹೈ ಸ್ಪೀಡಾಗಿ ಹೋತು. ತೋಡು ಕರೆಲಿ ಕುದ್ ಎದ್ ಹೋದ ನೀಲಮ್ಮಜ್ಜಿ ತಿರ್ಗಿ ಮೊದುವೆ ಮನೆಗೆ ಬಾತ್ಲೆ. ತನ್ನ ಮನೆಗೆ ಹೋಗಿ ಕೂಟಿ ಕೂಟಿ ಎರಡ್ ಗಲಾಸ್ ಮಜ್ಜಿಗೆ ಕುಡ್ತ್. ದಾಳಿಂಜೆ ಕೊಡಿನ ಕಷಾಯ ಮಾಡಿ ಅದನ್ನೂ ಕುಡ್ತ್. ಹಂಗೆಲ್ಲಾಕನ ಜುಲಾಬು ಪಟ್‌ತ ನಿತ್ತತ್!

ಅಜ್ಜಿಕಳೇ ಕುಡೆಕನ ತಿಂಬಕನ ಹಞ ಕಂಟ್ರೋಲ್ ಮಾಡಿಕಣಿ. ಅನುಭವ ಇರುವ ನೀವು ನಮ್ಮೊಟ್ಟಿಗೆ ಇನ್ನೂ ಸುಮಾರ್ ವರ್ಷ ಇರೊಕು. ನೀಲಮ್ಮಾಂಟೀ ನೀವಿಗೆ ಕೇಳ್ತಾ?



# 20. ಚಿಣ್ಕ್ ಮಿಣ್ಕ್ ಸೊಸೆ

**ಕಾನ್ವೆಂಟ್**ಲಿ ಓದಿದ ಇಂಗ್ಲೀಷ್‌ಗಾರ್ತಿ ಸೊಸೆಯಾಗಿ ಮನೆಗೆ ಬಂದದೇಂತ ಕೇಳ್ದ ಅತ್ತೆಗೆ ಖುಷಿಯೋ ಖುಷಿ. "ನನ್ನ ಸೊಸೆ ಪೊರ್ಲುಗಾರ್ತಿ. 'ಕಾರ್ಮೆಂಟ್'ಲಿ ಅವುಳು ಓದಿದ್‌ಗಡ. ಮಾತಾಡ್ದೆಲ್ಲಾ ಇಂಗ್ಲೀಷ್‌ಲೇ ಗಡ. ಬಯ್ಯೋದು ಇಂಗ್ಲೀಷ್‌ಲೆ ಗಡ. ಪುಸ್ತಕ ನೋಡಿಕಂಡ್ ಅಡಿಗೆ ಬಾಳಲಾಯ್ಕ್ ಮಾಡ್ದೆ ಗಡಾ! ಬಿಸ್‌ಲ್‌ಗೆ ಬಿಸ್‌ಲ್ ಕೊಡೆ, ಮಳೆಗೆ ಮಳೆ ಕೊಡೆ ಹಿಡ್ದ್ ಓಡಾಡ್ದೆ ಗಡ....." ಹಿಂಗೆ ಸೊಸೆ ಬಗ್ಗೆ ಅತ್ತೆ ಗುಣಗಾನ ಮಾಡ್ತಾ ಇತ್.

ಸೊಸೆ ಬಂದೂ ಆತ್. ಚಿಣ್ಕ್ ಮಿಣ್ಕ್, ಚಿಣ್ಕ್ ಮಿಣ್ಕಂತ ಸದ್ ಮಾಡಿಕಂಡ್ ಸೊಸೆ ಮನೆ ತುಂಬಾ ಓಡಾಡಕನ ಅತ್ತೆ ಹಿಗ್ಗಿ ಹೀರೆ ಕಾಯಿ, ಸೊಕ್ಕಿ ಸೋರೆಕಾಯಿ ಆದಂಗೆ ಆತ್. ಸೊಸೆ ಕಾಲಿಗೆ ಬೆಳ್ಳಿ ಕಾಲುಂಗುರ, ಆ ಕಾಲುಂಗುರಕ್ಕೆ ಗೆಜ್ಜೆ. ಕಾಲ್ ಚೈನಿಗೂ ಗೆಜ್ಜೆ. ಆ ಗೆಜ್ಜೆ ಸದ್ ಕೇಳದೇ ಇದ್ದ ಮನೆಯವುಕೆಲ್ಲಾ ಒಂದ್‌ಥರಾ ಆತ್. ಸೊಸೆ ಅಡಿಗೆ ಮನೆಗೆ ನುಗ್ಗಿದೇ ತಡ. ಈ ಚಿಣ್ಕ್ ಮಿಣ್ಕ್ ಸದ್ ಕೇಳ್ದ ಕೊತ್ತಿ ಹೆದ್ರಿ ಏಣಿ ಹತ್ತಿ ಅಟ್ಟಕ್ಕೆ ಓಡಿ ಹೋತು. ನಾಯಿಗಳೋ ಇದ್ ಯಂತದೋ 'ದೆಯ್ಯಂತ' ಹೆದ್ರಿ ಹೆದ್ರಿ ಬೊಗ್‌ಳಿಕೆ ಶುರ್ ಮಾಡಿಕಂಡೊ. ಹಟ್ಟಿ ಕಡೆ ಸೊಸೆ ಹೋತು. ಕೇಳದೇ ಇದ್ದ ಸದ್ ಕೇಳಿ ಕರಿಯಣ ಎತ್ ಹಗ್ಗ ತುಂಡ್ ಮಾಡ್ಕಂಡ್ ಓಡಿ ಹೋತು. ಉಳ್‌ದ ದನಗ ಮಲಗಿದ್ದವು ಎದ್ ನಿತ್‌ಕಂಡೊ. ಹೊಸ ಸೊಸೆ ಮನೆಗೆ ಬಂದರ್‌ಂದ ಮನೆ ಮೂಲೆ ಮುಡುಕೆಲ್ಲಾ ಬೆಳಕ್ ಕಂಡಂಗಾತ್. ಹಂಗೂ ಹಿಂಗೂ ಸೊಸೆ ಬಂದ್ ಒಂದ್ ತಿಂಗಾತ್.

ದಿನ ಕಳ್ದಂಗೆಲ್ಲಾ ಅತ್ತೆದ್ ಮೊಕ ಬೆಳಗಾಕೀಲೆ. ಮೊಕ ಕೆಂಬಡೆ ಕಾಯಿ ಆತ್. ಅತ್ತೆ ಆಡುವ ಮಾತೆಲ್ಲಾ ದದ್ ಮಡಿಕೆಗೆ ಒಡ್ದಂಗಾತ್! ಒಂದಿನ ಬೆಳಿಗ್ಗೆ ಅತ್ತೆದ್ "ಉದಯರಾಗ" ಸುರಾತ್. "ಏನ್‌ನೇ ಒನಕೆಲಿ ಗುದ್ದಿದಂಗೆ ದಡ್ಕ್ ಬುಡ್ಕ್ ಹೆಜ್ಜೆ ಹಾಕಿಯಾ. ಹೆಣ್ ಆದೋಳು ಸೊಲ್ಪ ಮೆಲ್ಲ ನಡಿಯೋಕು. ಗಾಳಿ ಬೀಸಿದಂಗೆ ಓಡಾಡಿರೆ ನಿನ್ನ ಸೆರ್‌ಗ್‌ನ ಗಾಳಿಗೆ ದೀಪ ಕೆಟ್‌ಹೋದೆ" ಅತ್ತೆ ಈ ರೀತಿ ಬುದ್ಧಿ ಹೇಳಿಕೆ ಸುರು ಮಾಡ್ತ್. "ನಿಂಗೆ ಬುದ್ಧಿ ಕಲ್ಸದೆ ಬುಡಿಕಲೆಂತ" ಸೊಸೆ ಲೆಕ್ಕ ಹಾಕಂಡತ್.

ಮನೆ ಹಿಂದೆ ಒಮ್ಮೆ ಅತ್ತೆಗೆ ಏನೋ ಸದ್‌ಕೇಳ್ತ್. ಯಾರ್ನೆ ಅದ್ ದಿಡಿ ದಿಡಿ ಉಯ್ಯೊದ್‌ತ ಕೇಳಿಕೂ ಕೇಳ್ತ್. ಆಗ ಮಗಳು ನಾನವ್ವಂತ ಹೇಳಿ ಕಂಡ್ ಎದ್ದತ್. ಓ ನೀನಾ ಮಗ್ಳೇ ಪಿರಿ ಪಿರಿ ಉಯ್ದದ್, ನಾ ಅವುಳುಂತ ಗ್ಯಾನ ಮಾಡ್ದೆತ ಹೇಳ್ತ್‌ಗಡ. ಇನ್ನೊಂದಿನ ಅತ್ತೆ ಸಿಡ್ಕ್ ಮಿಡ್ಕ್ ಸುರ್ ಮಾಡೇಬುಡ್ತ್. ಪಾತ್ರ ತೊಳೆಕನ ಸೊಲ್ಪ ಸದ್ದಾಗಿ ಹೋತು. "ಯಂಥನೇ ಅದ್. ಮಡಿಕೆನ ಒಡ್ದ್ ನಿನ್ನ ಎದೆ ಮೇಲೆ ಹಾಕಂಡ.

ಹಟ್ಟಿ ಬಾಚಿಕೆ ಹೋಕನೂ ಚಪ್ಪಲ್ ಬೇಕಾ? 'ನೀರ್ ಮುಟ್ಟಿಕೆ' ಹೋಕನೂ ಚಪ್ಪಲ್. ಅದೇ ಚಪ್ಪಲ್‌ನ ಅಡಿಗೆ ಮನೆಗೂ ಹಾಕಿಯ. ತವರ್ ಮನೇಲಿ ಎದೆ ಮುರ್ದ್ಡಿದ್ದರೆ ಆಗಿತ್. ಇಲ್ಲಿನೀ ರಾಣಿಯಂಗೆ ಮೆರಿಯಕೆ ಬಂದೊಳ. ಕುದ್ದರೆ ಒಳ್ಳ ಬಾಣಂತಿ ಕುದ್ದಂಗೆ ಕಾಲ್ ನೀಂಡಿ ಕುದ್‌ಕಂಡಿಯ. ಮೊನ್ನೆ ಗಂಡನೊಟ್ಟಿಗೆ ಪಿಸಿ ಪಿಸಿ ಹೇಳ್ತಾ ಇದ್ದ. ಯಾವ ಮಾಡಿ ಮನೆ ಕಟ್ಟಿಕೋ? ಅಂವನೋ ಎಲ್ಲಕ್ಕೂ ಬಸವನಂಗೆ ತಲೆ ಆಡ್ಸಿದೆ. ನಂಗೆ ಕೊಸ್ಲಕ್ಕಿ ಗಂಜಿ ಇಕ್ಕಿಯಲ್ಲ. ನೀ ಬೇಕಾರೆ ಅದ್ನೆ ಮುಕ್ಕು. ನಂಗೆ ಬಿಸಿ ಬಿಸಿ ಎರಡ್ ರೊಟ್ಟಿಕೊಡು". ಈ ಉದಯರಾಗ ಕೇಳ್ದ ಸೊಸೆಗೆ ದುಃಖ ಹೇಳಿಕೆ ಬೊತ್.

ಅತ್ತೆ ಈ ರೀತಿ ಹೀನಾ ಮಾನ ಬೊಯ್ಯೊದು ಕೇಳ್ದ ಮಾಂವ "ಯಂಥನೇ ನಿಂದ್ ಬೆಳಿಗ್ಗೆ ಪಿರಿ ಪಿರಿ? ಇಂದೋ ನಾಳೆಯೋ ಸರಿ ಮಾಡಿಕಂಡದೆ, ಸೊಲ್ಪ ಯತ್ಯಾಸ ಆದೆ. ಅದನೆಲ್ಲಾ ದೊಡ್ಡದ್ ಮಾಡಿಕಾಗದ್. ಈ ರೀತಿ ನೀ ದಡ್ಕ ಬಡ್ಕಂತ ಆಡ್‌ಬ್ಯಾಡತ" ಹೇಳಕನ "ಓಹೋ ಸೊಸೆನ ಕಂಡ್ರೆ ನೀವ್‌ಗೆ ಖುಷೀ...... ನೀವುಂತ" ......... ಇನ್ನೇನೋ ಹೇಳಿಕೆ ಬಾಯಿ ತೆರ್ದ ಹೆಣ್‌ನ ಬಾಯಿ ಮುಚ್ಚಿಕೆ ಹೇಳ್ತ್. "ಹಿಂದೆ ನೀನೂ ಈ ಮನೆಗೆ ಸೊಸೆಯಾಗಿ ಬಂದವುಳೆ. ನೀ ಬಂದ ಒಂದೇ ವಾರಲಿ ಈ ಮನೆ ಹೆಂಗಾತ್? ನಿನ್ನ ಅತ್ತೆನ ಜುಟ್ ಹಿಡ್ದ್ ಎಳ್ದಾಡಿ ಬಾಡೆಂದ ಕೈಯಾಲೆಗೆ ಎಳ್ದ್ ಹಾಕಿದ. ಅದೂ ಸಾಲದೆ ಕೈಯಾಲೆಂದ ಅಂಗಳಕೆ ನೂಕಿದಲ್ಲಾ, ಅದೆಲ್ಲಾ ಮತ್ರೋಳ. ನಾ ಮರೆಕಿಲೆ. ನೀನೂ ಒಂದ್ ಹೆಣ್. ಈ ಸೊಸೆನೂ ಒಂದ್ ಹೆಣ್. ಈ ರೀತಿ ಹೆಣ್‌ಗಳೇ ಹೆಣ್‌ಗಳ್ನ ದೂಷಣೆ ಮಾಡ್ದು ತಪ್ಪು". ಇಷ್ಟ್ ಹೇಳಿ ಮಾವ ಕನ್ನಡ್ಕ ಸರಿ ಮಾಡಿಕಂಡ್ ದೊಣ್ಣೆ ಕುಟ್ಟಿಕಂಡ್ ಹೊರಗೆ ಹೋತು.

ಅತ್ತೆ ದಡ್ಡೆ ಹಂದಿಯಂಗೆ ಗುರ್‌ಗುಟ್ಟಿ ಕಂಡೇ ಇತ್. ಸೊಸೆ ಕಣ್ಣೀರ್ ಹಾಕಂಡ್ ದಿನ ನೂಕುತ್ತಾ ಇತ್. ಗಂಡ ಅತ್ತ ಅವ್ವನೂ ಸಮಾಧಾನ ಮಾಡಿಕಂಡ್ ಇತ್ತ ಹೆಣ್‌ನೂ ಸಮಾಧಾನ ಮಾಡಿಕಂಡ್ ಪೇಚಾಡಿಕಂಡ್ ದಿನಕಳಿತಾ ಇತ್.

ಅತ್ತೆಗೊಂದು ಕಾಲ!
ಸೊಸೆಗೊಂದು ಕಾಲ!!



# 21. ಚಾಂಪಾ

**ಮುತ್ತಣ್ಣ** ಚಾಂಪಂಗೆ ವಯಸ್ಸ್ ಎಂಬತ್ ದಾಟಿರೂ ತನ್ನ ಬದುಕಿನ ಬಂಡಾಟ-ಕೊಂಡಾಟಗೆಲ್ಲಾ ನಿನ್ನೆ ಮೊನ್ನೆ ಆದಂಗೆ ಗ್ಯಾನ ಉಟ್ಟು. ಇಂದ್ ಕೈಲಿ ಹರೆದಿದ್ದರೂ ಬಾಯಿ ಮಾತ್ರ ಯಾಗೋಳು ವಟವಟಾಂತ ಹೇಳಿಕಂಡೇ ಇದ್ದದೆ. ಚಾಂಪ ಒಬ್ಬನೇ ಕುದ್ದಿರಕನ ಎಂತದೋ ಹೇಳಿಕಂಡ್ ನಗಾಡ್ಟೆ. ಒಮ್ಮೊಮ್ಮೆ ಸಿಟ್ ಬಂದಂಗೆ ಮೊಕನ ಮಾಡಿಕಂಡದೆ. ಚಾಂಪ ಹಿಂಗೆಲ್ಲಾ ಪರಪರ ಮಾತಾಡಿಕಂಡಿರಕನ ಬೇರೆ ಯಾರೂ ಅಲ್ಲಿ ಕುದ್ದಿರಕುಂತೇನೂ ಇಲ್ಲೆ. ಆದರೆ ಮನೆಯವುಕೆ ಕಿರಿಕಿರಿ. ಎಂತದಪಾ ಹಗ್ಲೂಂತಿಲ್ಲೆ, ಇರ್‌ಲ್ಂತಿಲ್ಲೆ. ಯಾಗ ನೋಡಿರೂ ಪಿರಿಪಿರಿ ಹೇಳಿಕಂಡೇ ಇದ್ದದೆ. ಈ ಚಾಂಪಂಗೆ ಬಾಯಿ ಸೋಲುದುಲೆನಾಂತ ಪಿಳ್ಳಿಕ ಪಿಸಿ ಪಿಸಿ ಮಾತಾಡಿಕಂಡವೆ.

ಮಾಸ ಗೈಪುಮನಿ ಮಾಡಿರೆ ಲಾಯ್ಕ ಬೆಂದಿರಕು. ಎಳೆ ಮಾಸನೇ ಆಕು. ಮೂಳೆ ಗೀಳೆ ಹಾಕುವಂಗಿಲ್ಲೆ. ಚಕ್ಕಳ ಗಿಕ್ಕಳ ಆದರೆ ಎಲ್ಲನೂ ಬಟ್ಲ್‌ಕರೆಗೆ ಉಂದಿ ಇಸಿದೆ. ರೊಟ್ಟಿಗಿಟ್ಟಿ ಮಾಡಿರೆ ಕರುಂಕುರುಂ ಬೇಡ. ನಾರ್ ಆದ ರೊಟ್ಟಿ ಬ್ಯಾಡ. ಬ್ರೆಡ್‌ನಂಗೆ ಮೆದೂ ರೊಟ್ಟಿನೇ ಆಕು. ಕಡುಂಬು ಮಾಡಿರೆ ಬೆಣ್ಣೆ ಹಂಗೆ ಇರೋಕು. ಅನ್ನ ಬೆಂದ್ ಮೆಡ್ಡೆ ಆಗಿದ್ದರೆ ಒಳ್ಳೆದ್. ಗೈಪು ಖಾರ ಆಕೆ ಬತ್. ಊಟ ಯಾಗೋಳು ಒಂದೇ ಸಮಯಕ್ಕೆ ಆಕು. ಎಲಡಿಕೇನ ಗುದ್ದಿ ಕೊಡೊಕು. ದಿನಾ ಬೋಗುಣಿ ಮತ್ತೆ ಎಂಜಿಲ್ ಕೊಳಂಬೆನ ತೊಳೆಕು. ಕತ್ತಲೆ ಆಕನ ಕಾಲ್ ತೊಳೆಕೆ ಒಂದ್ ಚೊಂಬು ಬಿಸಿನೀರ್‌ನೂ, ಟವಲ್‌ನೂ ಐಮರಲಿ ಇಸೊಕು. ಕಡಾವುನ ಮೆಟ್ ಕರೇಲಿ ಇಸೊಕು. ಕಾಲ್‌ತೊಳ್ದು ಬಾಡೆಗೆ ನುಗ್ಗಕನ ದೇವ್ರ ದೀಪ ಬೆಳಗಿರೋಕು.

ರಾತ್ರೆದ್ ಊಟ ಒಮ್ಮೊಮ್ಮೆ ಮಾಡಿರೆ ಆತ್, ಇಲ್ಲರೆ ಇಲ್ಲೆ. ಊಟ ಮಾಡಿ ಪರಪರ ಹೇಳಿಕಂಡ್ ಇರ್‌ಕನ ಹಾಸಿಗೆದ್ ಬೆಡ್‌ಶೀಟ್‌ನೆಲ್ಲಾ ಕೊಡ್ಕಿ ಹಾಸಿರೊಕು.ಕಂಬಳಿನ ಆಸ್ಪತ್ರೆಲಿ ಹಾಸಿದ್ದವಲ್ಲ ಹಂಗೆ ನೀಟಾಗಿ ಹಾಸಿರೊಕು. ದಿಂಬುನ ಸರಿಯಾಗಿ ಇಸಿರೊಕು. ಇಲ್ಲಿಗೆ ಚಾಂಪನ ಆ ದಿನದ ಸೇವೆ ಮಾಡ್ದಂಗೆ ಆತ್. ಇನ್ ಇರ್‌ಲ್ ಮಲ್ಗಿ ಹಣ ಹೊತ್ ಮುಟ್ಟ "ಶಿವಾ..... ನಾರಾಯಣಾ ..... ಗೋವಿಂದಾ..... ನೀ ಯಾಗ ಕರ್ಕಂಡ್ ಹೋದಿಯಾ? ಲಾಯ್ಕ ಇರ್‌ಕನೇ ಕರ್ಕ್ಯಾ. ಮಾಡಪ್ಪ್ ಆಸ್ತಿ ಮಾಡೊಳೆ. ಯಾರಿಗೂ ಸಾಲ ಕೊಡಿಕಿಲ್ಲೆ. ಇನ್ ನಾ ಇದ್ ಏನಾಕು? ಶಿವಾ"ಂತ ಗೊರಕೆ ಶುರು ಮಾಡ್ದೆ. ಮನೆಯವು ಊಟ ಮಾಡಿ ಮಲಕನ ಚಾಂಪಂಗೆ ನಿದ್ದೆ ಬುಟ್ಟಿದ್ದದೆ! ಮತ್ತೆ ಪರಪರಾ ಶುರೂ ಮಾಡಿರೆ ಕೋಳಿಕೂಂಗ ಮುಟ್ಟ ಒಂದೇ ರಾಗ.....!!

ಚಾಂಪಂಗೆ ಕೆಮಿ ಶುದ್ಧ ಉಟ್ಟು. ಮನೆಯವು ಮಲ್ಗಿ ಗೊರಕೆ ಹೊಡೆದು ಚಾಂಪಂಗೆ ಕೇಳಿಕೆ ಆದುಲೆ. ಒಂದೊಂದ್ ಕೋಂಬರೇಂದ ಒಂದೊಂದ್ ಥರದ ಗೊರಕೆ ಸದ್.

ರಿಪೇರಿ ಜೀಪ್ ಸ್ಟಾಟ್ ಆಕನ ಬರುವ ಸದ್‌ನಂಗೆ ಒಬ್ಬಂದ್, ರೇಸ್ ಬೈಕ್‌ನಂಗೆ ಇನ್ನೊಂದು, ಆನೆ ನೀರ್ ಕುಡ್ವಂಗೆ, ಗಾಡಿ ಎತ್‌ಗ ಉಸುರು ಬುಟ್ಟಂಗೆ, ಹೆಬ್ಬಾವು ಬುಸ್ ಗುಟ್ಟಂಗೆ...........ಹಿಂಗೆ ನಾನಾ ನಮೂನೆ ಸದ್ ಕೇಳ್‌ಕನ ಚಾಂಪಂಗೆ ನಿದ್ದೆ ಎಲ್ಲುಟ್ಟು? ಎದ್ ಕುದ್‌ಕಂಡ್, ಕಂಬುಳಿನ ಗುಡಿ ಹೊದ್‌ಕಂಡ್, ಕಟ್ಲಿಂದ ಕಾಲ್ ಕೆಳಗೆ ಬುಟ್‌ಕಂಡ್, ಕಾಲ್‌ಮೇಲೆ ಕಾಲ್ ಹಾಕಂಡ್ "ಹಿಂಗೆ ನಿದ್ದೆ ಮಾಡಪ್ಪು ಉದ್ದಾರಾದವೆಯಾ? ನಿದ್ದೆ ಮಾಡದೆ ತಿಂಗಾದಂಗೆ ನಿದ್ದೆ ಹೊಡ್ವೆವಲ್ಲಾ, ಮೈ ಮೇಲೆ ಗೋಚರೇ ಇಲ್ಲದೆ ನಿದ್ದೆ ಮಾಡಿರೆ ಕಳ್ಳ ಬಂದ್ ಹಟ್ಟಿಂದ ದನ ಹೊಡ್ಕಂಡ್ ಹೋದರೂ ಗೊತ್ತಾಕಿಲೆ. ಹುಲಿ ಬಂದ್ ದನ ಹಿಡ್ದರೂ ಗೊತ್ತಾಕಿಲೆ. ಪೆರ್ವಣಂಗ ತುಂಬಿ ಹೋಗೊಳೊ. ಕೋಳಿನ ಮಟ್ಟ ಮಾಡದೆ ಬುಡಿಕಿಲೆ. ಸೊಸೆ ಒಬ್ಬು ಉಟ್ಟು. ಇದ್ದರ ಹಾಳ್ ಮಾಡಿಕೆ. ರಾತ್ರೆ ಕೊತ್ತಿ ಹಾಲ್ ಹಳಗೆನ ಕಂಕ್‌ಣಿ ಮಾಡಿರೂ ಗೊತ್ಲೆ. ಹಂದಿ ಗೈಪುದು ಚೆಟ್ಟಿಸ ಮೊಗ್‌ಚಿ ಹಾಕಿರೂ ಗೊತ್ಲೆ. ಹುಂ! ಕೂಸ್ ಎದ್ ಅವ್ವಾ......ಅವ್ವಾ.....ಹಾಲ್, ಅವ್ವಾ ಹಾಲ್‌ಂತ ಬಡ್ಕಂಡರೂ ಗೊತ್ಲೆ. ಇವುಳು ಮನೆನಾ ಉದ್ಧಾರ ಮಾಡಿಕೆ ಇರ್‌ವುಳಾ? ಮಜನೋ ಹಾ! ಹೆಣ್‌ನ ಕಟ್ಟಿಕಂಡ್ ಸಂತೆ, ಜಾತ್ರೆ, ಮೊದುವೆ, ತಿಥಿ ಎಲ್ಲಾ ಕಡೆ ತಿರ್ಗುದೊಂದೇ. ಪಿಳ್ಳೆಕಳೋ ಉರಿ ಕೊಳ್ಳಿಗ. ಏನೋ ಮಾಡಿ ಕೊಡಕಲೇಂತ ಮಾಡಿ ಕೊಡ್ತಾ ಒಳೊ. ಅಲ್ಲಾ, ಈ ಸಮ ಇರ್ಕ್ಕೆ ಈ ಮಾದರಿ ಮಳೆ ಸುರಿತಾ ಉಟ್ಟಲ್ಲಾ ಒಬ್ಬಸಾರ್ ಎದ್ ಗದ್ದೆಕಡೆ ಹೋದು, ಗದ್ದೆ ಒಡಾ ಹೋಗುಟೋ ಇಲ್ಲೆಯೊಂತ ನೋಡಿಬಂದ್ ಮಲ್ಗುದು ನಾ ಕಂಡೊಳೆ. ಇವು? ಸಮಾ ಉಂಡೊ ಉಚ್ಚೆಸಾಂತ ಹೆಬ್ಬಾವಂಗೆ ಬಿದ್‌ಕಂಡೊ. ಇವುಕೆಲ್ಲಾ ಮನೆ ಮಠಂತ ಬೇಕಾ ಥೂ.........!" ಈ ರೀತಿ ಗೊಣುಗುದು ಚಾಂಪನ ಇರ್ಲ್‌ದ್ ಡ್ಯೂಟಿ!! ಇದರ ಹಣೆಬರ ಯಾಗೋಳು ಹಿಂಗೆಂತೇಳ್ವ ಮನೆಯವ್ರ ದಿನಚರಿ.

ಚಾಂಪಂಗೆ ಈಗ ಇರುವ ವ್ಯವಸ್ಥೆ ಬಗ್ಗೆ ಸಿಟ್ಟೇ ಸಿಟ್. ಉಪ್ಪು, ಬೆಲ್ಲ, ಉಪ್ಪುಮೀನ್ ಇಷ್ಟ್ ಮಾತ್ರ ಅಂಗ್ಡಿಂದ ತಾದು ಕಂಡ್ರೆ ಯಂತನೂ ಹೇಳ್ವಲೆ. ಬಾಕಿ ಎಂತದೇ ಅಂಗ್ಡಿಂದ ತಕಬರ್‌ಲಿ ಚಾಂಪನ ರಾಗಮಾಲೆ ಶುರಾಗದೆ ಬುಡಿಕಿಲೆ. ಈಗ ನಾವು ಸಗಣಿ ಒಂದ್ ಬುಟ್ ಬಾಕಿ ಎಲ್ಲಾ ತಾದು ಅಂಗ್ಡಿಂದ ತಾನೆ? ಚಾಂಪನ ಕಾಲಲಿ ಎಲ್ಲನೂ ಬೆಳ್ಕಣ್ತಾ ಇದ್ದೊ. ಮಾರಿಕೆ ಅಲ್ಲದಿದ್ದರೂ ಅವರ ಖರ್ಚಿಗೆಷ್ಟು ಬೇಕೋ ಅಷ್ಟ್ ಇರ್ತಿತ್. ನೀರುಳ್ಳಿ, ಗೆಂಡೆ, ಹಾಲ್‌ಗೆಂಡೆ, ಬೆಳ್ಳೇರಿ, ನೀರ್ ಸೋಂತೆ, ಲಾತ್‌ಕಾಳ್, ಹಲ್ಸಂಡೆ, ಗೈಪು ಬಾಳೆ, ಬಸಲೆ ಹಿಂಗೆ ಒಂದಿಲ್ಲದಿದ್ದರೆ ಒಂದ್ ತರಕಾರಿ ಇದ್ದೇ ಇರ್ತಿತ್. ಒಂದ್ ಅನ್ನ ಒಂದ್ ಗೈಪುಗೆ ಏನು ಬೇಕು ಹೇಳಿ? ಈಗಳೋ? ಹೊತ್‌ಹೊತ್ತಿಗೆ ಥರಥರದೇ ಆಕು. ಅಂಬುಲಿ ಕಾಣಂಗಿಲ್ಲೆ. ಕೊಸ್ಲಕ್ಕಿ ಗಂಜಿ ಬಡ್ ಹುಳಿ ಉಪ್ಪುನಕಾಯಿ ಎಲ್ಲುಟ್ಟು? ಕೆಂಡಲಿ ಸುಡುವ ರೊಟ್ಟಿ, ಎಲ್ಲುಟ್? ಹಾಳ್ ಮಿಷಿನ್ ರೊಟ್ಟಿನ ಗ್ಯಾಸ್ ಒಲೆಲಿ ಸುಟ್ಟವೆ.

ಹಾ! ಯಾವ ಶಿವಂಗೆ ಇದ್ ಆದೆಯೋ? ಅಂದ್ ಆಸ್ಪತ್ರೆಂತೇಳಿರೆ ಯಂತದ್ ಅದ್‌ತ ಕೇಳ್ತಿದೊ. ನಾನೊಮ್ಮೆನೂ ಕುತ್ತಿಸಿಕಂಡದಾಗಲಿ, ಗುಳಿಗೆ ನುಂಗಿದಾಗಲಿ ಇಲ್ಲೆ. ಈಗ? ಕೂಸ್ ಹುಟ್ಟಕನೇ ಕುತ್ತಿಸಿವೆ. ಗೋಡೆ ಪೆಟ್ಟಿಗೆಲಿ ಮದ್ದುಕುಪ್ಪಿ, ಮಾತ್ರೆಗಳ್ಳೆ ಅಂಗ್‌ಡಿ. ಟಾನಿಕ್‌ಗಡ, ಮೀನೆಣ್ಣೆ ಮಾತ್ರೆ ಗಡ, ಹಾರ್ಲಿಕ್ಸ್‌ಗಡ, ಬೋರ್ನ್‌ವಿಟಾಗಡ? ಮಕ್ಕಳಿಗೆ ರಾಗಿ ಮಣ್ಣಿ ತಿನ್ಸಿಂತೇಳಿರೆ ಸೊಸೆ ಕಿಸ್‌ಕಿಸ್ ನಗಾಡ್ವೆ. ಹಿಂಗೆ ಚಾಂಪ ಗೊಣಗುಟ್ಟುತ್ತಾ ಇದ್ದದೆ.

ನಮ್ಮ ಈ ಮುತ್ತಣ್ಣ ಚಾಂಪನ ಯವ್ವನ ಭಾಳಾ ಲಾಯ್ಕ ಇತ್‌ಗಡ. ಒಂದೇ ಕ್ಲಾಸ್‌ಲಿ ಮೂರ್ ವರ್ಷ ಕೂರ್ಸಿದೊ ಗಡ. ಇನ್ ನೀವೇ ಕುದ್ ಓದಿಕಣೀಂತ ಅಲ್ಲಿದ್ದ ಮಾಸ್ಟ್ರಗೆ ಹೇಳಿ ಬಂದ ಹೈದ ತಿರ್ಗಿ ಆ ಕಡೆ ಹೋತ್‌ಲೆಗಡ. ಎರಡನೆಯೋ ಮೂರನೆಯೋ ಸರಿ ಗ್ಯಾನ ಇಲ್ಲೆ. ಆದರೂ ಇಂಗ್ಲಿಷ್‌ಲಿ ಸೈನ್ ಮಾಡಿಕೆ ಬಂದದೆ. ಆ ಇಸ್ಕೂಲ್‌ಲಿ ಒಬ್ಬನೇ ಮಾಸ್ಟ್ರ ಇದ್ದದ್. ಆ ಮಾಸ್ಟ್ರೋ ಬೈನೆ ಕಳ್ ಕುಡ್ದ ಬಾದು. ಅಬು ಪಿರಿಯಕನ ಚಳಿ ಹಿಡೆತಿತ್ ಗಡ. ಆಗ ಆ ಮಾಸ್ಟ್ರ ಬಿಸ್ಲ್ ಕಾಸಿಕಂಡ್ ಕೂರ್ತಿತ್‌ಗಡ. ಅಷ್ಟೇ ಅಲ್ಲ. ಆ ಮಾಸ್ಟಿಗೆ ಒಂಥರಾ ತುರಿ ಕಜ್ಜಿ ಬೇರೆ!! ಹಂಗಾಗಿ ಈ ಮುತ್ತಣ್ಣ ಹೈದಂಗೆ ಎಂತ ಕೆಲ್ಸ ಗೊತ್ತುಟಾ? ಆ ಮಾಸ್ಟದ್ ಬೆನ್ ತೊರ್ಸುದು. ಅಲ್ಲಿ ತೊರ್ಸಿರೆ ಇಲ್ಲಿ ತೊರ್ಸು. ಇಲ್ಲಿ ತೊರ್ಸಿರೆ ಅಲ್ಲಿ ತೊರ್ಸುಂತ ಲಾಯ್ಕ ತೊರ್ಸಿಕಂಬತಿತ್‌ಗಡ. ಈ ಹೈದ ಭಾಳ ಲಾಯ್ಕ ತೊರ್ಸಿ ಕೊಡ್ತಿತಲ್ಲ, ಹಂಗಾಗಿ ಇವನ ಇಲ್ಲೆ ಕೂರ್ಸಿಕಂಬದೇ ಒಳ್ಳೆದ್‌ಂತ 3ನೇ ಕ್ಲಾಸ್‌ಲಿ ಮೂರು ವರ್ಷ ಕೂರ್ಸಿತ್‌ಗಡ. ಈ ಹೈದ ಮೂರು ವರ್ಷ ಕುದ್ದಲ್ಲೇ ಕುದ್ ಬೆಂಚಿ ಬಿಸಿ ಆಕನ ಇನ್ ನಾ ಇಸ್ಕೂಲಿಗೆ ಹೋದೇಲೆಂತ ಹಠ ಹಿಡ್ತ್‌ಗಡ . ಆಗ ಅಪ್ಪ "ನೀ ಹಂಗಾರೆ ಗದ್ದೆ ಊಡೂಂತ" ಹೇಳ್ತ್. ಇವಂಗೂ ಅಷ್ಟೇ ಬೇಕಾಗಿತ್. ಇಸ್ಕೂಲ್ ದಾರಿ ಕಾಡ್‌ಕೂಡ್ತ್, ಗದ್ದೆ, ತೋಟ ಸುತ್ತಿಕೆ ಸುರುಮಾಡ್ತ್.

ಬಿಸು ಹಬ್ಬಲಿ ಎತ್ ಕಟ್ಟಿ ನಾಟಿಗಾಕನ ಆರ್ ಸಾಲ್ ಮಾಡಿ ಗದ್ದೆನ ಪರೆ ತಟ್ಟಿದಂಗೆ ಮಾಡ್ತಾ ಇತ್. ಬೇಸಗೆಲಿ ಗದ್ದೆದ್ ಪಟ್ಟೆಮಣ್ ತೆಗೆದು, ಸೂಟ್ ಮಣ್ ಹಾಕುದು, ಸೊಪ್ಪು ಕೊಚ್ಚುದು, ಗೊಬ್ಬರ ಹಾಕುದು, ಪುಣಿ ಕಡೆದು, ಮಣ್ ಮಡ್ಗುದು, ಗದ್ದೆಗೆ ಮರ ಹೊಡೆದು. ಆಹಾ! ಇವನ ಗದ್ದೆಗೆ ಇಳ್ದರೆ ಬೆಣ್ಣೆಗೆ ಕೈ ಹಾಕಿದಂಗೆ. ಗದ್ದೆಲಿ ಒಂದೇ ಒಂದು ಹುಲ್ಲುಗೆಂಡೆ ಕಾಂಬಕಿಲ್ಲೆ. ಊಡಕನೇ ಅಂಥದರ ಮೆಟ್ಟಿ ಮೆಟ್ಟಿ ಹೂಣ್‌ತಿತ್. ಕೆಲ್ಸಲಿ ಇಂವ ರುಸ್ತುಮ. ಎತ್ ಬುಡಕನ ಎತ್ತುಗಳ ಮೀಸಿ ಬುಡ್ತಿತ್. ಮತ್ತೆ ಸೀದ ಬಂದ್ ಕೂಳೆ ಹಲಸ್‌ಮರ ಹತ್ತಿ ಆ ಕೊಂಬೆ ಈ ಕೊಂಬೆನೆಲ್ಲಾ ಹುಡ್ಕಿರೆ ಒಂದಾರ್ ಹಣ್ ಇದ್ದೇ ಇರ್ತಿತ್. ಆಗ ಮರಲೇ ಕುದ್ ಇಡೀ ಒಂದ್ ಹಣ್‌ನ ತೀಂತಿತ್. ಪಡ್ಡೆ ಹೈದಂಗ ಮನಿ ಇದ್ದರೆ ಅವುಕೆ ಇಂವ ಮರಂದ ತಟಪಟ ಉದುರುಸುವ ಬೀಜನೇ ಗತಿ! ಇಂವ ಹೊಟ್ಟೆನ ಗಣಪನಂಗೆ ಮಾಡಿ ಇಳ್ದ ಅಲ್ಲಿ ಇಲ್ಲಿ ಸುತ್ತಾಡಿ ಆಕನ ಮಧ್ಯಾಹ್ನ

ಊಟಕ್ಕೆ ಆತಿತ್. ಮತ್ತೆ ಎರಡ್ ಬಟ್ಲ್ ಉಂಡ್ ಗದ್ದೆಗೋ ತೋಟಕೊ ಹೋತಿತ್.

ನಾಟಿ ಕೆಲ್ಸ ಸುರಾಕನ ಇಂವ ಬಲಾದ ಊಟ ಮಾಡ್ತಿತ್. ಏಳೆಂಟ್ ರೊಟ್ಟಿ ಅಲ್ಲದೆ ಮಸಿಗಿಕಿಲ್ಲೆ. ಕಡುಂಬು ಮಾಡಿರೆ ಹದ್ನೈದೋ ಇಪ್ಪತ್ತೋ. ಕೂಗಲೆ ಹಿಟ್ ಮಾಡಿರೆ ಅರ್ಧ ಕಳ್‌ಸಿಗೆ ಇವಂಗೇ. ಚೆಟ್ಟಿಟ್ ಮಾಡಿರೆ ಇವಂಗೆ ಸಿಂಹಪಾಲ್! ದೋಸೆ ಮಾಡ್ವೇ ಕಮ್ಮಿ. ಮಾಡಿರಂತೂ ಚಿಬ್ಬುಲ್‌ಲಿ ಅಷ್ಟ್ ಎತ್ತರಕ್ಕೆ ದೋಸೆನ ಅಟ್ಟಿ ಮಡ್ಗೊಕು. ಹೆಂಗೆ ತಿಂಬತಿತೋ ಹಂಗೆ ಗೈಯತಿತ್. ಬೀಡಿ ಸೇದುವ ಚಟ ಅಂಟಿಕಂಡತ್‌ಲೆ. ಯಾಗಾಗಾರೊಮ್ಮೆ ಕುಡೇತಿತ್. ಆದರೆ ಡೋಸ್ ಹಾಕಿ ಯಾರೊಟ್ಟಿಗೂ ಜಗಳಕ್ಕೆ ಹೋತಿತ್‌ಲೆ. ಬೇಟೆಗೆ ಹೋವ ಹುಚ್ಚು ಇತ್. ತಿಂಗಳು ಬೆಳಕುಂತೇಳಿರೆ ಪರಮಾನಂದ. ಇರ್ಳ್ ಕಾಡಿಗೆ ಹೋಗಿ ಮರಹತ್ತಿ ಕುದ್ದರೆ ಒಂದು ಗುಂಡಾಗದೆ ಇಳೆಕಿಲೆಂತೇಳುವ ಹಠ. ಚಾಂದಿ ಮರದ ಬೀಜ ತಿಂಬಕೆ ಮುಳ್ಳು ಹಂದಿಗ ಬಾತಿದೊ. ಒಮ್ಮೆ ಮುಳ್ಳುಹಂದಿಗೆ ಸಿಂಡ್‌ಸಿಕ್ಕಿತ್‌ತ ಕಂಡದೆ. ಮುಳ್ಳು ಕೆದರಿ ನಿತ್ತ ಹಂದಿಗೆ ಇಂವ ಗುಂಡ್‌ಹೊಡ್ತ್. ಇಳ್ಡ್ ನೋಡಿರೆ ಏಳೆಂಟು ಮುಳ್ಳು ಮಾತ್ರ ಬಿದ್ದುಟು! ಅರೆ ! ಸರಿಯಾಗಿ ಏಮ್ ಹಿಡ್ಡಿದ್ದೆ. ಹೆಂಗೆ ತಪ್ಪಿ ಹೋತಪ್ಪಾಂತ ಪರ್‌ದಾಡ್ತಿತ್. ಹಂದಿ ಗಾಬರಿ ಆಗಿ ಮುಳ್ಳು ಕೆದ್ರಿತಲ್ಲ, ಇಂವ ಗ್ಯಾನ ಮಾಡ್ದ್ ಹಂದಿ ದೊಡ್ಡದ್‌ತ. ಹಂಗಾಗಿ ಸೊಲ್ಪ ಎತ್‌ರ್ಸಿ ಗುಂಡ್ ಹೊಡ್ತ್. ಆ ಗುಂಡು ಮುಳ್ಳಿಗೆ ತಾಂಗಿತಷ್ಟೆ. ಕುಂಬುಳಿ ಹೂ ತಿಂಬಕೆ ಕಡುವೆ, ಸಾರಗ, ಕುರೇಂಗಿಗ ಬಾತಿದ್ದೊ. ಒಂದೆರ್ಡ್ ಕಡುವೆ, ಇಪ್ಪತ್ತೋ ಮೂವತ್ತೋ ಸಾರ್ಗ, ಲೆಕ್ಕ ಇಲ್ಲದಷ್ಟು ಕುರೇಂಗಿ ಹೊಡ್ದುಟು. ಬೆಸಗೆಲಿ ಒಂದ್ ಮಣ್ ಮಡಿಕೇಲಿ "ಉಪ್ಪಣದ ಅಕ್ಷಯ ಪಾತ್ರೆ" ಇರ್ತಿತ್. ಅಕ್ಕಿ ಬೀಸಿಕೆ ಸಾರ್ಗದ ಹಾಳೆ. ಗೋಡೆಲಿ ಕಟ್ಟಿದ ಸಾರ್ಗದ ಕೊಂಬುನೊ ಕಡುವೆ ಕೊಂಬುನೊ ಇಸಿತ್. ಅದ್ಕೆ ಕೋಟು, ಅಚ್‌ಕೋಲು, ಕರಿ ಟೊಪ್ಪಿನ ಸಿಕ್ಕ್‌ಸ್‌ತಿತ್. "ಹೊಟ್ಟೆಗಟ್ಟಿ ಇದ್ದರೆ ರಟ್ಟೆಗಟ್ಟಿಂತ" ಹೇಳಿಕಂಡ್ ಹೊಟ್ಟೆ ತುಂಬಾ ಮಾಸ ಗೈಪು ತಿಂಬತಿತ್. ಸುಟ್ ಉಪ್ಪು ಮೆಣ್ಸ್ ಮೇಕಿ ತಿಂಬದರ್ಲಿ ಎತ್ತಿದ ಕೈ. ಕೋಳಿ ಲಾಕಿಗೀಕಿಯಾದರೆ ಹೊಟ್ಟೆ ಬಗ್ದ್ ಇಡೀ ಕೋಳಿನ ಸುಟ್ ಉಪ್ಪು ಮೆಣ್ಸ್ ಮೇಕಿಕಂಡ್ ತಿಂದ ಬಾಯಿ-ಮುತ್ತಣ್ಣಂದ್.

ಊರೊಳಗೊಂದು ಮೊದುವೆ ಎಳಿಗಿತ್‌ಂತಾದರೆ ಮುತ್ತಣ್ಣಂಗೆ ಬುಲಾವ್! ಮೊದುವೆಗೆ ಇನ್ನೊಂದು ವಾರ ಉಟ್ಟುಂತೆಳ್‌ಕನ ಒಂದ್ ಡಜನ್ ತೋಟ ಮುತ್ತಣ್ಣನ ಜೋಬಿಗೆ ಬಾತಿತ್. ಜೊತೆಗೊಬ್ಬನ ಕರ್ಕಂಡ್ ಒಳ್ಳೊಳ್ಳ ಕಡೆ ನೋಡಿ ಒಳಿಕಟ್‌ತಿತ್. ಕೊಲ್ಲಿಕರೆ, ಹಣ್‌ಮರ, ದಾಟುವ ಕಂಡಿ, ಇಂತ ಕಡೆ ಮರಲಿಯೋ, ನೆಲಲೋ ಒಳಿ ಮಾಡಿ ರಾತ್ರೆ ಕೂರ್ತಿತ್. ಮೊದುವೆಲಿ ಕಾಡ್‌ಮಾಸದ ಊಟ ಇದ್ದರೆ ಅದ್ ಗೌಜಿ ಮೊದುವೆ. ಇಲ್ಲರೆ ಸಪ್ಪೆ ಮೊದುವೆ. ಒಂದ್ ಸತಿ ಅಡ್ಡೀ ಕೊಂಬ ಕಡುವೆ ಸಿಕ್ಕಿಬುಡ್ತ್. ಹಾ! ಮುತ್ತಣ್ಣಲ್ಲ ನೀನ್ ಮುತ್‌ನಂಥಾ ಅಣ್ಣಾಂತ ಜನ ಕೊಂಡಾಟ ಮಾಡ್ದೊ. ಚಪ್ಪರದ ಊಟಕ್ಕೆ ಕಡುವೆ ಮಾಸ, ಮೂರ್ತದ ಊಟಕ್ಕೂ ಅದೇ. ಕಡುವೆ ಮಾಸ ಗೈಪುನ ದೊಡ್ಡ

ಚಟ್ನೆ ಕಡಾಯಲಿ ಮಾಡ್ದೊ. ಬೆಂದಾಕನ ಇನ್ನೂ ಖಾರ ಹಾಕಿತ್‌ಲೆ-ಎಲೆಗೆ ಹಾಕಂಡೋ ಸಮಾ ತಿಂದೊ. ಒಳ್ಳ ಬತ್ತದ ಎನ್ನೆಸ್ ಇತ್. ಕುಡ್ದೊ ತಿಂದೊ. ತಿಂದೊ ಕುಡ್ದೊ. ಚಪ್ಪರದ ಊಟನೂ ಆತ್. ತೊಟ್ಲು ಕೂಸು ಬುಟ್ ಬಾಕಿ ಎಲ್ಲವೂ ಗಮ್ಮತ್ತಾಗಿ ತಿಂದೊ. ಮೊದುವೆ ಹೈದಂಗೆ ಶಾಸ್ತ್ರ ಆತೋ ಇಲ್ಲೆಯೋ? 'ಆತಪ್ಪಾ ಬುಡಿ, ಸಾಕಪ್ಪಾ ಬುಡಿ, ಮಾಡಿರೆ ಬೆಳಗಾನ ಮಾಡೊಷ್ಟ್ ಉಟ್ಟು'ಂತೇಳಿಕಂಡ್ ಚಪ್ಪರ ಕಾರ್ಯ ಮುಗ್ಸಿದೊ.

ಮಾರನೆ ಮೂರ್ತದ ಊಟಕ್ಕೆ ಹಂದಿಗೈಪೂ ರೆಡಿಯಾತ್. ಕಡುವೆ ಗೈಪು ಹೆಂಗುಟ್ಟು, ನೋಡ್ನೋಂತೇಳಿ ಕಡಾಯದ ಮುಚ್ಚೊಳ ತಗ್ದರೇ..........ಪಾರೆಕಲ್ಲಂಗೆ ತುಪ್ಪ ಗಟ್ಟಿ ಆವುಟು. ಒಳ್ಳ ತುಪ್ಪ ತುಂಬಿದ ಕಡುವೆರಾ...... ಮೊದುವೆ ಹೈದ ಒಳ್ಳ ಬರ್ಕತ್‌ನಂವಂತ ಮಾತಾಡಿಕಂಡೊ. ಮೂರ್ತದ ಊಟಕ್ಕೆ ಜನ ಕೂರೊಕುಂತೇಳ್‌ಕನ ಅದ್ಹಾ! ಖಾಕಿ ಬಟ್ಟೆವು ಬಂದೊ!! ಯಾರೊ ರಾತಾರಾತ್ರನೆ ಹೋಗಿ ಫಾರೆಸ್ಟ್ ರೇಂಜರ್‌ಗೆ ಚಾಡಿ ಪಿತ್ನಾಟ ಮಾಡಿಬುಟ್ಟೊಳೊ. ಮಾಮೂಲಿ ತಿರ್‍ಗಾಡುವ ಒಬ್ಬ ವಾಚರ್, ಇನ್ನೊಬ್ಬ ಗಾರ್ಡ್, ಮತ್ತೊಬ್ಬ ಹೊಸಬಾಂತ ಕಂಡದೆ, ಗಾರ್ಡ್ ಅಲ್ಲಾ ಮಣೆದಾರ ಇರೊಕು. ಬಂದವು ಮನೆ ಯಜಮಾನನ ಹುಡ್ಕುತಾ ಒಳೊ. ಚಪ್ಪರದ ಕೆಳಗೆ ಬಂದ್ ಪೇಚಾಡಿವೆ. ಮದುವಣ್ಣ ಸಣ್ಣದಾಗಿ ಬೆವುರ್‌ತಾ ಉಟ್ಟು! ಹೈದನ ಅಪ್ಪ ಓಡಿಬಂದ್ "ಬನ್ನಿ ದೇವ್ರು, ಬನ್ನಿ. ಇತ್ತ ಬನ್ನಿ, ಇಲ್ಲಿ ಕೂರಿ, ಅಲ್ಲಿ ಕುದ್ರಿ, ಕುದ್‌ಕಣೆಯಪ್ಪಾ... ಒಳ್ಳ ಸಮೇಲಿ ಬಂದೊಳರಿ"ಂತೆಲ್ಲಾ ಸತ್ಕಾರದ ಮಾತಾಡಕನ ಬೇಟೆಗಾರ ಮುತ್ತಣ್ಣ ಇವರ ನೋಡಿ ಓಹೋ..... ಇವರ ಮೂಗಿಗೆ ಕಡುವೆ ಗೈಪುದು ವಾಸನೆ ಗೊತ್ತಾಬುಟುಟ್ಟು. ಇಲ್ಲರೆ ಅವು ಹಿಂಗೆ ಬಾಕಿಲ್ಲೆ. ಯಾರೋ 'ಬರಿಕುತ್ತುವ' ಜನ ಚಾಡಿ ಹೇಳಿಯೊಳೊ. ಕೋವಿನ ನನ್ನ ಎಳ್ಕಂಡ್ ಓಡ್ಕಂಡ್ ಹೋದವೆ ಕಂಡದೆ. ಇವ್ರುಕೆ ಕಲ್ಸಿನೆಂತ ಗ್ಯಾನ ಮಾಡ್ತ್. ಗಾರ್ಡ್‌ಗಳ ಹತ್ರ ಹೋಗಿ "ಈ ಕಡೆ ಬನ್ನಿಂತ" ಪಿಸಿಪಿಸಿ ಹೇಳ್ತ್. ಗಾರ್ಡ್‌ಗ ಏನೇನೋ ಲೆಕ್ಕ ಹಾಕಂಡೊ. ನಮ್ಮನೆ ಒಳಗೆ ಹಾಕಿ ಸಮಾ ಬುಟ್ಟರೆ ಏನ್ ಮಾಡ್ತು? ನಮ್ಮ ಮೇಲಾಧಿಕಾರಿನೇ ಇತ್ತ ಕಳ್ಸಕ್ಕಾಗಿತ್. ಹೇಳಿ ಕೇಳಿ ಇದ್ ಮೊದುವೆ ಮನೆ. ನಾವು ಬಾದೇ ಬೇಡಾಗಿತ್. ಹೆಂಗೂ ಬಂದೊಳೊ. ಬಂದದ್ಕೆ 'ಖಾಕಿದ್ ಪವರ್' ತೋರ್‍ಸದೆ ಇದ್ದರೆ ಆಕಿಲೆ. ಇನ್ನೊಂದವಾ ಹಿಂಗೆ ಮಾಡಿರೆ ಹಂಗೆ ಮಾಡಿವೆ, ಹಿಂಗೆ ಮಾಡಿವೆಂತ ಹೇಳನೋಂತ ಗಾರ್ಡ್‌ಗ ಮಾತಾಡಿಕಂಡೊ. ಸರಿ, ಮುತ್ತಣ್ಣ ಏನ್ ಮಾಡ್ತ್? ಅವರ್‍ನ ಮನೆ ಹಿಂದೆ ಕೊಟ್ಟಿಗೆ ಒಳಗೆ ಬೆಂಚ್‌ಲಿ ಕೂರ್‍ಸಿತ್. ಮೂರೇ ಮೂರ್ ನೀರಿಗೆ ಸ್ಟ್ರಾಂಗ್ ಆಗಿ ಸಿಕ್ಕಿದ ಒಂದ್ ಕುಪ್ಪಿ ಬತ್ತದ ಸಾರಾಯಿನೂ ಮೂರ್ ಗಲಾಸ್‌ನೂ ಇಸಿತ್. ಸುರೂಗೆ ಮುಕ್ಕಾಲ್ ಮುಕ್ಕಾಲ್ ಗಲಾಸ್ ಹೊಯ್ತ್. ಅವು ಆಗ "ಇದೆಲ್ಲಾ ಬ್ಯಾಡ, ನಾವು ಡ್ಯೂಟಿ ಮೇಲೆ ಬಂದವು"ಂತ ಹೇಳಿಕಂಡೊ. ಹಂಗೆ ಹೇಳಿಕಂಡೇ ಗಲಾಸ್‌ನ ಕಲಾಸ್ ಮಾಡ್ದೊ. ಅಷ್ಟೊತ್ತಿಗೆ ಮೂರು ಬಾಳೆಲೆಲಿ ಕಡುವೆ ಮಾಸದ ಗೈಪುನ ತಂದ್ ಇಸಿದೊ. ಮತ್ತೆ ಮುತ್ತಣ್ಣ ಗಲಾಸಿಗೆ ಬೊಗ್‌ಸಿ ಬೊಗ್‌ಸಿ

ಕೊಟ್ಟಿತ್. ಅವು ತಿಂದೊ ಕುಡ್ದೊ. ಕುಡ್ದೊ ತಿಂದೊ. "ಅನ್ನಗಿನ್ನ ಬ್ಯಾಡ. ಇದ್ದರೆ ಮಾಸ ಗೈಪು ಕೊಡೀ"ಂತ ಗಾರ್ಡ್‌ಗ ಕೇಳ್ದೊ. ಇಂದ್ ನಂಗೆ ದೊಡ್ಡ ಮೂರು ಕಡುವೆಗ ಸಿಕ್ಕಿ ಹಾಕಂಡೋಂತ ಮುತ್ತಣ್ಣ ಮೀಸೆ ಕೆಳಗೆ ನಗಾಡ್ತ್. ಆಗ ಒಬ್ಬ ಗಾರ್ಡ್ ಹೇಳ್ತ್: "ಇಂತ ಶುಭ ಕಾರ್ಯಕೆ ಅಡ್ಡಿ ಪಡ್ಸಲೆಂದೇ ಮೂಲೆ ಮನೆ ರಾಜು ನಿನ್ನೆ ರಾತ್ರಿ ಪುಕಾರ್ ಕೊಟ್ಟ. ಎಂತ ಕೆಟ್ಟವನು ಆ ರಾಜು......ಛೆ ಛೇ"ಂತ ಬೇಜಾರ್ ಮಾಡಿಕಂಡ್ ಗಲಾಸ್ ಅಡೀಲಿದ್ದ ಸಾರಾಯಿನ ನಾಲಿಗೆಗೆ ಹನ್ಕಿಸಿಕಂಡತ್. ಮುತ್ತಣ್ಣ ಈ ಮೂರು ಜನ "ಟ್ಯಾಂಕ್"ಗಳ ಕೈ ಹಿಡ್ಕಂಡ್ ದಾರಿ ಕೂಡ್ಸಿತ್. ಅವು ತೇಲಾಡಿಕಂಡ್ ಇತ್ತ ರಟ್ಟಿಕಂಡ್ ಅತ್ತ ರಟ್ಟಿಕಂಡ್ ಹೋದೊ. ಬಂದ ದಿಕ್ ಯಾವ್ದೊ, ಹೋತಿರ್ದು ಯಾವ ದಿಕ್ಕೊ? ಅಂತೂ ಅಂದ್‌ದ್ ಅವ್ರ ಡ್ಯೂಟಿ ಆತ್.

ಇತ್ತ ಚಾಡಿ ಪಿತ್ಲಾಟ ಮಾಡ್ದ ರಾಜುನ ಮುತ್ತಣ್ಣ ಹುಡ್ಕ್ತಾ ಇರ್‌ಕನ ರಾಜುಗೆ ಹೆಂಗೋ ಈ ವಿಷ್ಯ ಗೊತ್ತಾಗಿಬುಡ್ತ್. ಊಟ ಮಾಡದೆ ರಾಜು ಓಡಿ ಹೋತು. ಹಂಗೆ ಹೋದ ರಾಜು ಇನ್ ನಾ ಈ ಊರ್‌ಲಿ ಇದ್ದರೆ ಕೊಂದೇ ಬುಡುವೊಂತೇಳಿ ಆ ಊರು ಬುಟ್ ಹೋದಂವ ನಾಪತ್ತೆ ಆಗಿ ಹೋತುಂತೇಳುವ ಕಥೆನ ಇಂದ್ ಮುತ್ತಣ್ಣ ಚಾಂಪ ಹೇಳಿಕಂಡ್ ಕೆಮ್ಮಿಕಂಡ್ ನಗಾಡ್ತೆ. ನಗಾಡಿಕಂಡ್ ಕೆಮ್ಮಿದೆ.

ಅಂದ್ ರಾಜು ಹಂಗೆ ಯಾಕೆ ಮಾಡ್ತ್? ಯಾಕೆಂತೇಳಿರೆ: ಗುಂಡು ಹೊಡೆವೆಲ್ಲಾ ಬೇಟೆಗಾರರಲ್ಲ. ಆದರೆ ರಾಜು ಹಂಗೆ ತನ್ನ ಬಗ್ಗೆ ತಿಳ್ಕಂಡವ. ಐದ್ ಗುಂಡು ಹೊಡ್ದರೆ ನಾಕ್ ಅತ್ತಳೇ. ಒಂದ್ ಮನಿ ಅಪ್ಪಿತಪ್ಪಿ ಸಿಕ್ಕಿಕಂಬತಿತ್. ಆದರೂ ತನ್ನ ಬುಟ್ಟರೆ ಯಾರೂ ಈ ಊರ್‌ಲಿ ಇಲ್ಲೆಂತ ಜಂಭಕೊಚ್‌ತಿದ್ದಂವ. ಆದರೆ ಕಣ್ ಮುಂದೇ ಮುತ್ತಣ್ಣನಂಥಾ ಶೂರ ಇದ್ದರೆ? ಹೆಂಗಾರ್ ಮುತ್ತಣ್ಣನ ಬರ್ಕಚ್ಚಿನ ಮುರೆಕೂಂತ ಸಂದರ್ಪ ಕಾಯ್ತಾ ಇತ್. ಇದೇ ಒಳ್ಳ ಸಂದರ್ಪಾಂತ ಚಪ್ಪರದ ರಾತಾ ರಾತ್ರೆನೆ ಹೋಗಿ ಗಾರ್ಡ್‌ಗಳಿಗೆ ಪುಕಾರ್ ಕೊಟ್ಟಿತ್. ಕಡುವೆ ಚಕ್ಕಳಕ್ಕೆ ಗೂಟ ಹೊಡ್ದ್ ಮಡಗಿದರ್ನ ಸನ ಹೇಳ್ದೂ ಅಲ್ಲದೆ ಅದರ ಕೊಂಬುನ ಗೋಣಿಚೀಲಲಿ ಸುತ್ತಿ ಕೊಟ್ಟಿಗೆ ಅಟ್ಟಲಿ ಇಸಿದರ್ನೂ ಹೇಳಿ ಬಂದಂವ. ಮೊದ್ಲೆ ದಿನ ಏನೂ ಗೊತ್ತಿಲ್ಲದವನಂಗೆ ಜನ್ರ ಮಧ್ಯ ಕೂಡಿಕಂಡ್ ದಾರಿಕಡೇ ನೋಡ್ತಿತ್. ಗಾರ್ಡ್‌ಗ ಬಂದೆತ್ತುದುಕೂ ಇಂವನೇ ಹೋಗಿ ಹಂಡೆಂದ ಚೊಂಬುಲಿ ನೀರೆತ್ತಿ ಕೊಟ್ಟಿತ್. ಯಾರಿಗೂ ರಾಜುನ ಮೇಲೆ ಸಂಶಯ ಬಾಕೆ ಸಾಧ್ಯನೇ ಇಲ್ಲೆ. ಬತ್ತದ ಕಳ್ ಹೊಟ್ಟೆಗೆ ಇಳಿಯಕನ ಒಬ್ಬ ಗಾರ್ಡ್‌ಗೆ ರಾಜುನ ಮೇಲೆ ಸಿಟ್ ಹತ್ತಿತ್. ಗಾರ್ಡ್ ಬಾಯಿ ಬುಡದೇ ಇದ್ದಿದ್ದರೆ...... ರಾಜು ಸಾಯಮುಟ್ಟ ಅದೇ ಊರ್‌ಲಿ ಇರ್ತಿತ್‌ಂತ ಹೇಳುವ ವಿಷ್ಯನ ಮುತ್ತಣ್ಣ ಚಾಂಪ ಇಂದೂ ಹೇಳ್ತಾ ಉಟ್ಟು.

ಹಿಂದೆ ಟಾರ್ಚ್‌ಗೀರ್ಚ್ ಇತ್‌ಲೆ. ದೂರದ ಊರಿಗೆ ರಾತ್ರೆನೇ ಹೊರ್ಡೊಕುಂತಾದರೆ ಲಾಟೀನ್ ತಕ್ಕಂಡೋಗ್ತಾ ಇದ್ದೊ. ದಿಬ್ಬಣ ಹೋಕುಂತಾದರೆ ತಲೆ ಮೇಲೆ ಲಾಟೀನ್‌ನ

ಕಟ್ಟಿಕಂಡ್ ನಡೇತಿದ್ದೊ. ಹಂಗೆನೆ ಬೇಟೆಗೂ ಹೋತಿದ್ದೊ. ಲಾಟೀನ್ ಬೆಳಕ್‌ಲಿ ಪ್ರಾಣಿದ್ ಕಣ್ ಪಿಳಿಪಿಳಿಂತೇಳ್‌ಕನ ಇತ್ತಂದ ಗುಂಡ್ ಹೊಟ್‌ತಿತ್ತು. ಟಾರ್ಚ್ ಬಂದ ಮೇಲೆ ಬೇಟೆ ಭಾರೀ ಸುಲಭ ಆತ್. ಆರ್ ಶೆಲ್‌ದ್ ಟಾರ್ಚ್ ಬೆಳ್‌ಕ್‌ಲಿ ಕಡುವೆ, ಸಾರಗಗೆಲ್ಲಾ ಮಂಕಾಗಿ ನಿತ್ತೇ ಬುಡ್ತಿದ್ದೊ. ಮೊಲಗೆಲ್ಲಾ ಕುದ್ದಲ್ಲೇ ಇರ್ತಿದ್ದೊ. ಹಿಂದೆಂದ ಹೋಗಿ ಹಿಡ್ಕಂಡ್‌ಬುಡ್ತಿದೊ. ಹಿಂಗೆ ಒಮ್ಮೆ ಗುಡ್ಡದ ಮೇಲೆ ಒಂದ್ ಕಡುವೆ ಕಣ್ ಕೊಡ್ತಾ ಇರ್‌ಕನ ಢಂತ ಗುಂಡ್ ಹೊಟ್ಟಿತ್. ಆಗ ಅದ್ ಉರುಳಿಕಂಡ್ ಬಾಕನ ಬರಿಗೆ ಹಾರಿ ನಿಲ್ಲದೇ ಹೋಗಿದ್ದರೆ ಮುತ್ತಣ್ಣನ ಮೇಲೆ ಬಿದ್ ಬುಡ್ತಿತ್‌ಗಡ! ಇನ್ನೊಮ್ಮೆ ಹಿಂಗೆ ಬೇಟೆಗೆ ಹೋಗಿರ್‌ಕನ ಲೈಟ್ ಬುಟ್ಟಿತ್‌ಗಡ. ಎಂತದೋ ಮಿಣಿಮಿಣಿ ಕಣ್ ಕಾಣ್ತಾ ಉಟ್ಟು. ಹಂಗೆ ಕಾಂಬತ್ತಿದ್ದ ಕಣ್ ಇತ್ತಳೇ ಬಂದಂಗೆ ಕಾಂಬದ್‌ಗಡ. ಒಮ್ಮೆ ಕೆಳಗೆ ಬಗ್ಗಿದಂಗೆ, ಮತ್ತೆ ತಲೆ ಎತ್ತಿದಂಗೆ! ಅರೆ! ಇದ್ ಯಂತದಪಾ? ಭಾರೀ ಪ್ರಾಣಿ ಇರೊಕಲಾಂತ ಗ್ಯಾನ ಮಾಡಿಕಂಡೆ ಗುರಿ ಹಿಡ್ಕಂಡೇ ನಿತ್ತತ್‌ಗಡ. ಲೈಟ್‌ನ ಒಮ್ಮೆ ಆಫ್ ಮಾಡಿ ಮತ್ತೆ ಲೈಟ್ ಬುಡಕನ......ಅಪ್ಪಾ ಅಯ್ಯೋ ಹಾವು! ಹೆಬ್ಬಾವೋ ಕಾಳಿಂಗ ಸರ್ಪನೋ......ಓಡ್ದ ಓಟಕ್ಕೆ ಆ ದಾರಿಲಿ ಹುಲ್ಲು ಹುಟ್ಟಿರಿಕಿಲೆಂತ ಹೇಳಿಕಂಡ್ ನಗಾಡುವ ಮುತ್ತಣ್ಣಜ್ಜ ಈಗಳೂ ಬೆವುರ್‌ದೆ.

ಒಮ್ಮೆ ಕಡೂ ಬೇಸಗೆ. ಕಾಡ್‌ಕಡೆ ಹೋಗಿ ಬನ್ನೆಂತ ಕೋವಿ ತಕ್ಕಂಡ್ ಹೋತು. ಹೋಗಿ ಒಂದರ್ಧ ಗಂಟೆಲಿ ಗುಂಡೂ ಆತ್. ಕೆಂಪ (ಕುರೇಂಗಿ) ಬೀತ್. ಅದರ ಹೊತ್‌ಕಂಡ್ ಒಬ್ಬನ ಮನೆ ಮುಂದೆ ದಾಟಕು. ಅವು ಕಂಡವೆ. ಅವುಕೆ ಕಾಂಬಕಾಗದ್. ಏನ್ ಮಾಡ್ದು?

ಅವುಸ್‌ತ್‌ಕಂಡ್ ಅವುಸ್‌ತ್‌ಕಂಡ್ ಬಾತ್. ಕೋವಿನ ಮನೆಲಿ ಇಸಿತ್. ಅರ್ಧಬಟ್ಟಿ ಬತ್ತ ಹಿಡಿವ ಕುಕ್ಕೆನೂ ಒಂದ್ ಕತ್ತಿನೂ ತಕ್ಕಂಡ್ ಬಂದ ಕಡೇ ಹೋತು. ನಾಕೈದ್ ಹಲ್ಸ್‌ನ ಕಾಯಿನ ಕೊಯ್ತ್. ಕುರೇಂಗಿನ ಕುಕ್ಕೆ ಒಳಗೆ ಮಲ್ಗಿಸಿತ್. ಅದರ ಮೇಲೆ ಹಲ್‌ಸನ ಕಾಯಿನ ತುಂಬಿಕಂಡತ್. ತಲೆ ಮೇಲೆ ಕುಕ್ಕೆ ಇಸಿಕಂಡ್ ನಡ್ತ್. ದಾರಿಲಿ ಒಂದಿಬ್ಬರು ಕಾಂಬಕೂ ಸಿಕ್ಕಿದೊ. ಎಂತ ಮುತ್ತಣ್ಣ ಅದ್‌ತ ಕೇಳಿಕೂ ಕೇಳ್ದೊ. ತೌಡು ತೀರಿ ಹೋತು, ಬತ್ತ ಕುಟ್ಟಿತೂ ಇಲ್ಲೆ. ಹಂದಿಗಳಿಗೆ ಮಡ್ಡಿಗೆ ಹಲ್ಸನ ಕಾಯಿನೇ ಗತಿತ ಹೇಳ್ತ್. ಅಂವ ಹೇಳ್ದಂಗೆ ಹಲ್ಸ್‌ನ ಕಾಯಿ ಮೇಲೆ ಕಾಂಬತಿತ್. ಯಾರಿಗೂ ಸಂಶಯ ಬಾತ್ಲೆ. ಕೊಟ್ಟಿಗೆಲಿ ಕುರೇಂಗಿನ ಅಚ್‌ಕಟ್ ಮಾಡ್ದೊ. ಗೈಪು ಮಾಡುವಷ್ಟ್ ಮಾಡ್ದೊ. ಬೆಸಗೆಲಿ ಒಣಗುವಷ್ಟು ಒಣಗಿಸಿದೊ. ಮಾರನೇ ದಿನ ಬತ್ತಿಕಟ್ಟಿ ಅಕ್ಕನಲ್ಲಿಗೆ ಹೋಗಿ ಕೊಡಿಕೂ ಕೊಟ್ಟೊ.

ಬತ್ತದ ಬೆಳೆ ಹಾಲ್ ತುಂಬಿಕಂಡ್, ಕಾಯಿ ಬಾಂಗಿಕಂಡ್ ಇದ್ದ ಸಮಯ. ನಡೂ ಇರ್ಲ್ಲ ಕಳ್ದಿರ್ದು. ನೀರ್ ಕಲ್ಲಾಗುವಷ್ಟ್ ಸಳಿ. ತಿಂಗಳು ಕಂತಿಕಾಗಿತ್. ಅಂತ

ಹೊತ್‌ಲೇ ಗದ್ದೆ ಹೊಡಿ ಮಾಡಿಕೆ ಹಂದಿಗ ಬಾದು. ಮುತ್ತಣ್ಣ ಅಟ್ಟಪಾಳಿಲಿ ಮಲ್ಗಿದ್ದಂವ ಮೆಲ್ಲ ಎದ್ದವ್. ಬೆಂಕಿ ಮಾಡದೆ ಹಂಗೆ ಕುದ್ದವ್. ಹಂದಿ ಚಪ್ಪಿ ಚಪ್ಪಿ ತಿಂಬದು ಕೇಳ್ತಾ ಇತ್. ಮೆಲ್ಲ ಕೋವಿ ತಕ್ಕಂಡ್ ಪುಣಿಲೇ ಹರ್ಕಂಡೇ ಹೋದಂಗೆ ಹೋತು. ಹಿಂಗೇ ಹೋಗ್ತಾ ಇರ್‌ಕನ ಬೆಳೆ ಅಲುಗಾಡುದು ಆ ಮಯ ಮಯ ತಿಂಗಳು ಬೆಳಕ್‌ಲಿ ಕಾಂಬತಿತ್. ಸುಮಾರಾಗಿ ಅಂದಾಜಿ ಮಾಡ್ತ್. ಇದ್ ಭಾರೀ ಒಂಟಿಗ ಹಂದಿನೇ ಇರೊಕುಂತ ಗ್ಯಾನ ಮಾಡಿಕಂಡ್ ಬೇಟೆಕೊತ್ತಿನ ಎಳ್ತ್. ಆ ಕಡೆಗೇ ಗುರಿ ಹಿಡ್ಕಂಡ್ ಕುದ್ದವ್. ಅಷ್ಟೊತ್ತಿಗೆ ಬೇರೆ ಗದ್ದೆವು ದಬದಬಾಂತ ಟಿನ್ ಬಡ್ದೊ. ಹಂದಿ ಗಾಬರೀಂದ ಗದ್ದೆ ಒಳಗೇ ಪುಣಿ ಕರೆಕರೇಲಿ ಹೋಗಿ ಆಚೆಮೂಲೆಗಾಗಿ ದಾಟಿ ತೋಡು ದಾಟಿ ಗೊಗ್‌ಂತೇಳಿ ತೋಟ ಕಡೆ ಓಡಿ ಹೋತು. ನಾಳೆನೂ ನೀ ಬಾವ. ನಿನ್ನ ಸೊಂಟ ಮುರೆದೆ ಬುಡಿಕಿಲೇಂತ ಮುತ್ತಣ್ಣ ಹಂದಿಗೂ ಆ ಟಿನ್ ಬಡ್ದ ಜನಕ್ಕೂ ಬಯ್ಕಂಡ್ ಬಂದ್ ಬೆಂಕಿ ಹೋಸಿತ್. ಲಾಯ್ಕ ಬೆಂಕಿ ಕಾದ್ ಮಲ್ಗಿತ್. ಬೆಳಿಗ್ಗೆ ಎದ್ ನೋಡಿರೆ ಅರ್ಧ ಗದ್ದೆದ್ ಬೆಳೆ ಮಟ್ಟ ಆಗಿತ್. ಮಾರನೆ ದಿನ ತಿಂಗಳು ಸೊಲ್ಪ ಬೇಗ ಕಂತಿದೆ. ಆ ಇರ್‍ಳೂ ಹಂದಿಗಾಗಿ ಕಾತ್. ಅಂದ್ ಹಂದಿಗ ಬಾತೇಲೆ. ಹಿಂಗೆ ನಾಕೈದು ದಿನ ಕಳ್ದಿರ್ದು. ಮೋಡದ ಇರ್‍ಳ ಚಂದ್ರ ಮರೆ ಆದು ಕಾಂಬದು, ಕಾಂಬದು ಮರೆ ಆದು, ಆಗ್ತಾ ಇದ್ದದ್ ಪೂರ್ತಿ ಕತ್ತಲೇ ಆಗೋತು. ಜೊತೆಗೆ ಪರ ಪರ ಮಳೆ ಬೇರೆ. ಇಂಥ ಸಮಯ ಹಂದಿಗಳಿಗೆ ಮೂರ್ತದ ಹೊತ್ತು! ಅನುಭವಿ ಮುತ್ತಣ್ಣಂಗೂ ಅದು ಗೊತ್ತಿತ್. ಮೆಲ್ಲ ಸಾರಿಕಂಡ್ ಸಾರಿಕಂಡ್ ತೋಟದ ಕಡೆ ಇದ್ದ ಗದ್ದೆ ಕರೇಲಿ ಕುದ್ದವ್. ಹಂದಿಗ ಬಂದದಾಗಲೀ, ಚಪ್ಪಿಕಂಡ್ ತಿಂಬ ಸದ್ದಾಗಲೀ ಗುರುಗುಟ್ಟುವ ದೊನಿಯಾಗಲಿ ಕೇಳ್ತಾ ಇಲ್ಲೆ. ಇದ್ರ ಬಾಯಿಗೆ ಮಣ್ಣಾಕಲಿ ನಾ ಹೋಗಿ ಮಲ್ಗಿನೇಂತ ಅಟ್ಟಣೆ ಇದ್ದಕಡೆ ಬಾತ್. ಮಲ್ಗಿತ್. ಮತ್ತೆ ಎದ್ ಆ ಕಡೆಗೇ ಹೋತು. ಕರೀ ಕತ್ತಲೆ. ಮಳೆ ಇತ್‌ಲೆ. ಎಂತದೋ ಸಣ್ಣ ಸದ್ದಾತ್.ಟಾರ್ಚ್ ಬುಟ್ ನೋಡ್ತ್. ಅಲ್ಲಿ ಎಂತದೂ ಇಲ್ಲೆ. ಆದರೆ ಒಂದ್ ಹಿಂಡ್ ಹಂದಿಗ ಅಟ್ಟಣೆ ಇದ್ದ ಕಡೆಂದ ಗೊಗ್‌ತ ಓಡ್ಡ ಸದ್ ಕೇಳಿ ಇತ್ತ ಬಂದ್ ನೋಡಿರಲ್ಲಾ ಗೊತ್ತು!! ಹಂದಿಗ ಅಲ್ಲಲ್ಲಿ ಗುಡ್ಡೆ ಹೊಡ್ದ್‌ಬುಟ್ಟೊಳೊ. ಎಂತಾ ಪಾಕ್ದಾ ಹಂದಿಗ ಆಗಿರುವೊ. ಇರಿ, ನಾಳೆ ಮಾತ್ರ ನಿದ್ದೆ ಮಾಡದೆ ನಿಮ್ಮ ಶನಿ ಬುಡ್ಸಿನೇಂತ ಗ್ಯಾನ ಮಾಡಿಕಂಡ್ ಚೂಕೂಡಿ ಮಲ್ಗಿತ್. ಮಾರನೆ ಇರ್‍ಳ ಮನೆಂದ ಊಟ ಮಾಡಿ ಹೋಕನ ಸೊಲ್ಪ ಹೊತ್ತಾಗಿತ್. ಅಂತೂ ಒಂಬತ್ತು ಗಂಟೆಗೆಲ್ಲಾ ಗದ್ದೆಗೆ ಹೋತು. ಕಣ್ಣಿಗೆ ಕಣ್ ಹತ್ತದಂಗೆ ಬೆಳಿಗ್ಗೆ ಮುಟ್ಟ ಕಾತ್. ಅಂದ್ ಹಂದಿಗ ಬಂದ ಸಣ್ಣ ಸದ್‌ಕೂಡ ಕೇಳ್ತ್‌ಲೆ. ಬೆಳಿಗ್ಗೆ ಎದ್ ನೋಡಿರೆ ಒಂದ್ ಗದ್ದೆ ಮೂಲೆಲಿ ಗುಡ್ಡೆ ಹೊಡ್ದೊಳೊ!! ಇಂವ ಗದ್ದೆಗೆ ಹೋಕೆ ಮುಂದೆನೇ ತಿಂದ್ ಹೋಗಿದ್ದೊ. ಇನ್ ಯಂತನ ಮಾಡ್ದು? ಇನ್ ಹದ್ನೈದು ದಿನಕ್ಕೆಲ್ಲಾ ಕೊಯ್ಲು ಸುರಾಬುಟ್ಟದೆ. ಅಷ್ಟೊತ್ತಿಗೆ ಗದ್ದೆ ಒಂದ್ ಮಟ್ಟ ಆದೆ. ಹಂದಿಗ

ಸಾಮಾನ್ಯಾಗಿ ಬರುವ ದಾರಿಗೆಲ್ಲಾ ಕಡ್ಡಿ ಅಡ್ಡ ಇಸಿತ್. ಒಂದ್ ದಾರಿನ ಮಾತ್ರ ಸರಾಗ ಬುಟ್ಟಿತ್. ಹಂದಿ ಕಡ್ಡಿ ಮುರ್ಕಂಡ್ ಬಾತ್. ಬಂದ ಹಂದಿ ಒಂಟಿಗ! ಗದ್ದೆ ಪುಣಿಲೇ ಕದ್ರ್ ಕಚ್‌ತಿತ್. ಮುತ್ತಣ್ಣನ ಅಷ್ಟ್ ದಿನದ ಸಿಟ್ಟೆಲ್ಲಾ ಒಂದು ಗುಡ್ಡೆ ಆತ್. ಆ ಸಿಟ್ಟೆಲ್ಲಾ ಈ ಒಂಟಿಗ ಹಂದಿ ಮೇಲೆ. ಒಳ್ಳೆ ಉಂಡೆ ಹಾಕಿದ್ದ ತೋಟನೇ ಕೋವಿಗೆ ಇಳ್ಸಿಕಂಡಿತ್. ಒಳ್ಳೆ ರಾಜಾರೋಷಲಿ ತಿರ್ಗಡ್ತಾ ಇದ್ದ ಹಂದಿ ಒಮ್ಮೆ ಗದ್ದೆಗೆ ಇಳ್ತ್. ಗದ್ದೆಗೆ ಇಳ್ದ ಹಂದಿ ಜಾಸ್ತಿ ಹೊತ್ ಅಲ್ಲಿ ನಿತ್ತತ್‌ಲೆ. ಬತ್ತ ಬೆಳ್ದ್ ಹೋಗಿತ್ತಲ್ಲಾ? ಆ ಬತ್ತ ಹಂದಿಗೆ ಅಷ್ಟ್ ಇಷ್ಟ ಆತ್‌ಲೆತ ಕಂಡದೆ. ಕೂಡ್ಲೆ ಪುಣಿಗೆ ಹತ್ತಿತ್. ಹಿಂಗೆ ಹತ್ತಕನ ಗುಂಡ್ ಹೊಟ್ಟಿತ್. ತಿಂಗಳು ಬೆಳ್‌ಕಲಿ ಅದ್ ಹಂಗೆ ಇದ್ದದೇ ಆಶ್ಚರ್ಯ. ಹಂದಿ ಕಿರ್ಕ್ಂತೇಳಿ ಗದ್ದೆಗೆ ಹೊರ್ಣ್ಕಿತ್. ಕ್ಷಣಲಿ ಎದ್ ಓಡ್ತ್. ಓಡಕನ ಇನ್ನೊಂದು ಬಾರ್ಸಿತ್. ಹಂದಿ, ಮತ್ತೊಮ್ಮೆ ಗದ್ದೆ ಪುಣಿಂದ ಹೊರ್ಣ್ಕಿತ್. ಹಂಗೆ ಹೊರ್ಣ್ಕಿದ ಹಂದಿ ಗುರ್‌ತೇಳಿ ಪುನಾ ಎದ್ ಓಡ್ತ್. ಓಡಿ ಓಡಿ ತೋಟ ದಾಟಿ, ತೋಡು ನುಗ್ಗಿ ಕಾಡ್‌ಕಡೆ ಓಡೇ ಬುಡ್ತ್. ನಾಳೆ ಆಗಲೀಂತ ಮುತ್ತಣ್ಣ ಮಲ್ಗಿತ್. ಬೆಳಿಗ್ಗೆ ಎದ್ ಮೀದ್ ರೊಟ್ಟಿ ತಿಂದ್ ಮನೆಯವುಕೆ ಹೇಳಿ ನಾಕ್ ಜನ್ರ ಕರ್ಕಂಡ್ ಹುಡ್ಕಿತ್. ಹುಡ್ಕಿ ಹುಡ್ಕಿ ಸುಸ್ತಾತ್. ಎಲ್ಲೂ ಅದ್ರ ಪತ್ತೇ ಆತ್‌ಲೆ. ಇದಾಗಿ ನಾಕ್ ದಿನ ಆಗಿರ್ದು ಸೌದೆಗೆ ಹೋದವು ಹಿಂಗಿಂಗೆ ಹಿಂಗಿಂಗೆ ಅಡೀ ಹಂದಿ ಬಿದ್‌ಟು. ಆದರೆ ನೊಣಗ ಡೊಂಯ್‌ಗುಟ್ಟುವೆತ ಹೇಳ್ರು. ನೊಣ ಡೊಂಯ್‌ಗುಟ್ಟಿರೇನ್ ಗಡ ನೋಡೇ ಬುಡ್ರೊತ ಹೋದ್ರೊ. ಹೌದು ಒಂಟಿಗ ಹಂದಿ! ಮುತ್ತಣ್ಣನ ಗುಂಡ್ ಎರಡೂ ಬಡ್ದಂಗೆ ಕಂಡದೆ. ಈಗ ಎಂತ ಮಾಡ್ದು? ಕೆಲವು ಅಚ್‌ಕಟ್ ಮಾಡ್ರೊ. ಬೆಂಕಿಗೆ ಹಾಕಿರೆ ಎಲ್ಲಾ ಸರಿ ಆದೆ. ಇಷ್ಟ್ ದೊಡ್ಡ ಹಂದಿನ ಹಾಳ್ ಮಾಡ್ದು ಎಂತಕೆತ ಹೇಳಿರೆ ಮತ್ತೆ ಕೆಲವು "ಬೇಡ ಬೇಡ ಹಾಳಾದರೂ ಹಾಳಾಗಲಿ. ನಮ್ಮಬತ್ತ ಒಳ್ತಲ್ಲಂತ" ಹೇಳ್ರು. ಅಂತೂ ಕೆಲವು ಮುಗ್ಗುಲು ಮಾಸಕೆ ಆಸೆಪಟ್ರೆ ಕೆಲವು ಬ್ಯಾಡಾಂತೇಳ್ರು. ಮುತ್ತಣ್ಣಂತೂ ಏನಾರೂ ಮಾಡಿಕಣಿ ನಂಗಂತೂ ಬ್ಯಾಡಂತೇಳಿ ಇತ್ತ ಬಾತ್.

ಮುತ್ತಣ್ಣ ಮೊದುವೆ ಆದ್ ಯಾಗಂತೇಳುವ ಇಸ್ವಿಗಿಸ್ವಿ ಗೊತ್‌ಲೆ. ಅದೇ ಆ ದೊಡ್ಡ ಬೆಟ್ಟ ಜಾರಿ ಬಿದ್ದ ವರ್ಷ ಮೊದುವೆ ಆದ್‌ಗಡ. ಅಂದ್‌ನ ಕಾಲದ ಮಳೆ ಎಂತದ್? ಎತ್‌ಗಳ ಬೆನ್ ಮೇಲೆ ಬಾಳೆ ಎಲೆನೋ ಕಡುವೆ ಚಕ್ಕಳನೋ ಹೋಸಕಾಗಿತ್‌ಗಡ. ಗದ್ದೆಲಿ ಮೀನ್ ಎಸಂಡ್, ಆಮೆ ಆಹಾ! ಆ ದಿನ ಗ್ಯಾನ ಮಾಡಿಕಂಡ್ ಕೂರುದೇ ಒಂದು ಖುಷಿ. ಕೂಳಿ ಮಡ್ಗುದು ಕುತ್ತುಂಗೂಳಿಲಿ ಮೀನ್ ಹಿಡೆದು, ಗೋರಿಲಿ ಗೋಂಚುದು, ಕಡೆದು ಮಾಡ್ತಾ ಇದ್ರೊ. ಗದ್ದೆ ಕುಂಬೆಕಂಡಿ ನೀರ್ ಬೀಳುವಲ್ಲಿ ಪೊಡ ಮಡಿಗಿರೆ ಐದಾರ್‌ಸೇರ್ ಮೀನ್‌ಗ. ಕೊಯಿಲೆ ಮೀನ್ ಕಾಲಲಿ ಬರೀ ಕೊಯಿಲೆ ಮೀನ್‌ಗಳೆ. ಬಾಕಿ ಸಮೇಲಿ ಚರ್‌ಗ್, ಚಯಿಂಪೆ, ಗೆಂಡೆ ಮೀನ್‌ಗ.

ಕೊಯಿಲೆ ಮೀನ್ ಸಿಕ್ಕಿರಂತೂ ಕೆಲ್ಸನೇ ಇಲ್ಲೆ. ತಾದು ಹೊಟ್ಟೆ ಹಿಂಚುದು ಚಟ್ಟಿಗೆ ಹಾಕುದೇ. ಕಾಚುಳಿ ಹಾಕಿ ಗೈಪು ಇಳ್ಸಿರೆ ಆ ಪರಿಮಳಕ್ಕೆ ಬಾಯಿ ನೀರ್ ಕುಡೆಕು. ಎಂಟೊ ಹತ್ತೊ ರೊಟ್ಟಿ ಗುಳುಂ ಆತಿತ್. ಕೆಲವೊಮ್ಮೆ ಹೊಡಿ ಮೀನ್‌ನ ಕೈ ಮೀನ್‌ಂತ ಒಣಗಿಸಿಕಂಡ್ ಮಡ್‌ಗ್‌ತಿದ್ದೊ. ಹೆಣ್ಣಿಗಂತೂ ಮೀನ್ ಅಚ್‌ಕಟ್ ಮಾಡ್ದೇ ಕೆಲ್ಸ. ಮುತ್ತಣ್ಣಂಗೆ ಮೀನ್ ಹಿಡ್ದ್ ತಾದೇ ಕೆಲ್ಸ. ಅಪ್ಪ ಒಮ್ಮೊಮ್ಮೆ ಎಂತಕೆ ಅಷ್ಟೊಂದ್ ಮೀನ್ ತಂದಿಯಾತ ಕೇಳ್ತಿತ್‌ಗಡ. ಮೀನ್ ಹತ್ತಕನ ಇಳೆಕನ ಗದ್ದೆ ಬಯಲು ಪೂರಾ ಮೀನ್‌ದೇ ವಾಸನೆ. ನುಲಿ ಎಸಂಡ್ ಕಳೆ ಕೆಲ್ಸಲಿ ಕಾಲ್‌ಕಾಲ್‌ಗೆ ಸಿಕ್‌ತಿದ್ದೊ. ಆಮೆ ಗೈಪಂತೂ ವಾರಕ್ಕೆ ಎರಡ್ ಸತಿಯಾರ್ ಆತಿತ್. ಈಗ? ಗದ್ದೆಗೆ ಯಾಗ ರಸಗೊಬ್ಬರ ಬೀತೋ ಮೀನೂ ಇಲ್ಲೆ, ಎಸಂಡೂ ಇಲ್ಲೆ. ಆಗನ ಕಾಲ ಇನ್ ಬಾಕಿಲೆ ಕಂಡದೆ. ಈಗ ಕಾಟ್ಲಮೀನ್‌ಗಡ, ರೋಹುಗಡ, ಸಿಲೋರ್ ಮೀನ್‌ಗಡ. ಅವೆಲ್ಲಾ ಎಂತಕಿರ್ದು? ಬಾಳೆಮೀನ್, ಬರೆಮೀನ್, ಹಾವು ಮೀನ್-ಅದರ ರುಚಿ ಈಗನವುಕೆ ಉಟ್ಟಾ? ಮುತ್ತಣ್ಣ ಚಾಂಪ ಆ ದಿನಗಳ ಗ್ಯಾನ ಮಾಡಿ ಗ್ಯಾನ ಮಾಡಿ ಖುಷಿ ಪಟ್ಟದೆ.

ಅಂದ್ ಆ ಕಾಲಲಿ ಗಡಿಯಾರ ಇತ್‌ಲೆ. ಕೋಳಿ ಕೂಂಗಿರೆ ಓ ಬೆಳಗಾಕೆ ಆತ್! ಕೆಲವು ಹುಂಜಗಂತೂ ಒಂದ್ ನಿಮಿಷನೂ ವ್ಯತ್ಯಾಸ ಆಗದಂಗೆ ಕೂಂಗಿವೆ. ಚಳಿಗಾಲಲಂತೂ ಅರ್ಧಗಂಟೆ ಬೇಗನೇ ಕೂಂಗಿವೆ. ಜೀವಂತ ಗಡಿಯಾರಂತೇಳಿರೆ ಹುಂಜಗಳೇ. ಈಗ ಹೆಂಗುಟ್ಟು? ಕೋಂಬರೆ ಕೋಂಬರೇಲಿ ಗಡಿಯಾರಗಳೇ. ಎಲ್ಲಾ ಗಡಿಯಾರಗಳೂ ಡಂಗ್ ಡಿಂಗ್ ಸದ್ ಮಾಡಿ ರಂಪ ಏಳಿಸಿವೆ. ಗಂಟೆ ಗಂಟೆಗೂ ಸಂಗೀತನೇ. ಹಾಳಾದ ಗಡಿಯಾರ ನಿದ್ದೆನ ಹಾಳ್ ಮಾಡ್ದೆ. ಇಷ್ಟೆಲ್ಲಾ ಗಡಿಯಾರ ಇದ್ದರೇನ್‌ಗಡ? ಸೂರ್ಯನೇ ಎದ್ ಹಾಸಿಗೆ ಮೇಲೆ ಬಿದ್ದರೂ ಇವುಕೆ ನಿದ್ದೆ ಬುಡಿಕಿಲ್ಲೆ. ಎದ್ದವು ಹಾಸಿಗೆ ಮಡ್ಚಿವೆನ? ಹಾಸಿಗೆ ಒಮ್ಮೆ ಬುಳುಗಿರೆ ಮಡ್ಚುದೇಲೆ. ಅಲ್ಲಿ ಬೇನೆ ಇಲ್ಲಿ ಬೇನೆಂತೇಳಿಕಂಡ್ ಯಾಗೋಳು ಒಬ್ಬಲ್ಲ ಒಬ್ಬ ಬಿದ್‌ಕಂಡೇ ಇದ್ದವೆ. ಇನ್ನೆಲ್ಲಿ ಹಾಸಿಗೆ ಮಡ್ಚುದು?

ಚಾಂಪಂಗೆ ಟೆಲಿಫೋನ್ ಮತ್ತೆ ಟಿ. ವಿ. ಬಗ್ಗೆ ಎಲ್ಲಿಲ್ಲದ ಸಿಟ್ ಉಟ್ಟು. ರೈತ ಮಕ್ಕ ಹಗಲಿಡೀ ಗದ್ದೆ ತೋಟಂತ ಸುತ್ತಿಕಂಡ್ ಇರಕಾದವು. ಅದ್‌ಬುಟ್ ಒಬ್ಬ ಭೂತನಂಗೆ ಟೆಲಿಫೋನ್ ಹತ್ರನೇ ಕೂರೊಕು. ಮಾತಾಡ್ದೆಂತ? ನಿಮ್ಮದ್ ಗೈಪು ಆತಾ? ಎಂತ ಮಾಡೊಳರಿ? ನಂಟ್ರುಮನೆಗೆ ಹೋತ್‌ಲೆನಾ? ಇದ್ ಕೇಳಿಕೆ ಫೋನ್ ಬೇಕಾ? ಇನ್ ಟಿ.ವಿ. ಗಂತೂ ಕಂಡಾಪಟ್ಟೆ ಬಯ್ಗಳನೇ. ಹಗಲಿಡೀ ಕೆಲ್ಸ ಮಾಡವು ರಾತ್ರೆ ಟಿ.ವಿ. ಮುಂದೆ ಕುದ್ದರೆ ನಾಳೆ ಕೆಲ್ಸ ಮಾಡಿಕುಟ್ಟಾ? ಇಸ್ಕೂಲಿಗೋಗುವ ಮಕ್ಕ ಟಿ.ವಿ. ಮುಂದೆ ಕುದ್ದರೆ ಏನಾವೋ? ಕಾಲ ಕೆಟ್ಟೋತಪ್ಪಾ ಕೆಟ್ಟೋತುತ ಹೇಳಿಕಂಡ್ ತಲೆತಲೆ ಬಡ್ಕಂಡದೆ. ಇನ್ನೊಮ್ಮೆ ಇಲ್ಲೆಪ್ಪಾ ಕಾಲ ಕೆಟ್ಟುತ್‌ಲೆ ಕೆಟ್ಟವು ನಾವುಂತ ಚಾಂಪ ಪರಪರಾಂತ ಹೇಳ್ದೆ.

"ಮನೆಗೆ ಕರೆಂಟ್ ಬ್ಯಾಡಾಂತ ಬಡ್ಕಂಡೆ. ಇವು ಕೇಳ್ತ್‌ಲೆ. ಮೂರ್ ಕಾಸಿಗೆ ಪ್ರಯೋಜನ ಉಟ್ಟಾ. ಹಗಲಿಡೀ ಇದ್ದದೆ. ಯಾಗ ಕತ್ತಲೆ ಕತ್ತಲೆ ಆತ್‌ಂತೇಳಕನ ಇಡೀ ಮನೆನ ಕತ್ತಲೆ ಮಾಡಿ ಕರೆಂಟ್ ಕೈ ಕೊಟ್ಟದೆ. ಇದ್ ದರಿದ್ರ. ಕತ್ತಲಾಕನ ಮನೆಗೆ ಬೆಳಕಿರೊಕು. ಆದರೆ ಈ ಮನೆವು ಕರೆಂಟ್‌ನ ನಂಬಿಕಂಡ್ ಸೀಮೆಣ್ಣೆ ದೀಪನ ಮೂಲೆಗೆ ಹಾಕಿದೊ. ಇರ್‍ಳ್ ಉಂಬಕೆ ಕೂರಕನ ಒಮ್ಮೊಮ್ಮೆ ಕರೆಂಟ್ ಬಂದ್ ಹೋದೆ. ಇದೆಲ್ಲಾ ಅವಮಾನಲ್ಲದೆ ಮತ್ತೆಂತಾ? ಇರ್‍ಳ್ ನಂಗೆ ಆಗಾಗ ಹೊರಗೆ ಹೋಕು. ಬೋಗುಣಿ ಇಸಿದ್ದವೆ. ಥೂ! ಅದೆಲ್ಲಾ ಹೇಸಿಗೆಲ್ಲಾ? ದಿನಾ ಬೆಳಿಗ್ಗೆ ಚೆಲ್ಲವು ಯಾರ್? ತೊಳೆವು ಯಾರ್? ಇವುಳೇನೂ ಬೇಗ ಹೋಬುಡ್ತ್. ಆದರೆ ಈ ಜೀವ? ಇನ್ನೂ ಅವುಲಕ್ಕಿ ಕುಟ್ಟಿದಂಗೆ ಡಗ್‌ಡಗ್‌ಂತೇಳ್ದೆ. ಮಾತಾಡ್ನೋಂತೇಳಿರೆ ಯಾರೂ ನನ್ನಕ್ಕಲೆ ಕೂರವಿಲ್ಲೆ. ನಂಟ್ರು ಬಂದರೆ ಅಡಿಗೆ ಮನೆ ಬುಟ್ ಮಸುಗುದುಲೆ. ನನ್ನ ಜೊತೆವು ಕೆಲವು ಹೋದ್ರೊ, ಇನ್ ಕೆಲವು ನನ್ನಂಗೇ ಇರುವೊ". ಇದೆಲ್ಲಾ ಚಾಂಪನ ಮಾಮೂಲಿ ರಾಗ.

ಒಂದಿನ ಚಾಂಪನ ಮಾತಾಡ್ಸಿಕಂಡ್ ಪೋಯಿಂತೇಳಿ ಚಿನ್ನಯ್ಯ ಹೈದ ಹೋಗಿತ್‌ಗಡ. "ಚಾಂಪಾ ....... ಚಾಂಪಾ......ನೀವೊಮ್ಮೊಮ್ಮೆ ಒಳ್ಳ ರಸ ಬುಟ್ರೆ. ಹಂಗೆ ಯಾವ್ದಾರ್ ಒಂದು ರಸಾಲಿ ಕಥೆ ಹೇಳಿ ಚಾಂಪಾ"ಂತ್ತೇಳ್ತ್‌ಗಡ. ಆಗ ಚಾಂಪ "ನೀ ಹೋಗ್‌ನೆ ಸುಮ್ಮನೆ. ಇಲ್ಲಿ ನಾ ಹೋಕೆ ಹೊರ್ಳ್ಳೊಳೆ. ನಿಂಗೆ ಕಥೆ ಬೇರೆ ಸುಮಾನ"ಂತೇಳ್ತ್‌ಗಡ. ಅಯ್ಯೋ ಚಾಂಪಾ ಎಲ್ಲವೂ ಹೋಗವೇ. ಆದರೂ ಹೋಕೆ ಮುಂದೆ ನಾಕ್ ಕಥೆ ಹೇಳಿ ಹೋಗಿಂತೇಳ್ತ್‌ಗಡ. ಈ ಚಿನ್ನಯ್ಯ ಹೈದಂಗೆ ಯಾಕೆ ಬೇಕಿತ್ ಹೇಳಿ. "ನಿನ್ನ ತಲೆ ಹೊಡವೆಂತ" ಚಾಂಪ ದೊಣ್ಣೆ ಎತ್ತಿತ್‌ಗಡ. ಓಹೋ! ಈ ಚಾಂಪಂಗೆ ನನ್ನ ಗೊತ್ತಾತ್‌ಲೆಕಂಡದೆ. ಇಲ್ಲರೆ ಹಿಂಗೆಲ್ಲಾ ಮಾತಾಡಿಕಿಲೆ. "ಚಾಂಪಾ ನನ್ನ ಗೊತ್ತಾತಾ?" ಇಲ್ಲೆಲ್ಲೆ ಗೊತ್ತಾತ್‌ಲೆ. ಪಾಪ, ನೀ ಎಂತ ಪೀಂಕಿಸಿಕೆ ಬಂದಾ? ಹೋದಿಯೋ ಇಲ್ಲೆಯೋ? ನೀ ಕೆಳಗೆ ಮನೆ ಚಾಮಿ ಅಲ್ಲಾಂತ ಹೇಳ್ತ್‌ಡ. ಆಗ ಚಿನ್ನಯ್ಯ ಹೈದ ಚಾಂಪನ ಕೆಮಿ ಹಕ್ಕಲೆ ಹೋಗಿ "ಚಾಂಪಾ ನಾನ್ ಭಾಮುಂಡ್ಲದ ಚಿನ್ನಯ್ಯ. ಕೆಳಗೆ ಮನೆ ಚಾಮಿ ಅಲ್ಲಾ"ಂತ ಹೇಳ್ತ್‌ಗಡ. "ಓ! ನೀ ಚಿನ್ನ ಹೈದನಾ? ಯಾಗ ಬಂದ? ಯಾಕೆ ಬಂದ..... ಯಾಗ ಹೋದಿಯಾ"ಂತೆಲ್ಲ ಆಗ ಕೇಳ್ತ್‌ಗಡ.

ಚಿನ್ನಯ್ಯ ಕೂಡ್ಲೆ ಎಲೆ ಅಡಿಕೆ ಗುದ್ದಿ ಕೊಟ್ಟತ್. ಚಾಂಪ ಆ ಎಲಡಿಕೆನ ಬಾಯಿಗೆ ಬಿಸಾಕಂಡ್ ಮಾತ್ ಸುರು ಮಾಡ್ತ್.

"ಅಲ್ಲಾ, ಈಗೆಲ್ಲಾ ಜನ ಊಡ್ತು ಹೆಂಗೆ? ಎತ್ತಿಗೆ ಎತ್ತೇ ಆಕುಂತಿಲ್ಲೆ. ಒಂದ್ ಎತ್‌ನೊಟ್ಟಿಗೆ ಇನ್ನೊಂದ್ ಎಮ್ಮೆನೋ ಕೋಣನೋ ಕಟ್ಟಿಕಂಡ್ ಊಡಿವೆ. ಸೋಮರಂತಿಲ್ಲೆ, ಸಾವು, ತಿಥಿಂತಿಲ್ಲೆ. ಇವುಕೆ ಪುರುಸೊತ್ತಾಕನ ಊಡ್ದೇ. ನಾನೆಲ್ಲಾ ಕೋಳಿ ಕೂಂಗಕನ ಗದ್ದೆಲಿರ್ತಿದ್ದೆ. ಮಧ್ಯಾನಕೆ ಮುಂದೆ ಎತ್ ಬುಟ್‌ಬುಡ್ತಿದ್ದೆ. ಈಗನವು?

ಸಾಯಂಕಾಲ ನಾಕಂಟೆಗೆ ಮಳೆ ಬಂದರೂ ಎತ್‌ಕಟ್ಟಿಕಂಡ್ ಊಡುವೆ. ಸೋಮರ ದನಗ ಹುಟ್ಟಿದ ದಿನ. ಅಂದ್ ಊಡಿಕಾಗದ್. ಊರ್‍ಲಿಮನಿ ಯಾರಾರ್ ಸತ್ತರೆ ಸಾಲ್ ಕೂಡದಿದ್ದರೂ ಅರ್ಧಕ್ಕೆ ನಿಲ್ಸಿ ಸಾವುನ ಮನೆಗೆ ಹೋತಿದ್ದ್ವೊ. ಗದ್ದೆಗೆ ಮರ ಹೊಡೆದ್ ಈಗ ಉಟ್ಟಾ? ಏನೊ ಕಾಟಾಚಾರದ ಕೆಲ್ಸ. ಕೆಲವು ಗದ್ದೆನೆಲ್ಲಾ ಹಾಳ್‌ಬುಟ್ರ್ವೋ ಸುಂಟಿ ನೆಟ್ರ್ವೋ. ಪೇಟೆ ಸುತ್ತಿದೊ. ಪ್ಯಾಟ್ರಿಗಡ, ಪ್ಯಾಟ್ರಿ!? ಮನೆವೆಲ್ಲಾ ಲಾಟ್ರಿ, ಮಕ್ಕೆಲ್ಲಾ ಪ್ಯಾಟ್ರಿ". ಅಷ್ಟೊತ್ತಿಗೆ ಚಾಂಪಂಗೆ ಕೆಮ್ಮುಲು ಬಂದ್ ಬುಡ್ತ್. ಕೆಮ್ಮಿಕೆಮ್ಮಿ ಆಕನ ಬಾಯಿಲಿದ್ದ ಎಲಡಿಕೆ ಹೊರಗೆ ಬೀತ್. ಕಾಂಕ್ರಿಸಿ ದೂರ ಉಗೆಕೆ ನೋಡ್ತ್. ಅದ್ ಕಾಲ್‌ಬುಡಕ್ಕೆ ಬೀತ್. ಹಲ್ಲಿಲ್ಲದ ಬಾಯಿ ನೋಡಿ ದೂರ ಉಗೆಕ್ಕಾದುಲೆ.

ಚಾಂಪ ಹಿಂದ್‌ನ ತನ್ನ ಅನುಭವದ ಕಥೆನ ಹೇಳಿಕೆ ಸುರ್‌ಮಾಡ್ತ್. ಒಮ್ಮೆ ಒಂದ್ ಎತ್ ಬರೆ ಕರೇಲಿ ಮೇಯಕೆ ಹೋಗಿ ಕಾಲ್ ಜಾರಿ ಬಿದ್ ಸತ್ತೋತ್. ಅದೇ ವರ್ಷ ಇನ್ನೊಂದ್ ಎತ್ ಹಲ್ಸನ್ ಹಣ್‌ದ್ ಗೂಂಜಿ ತಿಂದ್ ದೊಂಡೆಲಿ ಸೆಕ್ಕಿ ಸತ್ ಹೋತು. ಒಂದ್ ಜೊತೆ ಎತ್‌ಗ ಸತ್ ನಾನೆ ಸತ್ತಂಗಾತ್. ಒಂದ್ ಹೋರಿ ಇತ್. ಅದರ ತಿದ್ದಿದೆ. ಇನ್ ಅದರ ಜೊತೆಗೆ ಒಂದರ ತಂದರೆ ಸಾಕ್‌ಂತ ಗ್ಯಾನ ಮಾಡಿ ಗೋಣಿಕೊಪ್ಪಕ್ಕೆ ಹೋದೆ. ಒಟ್ಟಿಗೊಬ್ಬ ಆಳ್‌ನೂ ಕರ್‍ಕಂಡೆ. ಬ್ಯಾಗ್‌ಗೆ ಚೂಡಿ ಹಗ್ಗ ತುಂಬಿಕಂಡೆ. ಗೋಣಿಕೊಪ್ಪ ಬಸ್ ಸ್ಟಾಂಡ್‌ಂದ ತಿತಿಮತಿ ರಸ್ತೆಲಿ ಹೋದೊ. ಅಲ್ಲೊಂದು ಸೇತುವೆ ಉಟ್ಟು. ಆ ಸೇತುವೆ ದಾಟಿದೇ ತಡ. ಒಬ್ಬಂಗೆ ಗೊತ್ತಾಬುಡ್ತ್- ನಾವು ವ್ಯಾಪಾರಕ್ಕೆ ಹೊರ್‍ಟವುಂತ! ಅಂವ ದಲ್ಲಾಳಿ: ಅಜನೆ ಇಜನೆಂತ ಮಜಣೆ ಮಾಡಿ ನಮ್ಮನ ಕರ್‍ಕೊಂಡೋಗಿ ಒಂದ್ ಎತ್‌ನ ತೋರ್‍ಸಿತ್. ಹಲ್‌ಗಿಲ್ಲೆಲ್ಲ ಫಸ್ಟ್‌ಕ್ಲಾಸ್. ಬಾಯಿ ಕೂಡ್ದ ಈ ವರ್ಷ. ಗದ್ದೆಲಿ ಆನೆ ನಡ್ದಂಗೆ ನಡ್ದದೆಂತೆಲ್ಲಾ ಆ ಎತ್‌ದ್ ಗುಣಗಾನ ಮಾಡ್ತ್. ಇನ್ನೂರ್ ರೂಪಾಯಿಗೆ ವ್ಯಾಪಾರಾತ್. ಎತ್ತೋ ಪರಮ ಸಾಧು. ಸಧ್ಯ ನಮ್ಮ ಎತ್‌ಗೆ ಜೋಡಿಯಾಗುಟ್ಟಲ್ಲಾಂತ ಗ್ಯಾನ ಮಾಡ್ಕಂಡ್ ಹೊಡ್ಕಂಡ್ ಬರ್ತಾ ಇರ್‌ಕನ ಎತ್ ಬಡ್ಕಂತ ಮಲ್ಗಿ ಹೋತು. ಓಹೋ! ಎತ್‌ಗೇನಾತಪ್ಪಾ? ಅಯ್ ಉಯ್ಯಂತೇಳಿ ಏಳ್ಸಿರೆ ಇದ್ ಸುತಾರಾಂ ಏಳ್ತಾ ಇಲ್ಲೆ. ಬಳ್ಳಿನ ಕೈಗೆ ಸುತ್ತಿಕಂಡ್ ಎಳೆಕೆ ಆಳ್‌ಗೆ ಹೇಳ್ದೆ. ಅಂವ ಎಳ್ತ್. ಆ ಎತ್ ಉದ್ದೋಕೆ ಬಿದ್‌ಕಂಡ್ ಕಣ್ ಹೊಣ್‌ಕಿಸಿಕೆ ಸುರು ಮಾಡ್ತ್. ಸೋಂಕು ಗೀಂಕ್ ಆತೋ ಏನೋಂತ ಗ್ಯಾನ ಮಾಡಿ ಒಂದ್ ಹಿಡಿ ಮಣ್‌ನೂ ಹುಲ್‌ನೂ ಸೇರ್‍ಸಿ ಅದರ ಸುತ್ತ ತಂದ್ ಬಿಸಾಕಿದೆ. ಮತ್ತೆ ಎಳ್ದೊ. ಉಹುಂ! ಎತ್ ಮಸುಗುದುಲೆ. 'ಅಂಗಾರ' ದೇವ್ರಿಗೆ ಹೇಳಿಕಂಡೆ. ಹೆಂಗಾರ್ ಇದ್ ಎದ್ದತ್‌ಲೆ. ಬಾಲ ತಿರ್‍ಪಿದೆ. ಆಗ ಗೊತ್ತು, ಅದರ ಬಾಲ ಅಲ್ಲಲ್ಲಿ ಗಂಟ್ ಗಂಟಾವುಟು. ಯಾಕೆ ಹೇಳ್? ಹಿಂದೆನವು ಯಾರೋ ಇದರ ಬಾಲನ ತಿರ್‍ಪೀ ತಿರ್‍ಪೀ ಗಂಟ್ ಮಾಡಿ ಹಾಕೊಳೊ. ಈ ಎತ್ ಸೋಮಾರಿ ಎತ್. ನಾವು ದೊಡ್ಡ ಗುಂಡಿಗೆ ಬಿದ್‌ಬುಟ್ರ್ವೊಲ್ಲಾಂತ ತಲೆ ಮೇಲೆ ಕೈ ಹೊತ್

ಕುದ್‌ಕಂಡೊ. ಕಡೆಗೆ ಹಂಗೆ ಮಾಡಿ ಹಿಂಗೆ ಮಾಡಿ ಆಕನ ಎತ್ ಎದ್‌ನಿತ್ತತ್. ಒಂದ್ ಕಾಚಿ ದೊಣ್ಣೆ ಹಿಡ್ಕಂಡೆ. ಕಳ್ಳ ಚಾಲ್ ಮಾಡಿ ನಿಲ್ಲಕನ ಕಾಲ್‌ಕಾಲಿಗೆ ನಾಕ್ ಬುಟ್ಟೆ. ಎತ್ ಲಾಯ್ಕ ನಡ್ತ್. ಹಿಂಗೆ ನಡಿತಾ ಇರಕನ ಎತ್ ಇನ್ನೊಮ್ಮೆ ಮಲ್ಗಿಬುಡ್ತ್. ಹೊಡ್ದ್ವರಲ್ಲಾ ಬಡ್ದ್ವರಲ್ಲಾ, ಎತ್ ಕಲ್‌ಬಂಡೇ! ಬಾಲ ತಿರ್ಬಿರಲ್ಲಾ, ಗುದ್ದಿರಲ್ಲ ಏಳದಿರಕನ ನಮ್ಮ ಆಳಿಗೆ ಒಂದ್ ಉಪಾಯ ಹೊಳ್ತ್. ಬೆಂಕಿ ಕಡ್ಡಿ ಗೀರಿ ಎತ್‌ದ್ ಬಾಲದ ಬುಡಕ್ಕೆ ಇಸಿತ್. ಕಣ್ಣಿಗೆ ಸುಣ್ಣ ಬಿದ್ದಂಗಾಗಿ ಎತ್ ಚುಳ್ಳಾಡಿಕಂಡ್ ಎದ್ದೇ ಬುಡ್ತ್. ಎದ್ದ ಎತ್ ಬೇಗ ಬೇಗ ಹೆಜ್ಜೆ ಹಾಕ್ತಾ ಇತ್. ನಾವ್‌ಗೇ ಸುಸ್ತಾದಂಗಾತ್.

ಹಾತೂರು ಸೇತುವೆ ದಾಟಿದಂಗೆ ಸಿಕ್ಕುವ ಒಂದ್ ಹೋಟ್ಲು ಮುಂದೆ ಎತ್‌ನ ಬೇಲಿಗೆ ಕಟ್ಟಿದೊ. ಒಂದೊಂದು ಬೊಳ್ಳ ಚಾಯನೂ ಎರಡೆರಡ್ ಉಂಡೆನೂ, ಮರಗೆಣಸ್ ಉಪ್ಪಿಟ್‌ನೂ ತಿಂದೊ. ಇನ್ನೇನ್ ಹಗ್ಗ ಬಿಚ್ಚಿ ಹೊರ್ಡ್ಬೊಕುತೇಳ್‌ಕನ ಯಾರೋ ಇಬ್ಬರು ನಮ್ಮ ಹತ್ರ ಬಂದೊ. ಬಂದವು ನಮ್ಮ ಕೈಯಿಂದ ಹಗ್ಗ ಎಳ್ಕಂಡೊ. ಎತ್ ನಮ್ಮದ್. ನೀವು ಕದ್‌ಕಂಡೋಗ್ತಾ ಒಳರಿಂತ ದಬಾಯಿಸ್ತಾ ಒಳೋ! ಇದೆಂತ ಕಥೆತ ಕೆಳಗೆ ಮೇಲೆ ನಾ ನೋಡ್ತಾ ಒಳೆ. ಮರ್ಯಾದಿಲಿ ಬುಟ್ಟರೆ ಸರಿ. ಇಲ್ಲರೆ ಈ ಕೂಡ್ಲೆ ನಿಮ್ಮನ ಒಳಗೆ ಹಾಕಿಸುವೆಂತ ಜಬರ್‌ದಸ್ತ್ ಮಾಡಕನ ಅದೆಂಗೆ ನೀವು ಇದ್ ನಿಮ್ಮದ್‌ಂತೇಳಿರೆ. ನಾ ಇದ್ಕೆ ಇನ್ನೂರು ರೂಪಾಯಿ ಕ್ರಯ ಕೊಟ್ ತಕಂಡದ್‌ಂತ ಹೇಳ್ದೆ. ಆಗ ಅವು "ನಾವಿಗೆ ಅದೆಲ್ಲ ಗೊತ್ಲೆ. ಇದರ ಚಾರೆ ಬೇಕರೆ ಹೇಳಿವೆ. ಇದರ ಬಾಲದ ತುದಿ ಬೆಳ್ಳಂಗೆ ಉಟ್ಟು. ಹೊಟ್ಟೆ ಕೆಳಗೆ ಚುಳ್ಳು ಚುಳ್ಳುಟ್ಟು. ಬಲಕಾಲ್ ಕವಣೆ ಒಂದ್ ಬೆಳ್ಳಂಗೆ ಉಟ್ಟು. ಕೊಂಬು ಮಾತ್ರ ಮುಂದೆ ಇದ್ದಂಗಿಲ್ಲೆ. ದಪ್ಪ ಇತ್. ಈಗ ಇದರ ಕೀಸಿ ಕೀಸಿ ಮರ ಗೆಣಸ್‌ನಂಗೆ ತುದಿ ಚೂಪು ಮಾಡಿಯೊಳೊ. ಇಷ್ಟೆಲ್ಲಾ ನೀವ್ಗೆ ಹೇಳೊಕುಂತಿಲ್ಲೆ. ಇದ್ ನಮ್ಮ ಎತ್ತೇ ಹೌದು"ಂತ ಹೇಳಿ ಎತ್‌ನ ಎಳ್ಕಂಡ್ ಸೀದ ಹೊರಟೇಬುಟ್ಟೊ. ತಿರ್ಗಿ ನೋಡಿರೆ ನನ್ನ ಆಳ್ ಉಟ್ಟಾ? ಹಾಳಾದಂವ ಎತ್ತ ಹೋತು? ಅತ್ತ ಎತ್ತೂ ಇಲ್ಲೆ, ಇತ್ತ ಆಳೂ ಇಲ್ಲೆ. ಕಾಸ್ ಕೊಟ್ಟಾತ್ ಭಂಗಿ ಸುಟ್ಟೋತ್. ಹಾ! ವೆಂಕಟರಮಣಾಂತ ಅಲ್ಲೇ ಕುದ್ದೆ.

ಯಾರೊ ಒಬ್ಬ ಬಂದ್ "ಒಮ್ಮೊಮ್ಮೆ ಹಿಂಗೆ ಆದೆ. ಎಚ್ಚರ ಬೇಕು. ದನ ಕಳ್ಳರ್ ತುಂಬಿ ಹೋಗೊಳೊ. ಈಗ ಒಂದ್ ಬಸ್ ಬಂದದೆ. ಹತ್ತಿ ಹೋಗಿಂತ" ಪುಕ್ಸಟೆ ಸಲಹೆ ಕೊಟ್ಟತ್. ಮೊಕ ಪೂಜಿಕಂಡ್ ಬಸ್ ಹತ್ತಿ ಬಂದೆ.

ಇನ್ ಯಾವ ಮೊಕ ತಕ್ಕಂಡ್ ಮನೆಗೆ ಹೋಗಲಿ? ಇನ್ನೂರ್ ರೂಪಾಯಿ ನೀರಿಗೆ ಹಾಕಿದಂಗಾತಲ್ಲ? ಅಪ್ಪ ನನ್ನ ಸನಿ ಬುಡ್ಸದೆ ಬುಡಿಕಿಲ್ಲೆ. ಹೊಟ್ಟೆ ಬಟ್ಟೆ ಕಟ್ಟಿ ಕೂಡಿಟ್ಟ ಹಣ ಹಿಂಗಾದರೆ ಯಾರ್ ಸುಮ್ಮನಿರುವೋ? ನನ್ನದೇನೂ ತಪ್ಪಿಲ್ಲೆ. ಆದರೆ ಆ ಇಬ್ಬರು ಹಗ್ಗನ ಎಳ್ಕಂಡ್ ಹೋಕನ ಅವುಕೆ ಒಂದೆರಡ್ ಬುಡಕಾಗಿತ್. ಹಂಗೆ ಬುಟ್ಟಿದ್ದರೆ ನನ್ನ

ಕಯಿಮ ಮಾಡಿರುವೊ. ಆ ಜಾಗದವರ ಗೊತ್ತೂ ಇಲ್ಲೆ. ಏನಾರಾಗಲಿ ನಾ ಬದ್ಕಿ ಬಂದೊಳೆಲ್ಲಾ. ಅಪ್ಪ ಬಯ್ಯೊದು. ಇಲ್ಲರೆ ನಾಕ್ ಬುಡ್ತು! ನನ್ನ ಹೆಣ್ನ ಮುಂದೇ ನಂಗೆ ಬಿಗ್ದರೆ ನನ್ನ ಕತೆ ಏನಾಗ್‌ಬೇಡ. ಒಂದ್ ಸಾಲ್ ದೇವರ ಗ್ಯಾನ ಮಾಡ್ದೆ. 'ತವುಂಡಿಗೆ ನಾಕ್‌ಕಾಲ್ ಬ್ಯಾಟನೂ, ಗುಳಿಗಂಗೆ ಎರಡ್ ಕಾಲ್ ಬ್ಯಾಟನೂ, ಅಂಗಾರಂಗೆ ಹಣ್ ಕಾಯಿನೂ, ಅಯ್ಯಪ್ಪಂಗೆ ನಾಯಿ ರೂಪನೂ ಸಿರಿ ಬಂದ ಕಾಲಲಿ ಕೊಟ್ಟನಂತೆಲ್ಲಾ ಗ್ಯಾನ ಮಾಡಿಕಂಡೆ. ಮನೆಗೆತ್ತಿದೆ. ಅಪ್ಪನಕ್ಕಲೆ ಹೆಂಗೆ ಹೇಳ್ತು? ದೊಂಡೆ ಪಸೆ ಆರಿ ಹೋತು.

ಆದ್ದಾಗಲೀಂತ ಅಪ್ಪನಕ್ಕಲೆ ಹಿಂಗಿಂಗೆ ಹಿಂಗಿಂಗೆಂತ ಹೇಳ್ತಾ ಇದ್ದೆ. ಅಬ್ಬಾ! ಅಪ್ಪ ಆಗ ದೊಣ್ಣೆ ತಕ್ಕಂಡತಲ್ಲಾ!! ದೊಣ್ಣೆನೊಮ್ಮೆ ನೆಲಕ್ಕೆ ಕುಟ್ಟಿತ್. "ನಾ ಅಂದೇ ನೀ ಹುಟ್ಟಕನೇ ಗ್ಯಾನ ಮಾಡ್ದೆ. ನೀನೊಂದು ಸನೀಂತ. ಹುಟ್ಟಕನೇ ನೀ ಮಣ್‌ತಿನ್ನಕ್ಕಾಗಿತ್. ಕಾಡ್ ಕೆಸಕೆ ಮಣ್ ಕೂಡಿಕೂ ಲಾಯಕಿಲ್ಲದಂವ" ಹಂಗೆ ಹಿಂಗೆಂತೆಲ್ಲಾ ಹೀನಾಮಾನ ಬಯ್ತಾ ಇತ್. ನನ್ನ ಹೆಣ್ ಬಾಗ್ಲ ಸಂದಿಂದ ನನ್ನ ನೋಡಿಕಂಡ್ ಒಳಗೆ ಬನ್ನೀಂತ ಕರೆತಿತ್. ನಂಗೆ ತಕುಪುಕು. ಹಂಗೆ ದಾಟಿ ಓಡಕನ ತಲೆಗೆ ಬುಟ್ಟರೆ?! ಹೊಟೆಲ್‌ಲಿ ಕುಡ್ದದ್ ತಿಂದದೆಲ್ಲ ಒಮ್ಮೆಗೇ ದಾಟಿದಂಗಾತ್. ಹಿಂಗೆಲ್ಲಾ ಹಾರಾಡ್ದ ಅಪ್ಪ ಕಾಂಕ್ರಿಸಿ ಅಂಗಳಕ್ಕೆ ಉಗ್ತ್. ಆ ಎತ್‌ನ ಕದ್ದವು ಉರಿ ಬಿಸ್‌ಲ್‌ಲಿ ಉರ್‍ದ್ ಸಾಯಲೀಂತ ಸಾಪ ಹಾಕಿತ್. ಪಾಷಾಣ ಮೂರ್ತಿ ಕೋಲ ಮಾಡ್ಸಿ ನೆಂತ ಹರ್ಕೆ ಹೊತ್ತತ್. ಊಟ ಮಾಡದೆ ಅಪ್ಪ ಮಲ್ಗಿತ್. ನಾ ಬಚಾವಾದೆ. ಅಪ್ಪ ಬೆಳಿಗ್ಗೆ ಏಳಿಕೆ ಮುಂದೇ ನಾ ಗದ್ದೆಗೆ ಹೋದೆ. ಎರಡ್ ದಿನ ಸರಿಯಾಗಿ ಅಪ್ಪನ ಮೊಕ ನೋಡ್ತ್‌ಲೆ. ಒಟ್ಟಿಗೆ ಬಂದ ಆಳ್ ಮೂರ್‌ದಿನ ಕಳ್ದ್ ಬಂದ್ ನನ್ನ ಕಾಲ್ ಮೇಲೆ ಬಿದ್ ತಪ್ಪಾತ್ ತಪ್ಪಾತ್‌ಂತ ದಮ್ಮಯ್ಯ ಗುಡ್ಡೆ ಹಾಕಿತ್. ನಿಂಗೂ ನಂಗೂ ಸಂಬಂಧನೇ ಇಲ್ಲೆ. ಇಂದೇ ನಿನ್ನ ಲೆಕ್ಕ ನೋಡಿ ಕಳ್ಸಿನೇಂತ ಅವಂಗೆ ಕೊಡಕಾದ ಒಂದಷ್ಟು ಸಂಬಳ ಕೊಟ್ ಕಳ್ಸಿದೆ.

ಇಷ್ಟೆಲ್ಲಾ ರಂಪ ಆದ ಮೇಲೆ ಕೊಟ್ಟಿಗೇಲಿದ್ದ ಇನ್ನೊಂದ್ ಹೋರಿನ ತಿದ್ದುದೇ ಸರೀಂತ ಗ್ಯಾನ ಮಾಡ್ದೆ. ಅದೋ ನನ್ನ ಕಾಂಬಕನ ಬುಸುಗುಟ್ಟಿ ನಿಲ್‌ತಿತ್. ಅದರ ಕಾಯಿ ಒಡ್ದಿತ್‌ಲೆ. ಒಳ್ಳ ದಿನ ನೋಡಿ ಕಾಯಿ ಒಡ್ಸಿದೆ. ಮೂಗು ದಾರ ಹಾಕಿದೆ. ಪತ್ತಲೊದಿ ದಿನ ಆರ ಕಟ್ಟಿದೆ. ಈ ಹೋರಿ ಸುತಾರಾಂ ಗದ್ದೇಲಿ ನಡೆಕಿಲೆ. ಹಡ್ಲ ತೆಗೆಕನ ಗದ್ದೆ ಸೊಲ್ಪ ಗಟ್ಟಿ. ಅದೇ ಗದ್ದೆಗೆ ಕಟ್ಟಿದೆ. ಈ ಹೋರಿ ಮಲ್ಕಂಡತ್. ಹಾಯ್ ಊಯ್‌ಂತೇಳ್ದೆ. ಬೆನ್ನಿಗೆ ಬಡ್ದೆ. ಆನೆಯಂಗೆ ಬಿದ್‌ಕಂಡತ್. ಅಂದ್ ಆಳ್ ತೋರ್ಸ್ಸಿತಲ್ಲ, ಬಾಲ ಬುಡಕ್ಕೆ ಬೆಂಕಿಕೊಡ್ದು, ಹಂಗೆ ಈಗ ಬಾಲ ಬುಡಕ್ಕೆ ಕಡ್ಡಿ ಗೀರಿ ಕೊಟ್ಟೆ. ಹೋರಿ ಲಬಕಂತ ಎದ್ ನಿತ್ ನಡೆಕೆ ಸುರು ಮಾಡ್ತ್. ಒಮ್ಮೆ ನೀರಿಗೆ ಊಡ್ತಾ ಇದ್ದೆ. ನೀರ್‌ಲೇ ಮಲ್ಗಿಬುಡ್ತ್!! ಈಗ ಎಂತ ಮಾಡ್ದು? ಆಗಾಗ ಬಾಲದ ಬುಡಕ್ಕೆ ಬೆಂಕಿ ಕೊಡ್ದು ಒಳ್ಳದಲ್ಲಾಂತ ಗ್ಯಾನ ಮಾಡಿ ಮೈಗೆ ನೀರ್ ಚೋಂಪಿದೆ. ಎದ್ದತ್‌ಲೆ, ಕೆಮಿಗೆ ನೀರ್

ಹೊಯ್ತ್ಸಿ. ತಲೆ ಆಡ್ಸಿ ಮಲ್ಗಿತ್. ಮೂಗುನ ಬಿಗಿಯಾಗಿ ಹಿಡ್ದೆ. ಉಸುರ್ ಕಟ್ಟಿಕನ ಜಳಬಳ ಮಾಡಿಕಂಡ್ ಎದ್ದವ್ತ್. ಅದೇ ಕಡೆ ಆತ್. ಅಲ್ಲಿಂದ ಮುಂದೆ ಆ ಎತ್ ಆ ರೀತಿ ಮಲ್ಗಿತ್‌ಲೆ. ಎಲ್ಲಾ ಜೋಡಿಗಳಿಗಿಂತ ನನ್ನ ಎತ್‌ಗ ಚುರುಕಾಗಿ ಕಾಲ್ ತೆಗೆತಿದ್ವೊ. "ಅಯ್ಯೋ.....ನಾ ಕುದ್ ಭಾಳ ಹೊತ್ತಾತ್. ನಿಂಗೇನೋ ಸುಮಾನ. ನಾ ಮಲ್ಗಿನೆಂತ" ಚಿನ್ನಯ್ಯಂಗೆ ಹೇಳಿ ಚಾಂಪ ಎದ್ ನಿತ್ತತ್. ದೊಣ್ಣೆ ಕುಟ್ಟಿಕಂಡ್ ಕುಟ್ಟಿಕಂಡ್ ಹೋಗಿ ಕಟ್‌ಲ್ಲಿ ಮಲ್ಗಿತ್.

ಚಾಂಪ ಹಿಂಗೆ ಮಲ್‌ಗುದುಕ್ಕೂ ಸೊಸೆ ಅಲ್ಲಿಗೆ ಬಂದ್ ಎತ್‌ದುಕೂ ಸಮಾ ಆತ್. "ಯಂತ ಮಾವಾ! ಬಂದವರೊಟ್ಟಿಗೆಲ್ಲಾ ಹೇಳ್ತರೇ ಹೇಳಿಕಂಡ್ ಇದ್ದರೆ ಬೇಜಾರ್ ಆದುಲೆನಾ? ನಾ ಐದ್ ವರ್ಷಂದ ಇದೇ ಕಥೆನ ಕೇಳಿ ಕೇಳಿ ಬೇಜಾರಾಗೋವುಟುತ" ವಟಗುಟ್ಟಿತ್. ಆಗ ಚಾಂಪ ಹೇಳ್ತ್ "ನಾ ನಿನ್ನಕ್ಕಲೆ ಹೇಳ್‌ತ್ತಲೆಲಾ? ಯಾರಾರ್ ಬಂದರೆ ಮಾತಾಡ್ದು ಬೇಡಾಂತ ಹೇಳಿಯಾಂತ" ಕೇಳ್ತ್. ಹಂಗೆ ನಾ ಹೇಳ್‌ತ್ಲೆ ಮಾವ, ನೀವ್‌ಗೆ ಈಗೀಗ ದಮ್ ಕಾಯ್ನುಲ, ಅದ್ಕೆ ಹೇಳ್ಡೆ. "ಓ ನನ್ನ ಸೊಸೆ ನಂಗೆ ಬಂದ ಹೊಸ ಕಾಯ್ಲುನ ಪತ್ತೆ ಮಾಡಿಬುಟ್‌ತ್ತ" ಚಾಂಪ ಮೆಲ್ಲ ಹೇಳಿಕಂಡ್ ಬಾಯೊಳಗೇ ನಗಾಡ್ತ್.

ಅಂದ್ ಇರ್‍ಳ್ ಚಾಂಪಂಗೆ ಸುತಾರಾಂ ನಿದ್ದೆ ಬಾತ್ಲೆ. ರಾಗ ಸುರು ಮಾಡ್ತ್. "ನಾಯೆಲ್ಲಾ ಬೆಳಿಗ್ಗೆ ಎದ್ ಸೀದ ಗದ್ದೆಕಡೆ ಹೋತಿದೆ. ಹೋಕನ ಮಾವುನ ಕಡ್ಡಿನೋ, ಅದಿಲ್ಲರೆ ಬೇವುನ ಕಡ್ಡಿನೋ, ಅದಿಲ್ಲರೆ ಕಾಚಿ ದಂಟ್‌ನೋ ತಕಂಡ್ ಅದರ್ಲೇ ಹಲ್ಲು ಉಜ್ಜಿಕಂಡ್ ಗದ್ದೆಲಿ ಮೊಕ ತೊಳ್ಕಂಡ್ ಬಾತಿದೆ. ಈಗನವು? ಹಲ್ಲಿಗೊಂದು ಬುರುಸ್, ನಾಲಿಗೊಂದು ಕಡ್ಡಿ, ಮೂರೊತ್ ಹಲ್ ಉಜ್ಜಿಕಂಡೇ. ಬಣ್ಣಬಣ್ಣದ ಪೇಸ್ಟ್‌ಗಡ. ಅದರ್ಲಿ ಹಲ್ಲುಜ್ಜಿರೆ ಸಾಯಮುಟ್ಟ ಹಲ್ ಉದುರ್‌ದೇಲೆಗಡ. ಇವು ಹಲ್ಲು ಉಜ್ಜಿದೋ ಕನ್ನಡಿ ಮುಂದೆ ನಿತ್‌ಕಂಡೊ. ಉಮ್ಮಿನ ಕರಿ ಮಾಡಿ ಉಪ್ಪು ಹಾಕಿ ಹೊಡಿ ಮಾಡಿ ಡಬ್ಬಿಕೆ ಹಾಕಿ ಇಸಿರೆ ಸಾಲ್ದಾ? ಇವುಕೆಲ್ಲಾ ಅಂಗಡಿಂದ ತಂದದೇ ಆಕು. ಸೊಸೆ ಒಬ್ಬು ಉಟ್ಟು. ಈಗಳೇ ಅವುಳ್ದು ಎದ್ರು ಎರ್‌ಡ್ ಹಲ್ ಇಲ್ಲೆ." ಹಂಗೇ ಪರಪರ ಹೇಳಿಕಂಡಿದ್ದ ಚಾಂಪಂಗೆ ಮಂಕ್ ಆದಂಗಾತ್. ಮೆಲ್ಲ ಮೆಲ್ಲ ಮಾತ್ ನಿತ್ತತ್. ಮಾತ್ ನಿತ್ತಂಗೆ ಬಾಯಿ ಬುಟ್‌ಕಂಡತ್. ನಿದ್ದೆ ಹತ್ತಿತ್. ಗಗ್ಗಗ್ಗರ್........ ಗಗ್ಗಗ್ಗರ್...... ಗಗ್ಗಗ್ಗರ್.......ತ ಗೊರಕೆ ಹೊಡೆಕೆ ಸುರ್ ಮಾಡ್ತ್.

ಹುತ್ರಿ ಹಬ್ಬದ ಸಮೆಲಿ ಒಮ್ಮೆ ಹಿಂಗಾತ್. ಹಬ್ಬಕ್ಕೆ ಒಂದು ವಾರಕ್ಕೆ ಮುಂದೆ ಮಜ ಪಿಟಾಕಿ ತಂದಿತ್. ಪಿಟಾಕಿ ಹೆಂಗುಟ್ಟು ನೋಣ್ನೊಂತೇಳಿ ಪಿಳ್ಳೆ ಒಂದ್ ಆನೆ ಪಿಟಾಕಿನ ತಕ್ಕಂಡ್ ಅಂಗಳಕೆ ಹೋತು. ಪಿಟಾಕಿಗೆ ಬೆಂಕಿ ಕೊಟ್ಟಿತ್. 'ಢಂ'ತ ಪಿಟಾಕಿ ಹೊಟ್ಟಿಕನ ಒಳಗೆ ದಡಬಡತ ಸದ್ದಾತ್. 'ಅಯ್ಯೋತ' ಬೊಬ್ಬೆ ಕೇಳ್ತ್. ಸೊಸೆ ಅಡ್ಗೆ ಮನೇಲಿದ್ದವಳು ಓಡಿ ಬಂದ್ ಸದ್ ಬಂದ ಕಡೆ ನುಗ್ಗಿತ್. ಪಿಟಾಕಿ ಸಿಡಿಯಕನ ಆ ಸದ್ದಿಗೆ ಹೆದ್ರಿ ಚಾಂಪ

ಕಟ್ಲ್ ಕೆಳಗೆ ಬಿದ್ದೋವುಟು. ಅಯ್ಯೋ ಒಮ್ಮೆ ನನ್ನ ಏಳ್ಸಿಯಪ್ಪಾತ ಬೊಬ್ಬೆ ಹಾಕಂಡ್ ಏಳಿಕೆ ಪೇಚಾಡ್ತ್. ಏಳಿಕೆ ಆಗ್ತಾ ಇಲ್ಲೆ. ಪೇಚಾಡ್ತ್. ಆಗ್ತಾ ಇಲ್ಲೆ. ಅಷ್ಟೊತ್ತಿಗೆ ಓಡಿ ಬಂದ ಸೊಸೆ ಮಾವನ ಏಳ್ಸಿ ಕೂರಿಸಿತ್. ರಟ್ಟೆ ಹಿಡ್ಡ್ ನಿಲ್ಸಿತ್. ಚಾಂಪಂಗೆ ಈಗ ಬಿದ್ದ ಬೇನೆಗಿಂತ ನಾಚ್ಗೆ ಆದಂಗಾಗಿ ಪಿಟಾಕಿ ಹೊಟ್‌ಸಿದ ಹೈದಂಗೆ ತಾರಾಮಾರ ಬೊಯ್ತ್. ಮನೆಯವ್‌ಕೆ ಒಂದ್ ಕಡೆಂದ ಬೇಜಾರಾತ್. ಇನ್ನೊಂದು ಕಡೆಂದ ಒಳಗೊಳಗೇ ನಗೆ. ಯಾರೇ ಆಗಲಿ ಮನೇಲಿ ಹಿರಿಯವು, ಕಾಯಿಲದವು ಮಲ್ಗಿರಕನ ಅವುಕೆ ಹೇಳದೆ ಪಿಟಾಕಿ ಸಿಡಿಸಿಕಾಗದ್. ಈ ಚಾಂಪ ಕಟ್ಲ್‌ಂದ ಬಿದ್ದರೂ ಏನಾತ್‌ಲೆ. ಎಲ್ಲೋ ಒಂದ್ ಕಡೆ ಒಂದ್ ಅಜ್ಜ ಇಂತ ಸದ್ದಿಗೆ ಬಿದ್ ಸತ್ತೇ ಹೋವುಟು ಗಡ.

ಇನ್ನೊಮ್ಮೆ ಚಾಂಪ ಊಟ ಮಾಡ್ತಾ ಇರ್‌ಕನ ಮಾಸ ದೊಂಡೆಲಿ ಸಿಕ್ಕಿಕಂಡತ್. 'ಗೊಳಕ್ ಗೊಳಕ್' ಮಾಡ್ತಾ ಉಟ್ಟು. ಹಾಳಾದ ಮಾಸ ಹೊರೆಗೂ ಬಾದುಲೆ, ಒಳಗೂ ಇಳಿಯಲೆ. ಕಣ್‌ಲಿ ಪೂರಾ ನೀರ್ ಬಂದೋತ್. ಸೊಸೆ, ಮಜ, ಪಿಳ್ಳಿಕ ಎಲ್ಲ ಏನ್ ಮಾಡ್ತು, ಎಂತ ಮಾಡ್ತುತ ಅತ್ತ ಇತ್ತ ನೋಡ್ತಾ ಒಳೊ. ಮಜ ಅಪ್ಪನ ಹಿಡ್ಕಂಡ್ ನಾಕೈದ್ ದಪ ಬೆನ್ನಿಗೆ ಮೆಲ್ಲ ಮೆಲ್ಲ ಗುದ್ದಿತ್. ಹಿಂಗೆ ಗುದ್ದ್‌ಕನ ಮಾಸ ತುಂಡು ಒಳಗೆ ಇಳ್ತ್. "ಉಷ್ ಅಬ್ಬಾ! ಹಾಳಾದ ಮಾಸ. ಹಲ್ ಇಲ್ಲರೆ ಸುಮ್ಮನೆ. ಇನ್ನೆಲ್ಲಾ ವಯಸ್ಸಾದವು ಬದ್ಕಿಕಾಗದ್" ಹಿಂಗೆ ಹೇಳಿಕಂಡ್ ಚಾಂಪ ಬಾಕಿ ಊಟ ಮಾಡ್ತ್.

ಚಾಂಪನ ಜೀರ್ಣಶಕ್ತಿ ಭಾಳಾ ಲಾಯ್ಕ ಇತ್. ಬೆಳಿಗೆ ಎದ್ದ ಕೂಡ್ಲೆ 'ಹೊರಗೆ' ಹೋದು ಮಾಮೂಲಿ. ಕೆಲವು ಬೆಳಿಗ್ಗೆದ್ ತಿಂದ್ ಕುಡ್ದೆಲ್ಲಾ ಆದ ಮೇಲೆ 'ಹೊರಗೆ' ಹೋದವೆ. ಚಾಂಪಂಗೆ ಅದೆಲ್ಲಾ ಹೇಸಿಗೆ. ಅದೇನಿದ್ದರೂ 'ಆ' ಕೆಲ್ಸ ಸುರುಗೇ ಆಕು. ಈ ಸಿಸ್ಟಮ್‌ಲಿದ್ದ ಚಾಂಪಾ..........

ಅದ್ ಆಟಿ ತಿಂಗಳ ಕಾಲ. ಜರೋತ ಜಿರಿಗುಟ್ಟಿಕಂಡ್ ಮಳೆ ಸುರೇತಿತ್. ಆಟಿ ಹದ್ನೆಂಟ್ ಕಳ್ದಿರೋಕು. ಆಟಿ ಪಾಯ್ಸ ಮಾಡೊಳೊ. ಪತ್ರೊಡೆ ತಿಂದೊಳೊ. ಇದೆಲ್ಲಾ ಆದ ಮೇಲೆ ಆಟಿ ಕೋಳಿನೂ ತಿಂದೊಳೊ. ಯಾಕೋ ಏನೋ ಚಾಂಪಂಗೆ ಸಧ್ಯ ಬೊತ್ತದೆ. ಬೊತ್ತದೆಂತೇಳಿರೆ ಎದ್ದೇಳಿಕೇ ಬತ್. ಜರ, ಒಳ್ಳ ಜರ. ಬೆಂಕಿ ಜರ. ಹಸ್ನ ಬೀಜ ಎದೆ ಮೇಲೆ ಇಸಿರೆ ಡಬ್‌ಂತ ಸಿಡೆದೇನೊ. ಅಂತಾ ಜರ. ಜರ ತಲೆಗೆ ಹತ್ತಿಬುಟ್ಟುಟು. "ಪುಣೆಕಡ್ತ್‌ಲೆ. ಬೀಜ ಹಾಕಿತ್‌ಲೆ. ಅರ, ಅರ, ಈ ಈ........ಅರರಾ.........ಚೋಮಣ, ಈ ಈ ಕರಿಯಾ.....ಆವ್ ಆವ್......." ಹಿಂಗೆ ಏನೇನೋ ಮಾತ್. ಎಂತೆಂತದೋ ಮಾತ್. ಕೆಲವು ಮಾತ್ ಅರ್ಥ ಆದೆ. ಮತ್ತೆ ಕೆಲವು ಏನೂ ಗೊತ್ತಾದುಲೆ. ಬಾಯೊಳಗೇ ಗೊಣಗೊಣಾಂತ ಹೇಳ್ತಾ ಇತ್. ಹಿಂಗೆ ಕಾದ ಜರ ಮರು ದಿನ ಹಳ್ಳ ಕಮ್ಮಿ ಆದಂಗಾತ್. ಆದರೆ ಚಾಂಪ ಹಾಸಿಗೆಂದ ಎದ್ದತ್‌ಲೆ. ಮಾತ್ ಮೆಲ್ಲ ಮೆಲ್ಲ ಆಗಿ ಕಡೆಗೆ ಮಾತೇ ಇಲ್ಲೆ!! ಮನೆಯವೆಲ್ಲಾ 'ಅಯ್ಯೋ ಶಿವ್ನೆಂತ' ಬೊಬ್ಬೆ ಹಾಕಿದೊ. ಒಬ್ಬ ಹೈದನ ಕೆಳಗೆ ಮನೆಗೆ ಓಡ್ಸಿದೊ. ಅವು ಬಂದೊ, ಇವು ಬಂದೊ. ಬಂದವೆಲ್ಲಾ 'ಅಯ್ಯೋ ಚಾಂಪಾ

ಕಡೇ ಮಾತಾಡಿ ಚಾಂಪಾ'ಂತ ಮಾತಾಡ್ಸಿದೊ. ತಟ್ಟಿರಲ್ಲಾ ಮುಟ್ಟಿರಲ್ಲಾ ಚಾಂಪ ಹರಾಶಿವಾಂತೇಳ್ತ್ಲೆ.

ಕೂಡ್ಲೆ ಕಾಯಿ ಒಡ್ಡೊ. ಇದ್ದದ್ ಅದೊಂದೇ ಕಾಯಿ. ಅದ್ ಕೊಬ್ಬರಿ ಆಗೋವುಟು. ಕಾಯಿ ನೀರಿಗೆ ಎಂತ ಮಾಡ್ದು? ಹಾಲಾದ್ರೂ ಉಟ್ಟಾ? ಅದೂ ಇಲ್ಲೆ. ಛೇ, ಹಿಂಗಾಗಿಬುಡ್ತಲೆತ ಮನೆಯವು ಮಂಡೆಬೆಚ್ಚ ಮಾಡಿಕಂಡೊ. ಹಿಂಗಿರಕನ ಒಬ್ಬು ಮೆಲ್ಲ ಹೇಳ್ತ್ ಕಂಚ್‌ನ ಬಟ್ಲ್‌ಗೆ ತಣ್ಣೀರ್ ಹಾಕಿ, ತೊಳ್ಸಿ ಕೊಡಿನ ಇಸಿರೆ ಸಾಕಪ್ಪಾ. ಬಂದವೇನ್ ಅದ್ ಕಾಯಿ ನೀರ್‌ತ ಕುಡ್ದು ನೋಡಿವೆನಾ? ಅಥ್ವಾ ಚಾಂಪನೇ ಈ ನೀರ್ ಚಪ್ಪೆತ ಹೇಳ್ದೆನಾ? ನೀವ್ ಸುಮ್ಮನೆ ನೀರ್ ಹೊಯ್ಯೆನಿತ ಹೇಳ್ತ್. ಮನೆಯವು ಹಂಗೇ ಮಾಡ್ದೊ.

ಹಿಂಗಿರಕನ ಹಿರಿಯಂವೊಬ್ಬ, ಒಳಗೆ ನುಗ್ಗಿತ್. ಎಲ್ಲಿ ಎಲ್ಲಿ ದಾರಿ ಬುಡಿ. ಛೇ ಛೇ ಎಂಥಾ ಕೆಲ್ಸ ಆಗೋತು? ಹೆಣನ ಕಟ್ಲ್‌ಲೇ ಬುಟ್ಟೊಳರಿಯಲ್ಲಾ, ನೀವಿಗೆ ಬುದ್ಧಿ ಉಟ್ಟಾ? ಬನ್ನಿ, ಆಚೆ ಹಿಡೇನಿ, ಈಚೆ ಹಿಡೇನಿ. ಚಾಪೆಲಿ ಮಲ್‌ಗ್‌ಸೊನೊಂತೇಳಿ ಎತ್ತಿ ಕೆಳಗೆ ಮಲ್ಗಿಸಿದೊ. ಅಯ್ಯಯ್ಯೋ ಮಾಡ್ ತೂತ ಮಾಡ್ತ್‌ಲೆನಾ? ಜೀವ ಹೋದು ಎಲ್ಲಿಂದ? ಮಾಡ್ ತೂತ ಮಾಡಿತ ಹೇಳ್ತ್. ಓಹೋ ಇದ್ ಹಂಚಿ ಮನೆ. ಹಂಚಿನಾರ್ ತೆಗೆನಿ. ಓಹೋ ಇದ್ ಮಚ್‌ಪಾರ್ ಹಾಕಿದ ಮನೆ. ಈ ಮಚ್‌ಪಾರ್ ಮನೇಲಿ, ಆರ್‌ಸಿಸಿ ಮನೆಗಳ್‌ಲಿ ಜೀವ ಹೋಕೆ ಜಾಗನೇ ಇರ್ದುಲೆ. ಹೋಗಲಿ ಆ ಕಿಡಿಕೆನಾರ್ ತೆಗೆನಿತ ಬೊಬ್ಬೆ ಹಾಕಿತ್. ಹಿಂಗಿರಕನ ಆಚೆ ಮನೆ ಬೋಜಿ ಒಳಗೆ ನುಗ್ಗಿದ ಕೂಡ್ಲೆ "ಅಯ್ಯಯ್ಯೋ ಚಾಂಪಾ ಆಟಿ ತಿಂಗಲಿ ಹೋಬುಟ್ರೀ.........ಸ್ವರ್ಗದ ಬಾಗ್ಲ್ ಹಾಕಿಬುಟ್ಟಿದ್ದದೆ. ಇಷ್ಟ್ ವರ್ಷ ಇದ್ದ ಚಾಂಪಂಗೆ ಇನ್ನೊಂದ್ ವಾರ ಇರಿಕೆ ಬೊತ್ತಾತಾ......... ಚಾಂಪಾ"ತ ಹೇಳಿಕಂಡ್ ದುಃಖಪಡ್ತಾ ಇರಕನ, ಬಾಕಿದ್ದವುಕೂ ಅಳಿಗೆಲ್ ತಡೆಕೆ ಬೊತ್ತದೆ ಅವೂ ಒಟ್ಟಿಗೆ ಮರ್ಟ್ಲೋ. ಹಿಂಗೆ ಮರ್ಡಕನ ಬೋಜಿನ ಗಂಡ ಬೋಜಿಗೆ ಸಮಾ ಬೊಯ್ತ್. "ಏ ನಿಂಗೆ ಸೊಯಾ ಉಟ್ನೆ. ಆಟಿ ತಿಂಗಾದರೇನ್ ಕಾರ್ತಿಂಗಾದರೇನ್ ಹುಟ್ಟಕನ ಮಾತ್ರ ಯಾವ ತಿಂಗಾದರೂ ಆಕ್ ಗಡಾ. ಸಾಯಕನ ಮಾತ್ರ ಆ ತಿಂಗ ಬತ್‌ಗಡ, ಈದಿನ ಬತ್‌ಗಡ. ಸ್ವರ್ಗದ ಬಾಗ್ಲ್ ಹಾಕ್‌ಬುಟ್ಟೊಳ ಗಡಾ. ನೀನೇನಾರ್ ಬಾಗ್ಲ್ ಹಾಕುದು, ಬಾಗ್ಲ್ ತೆಗೆದು ನೋಡೊಳಾ? ಸಾಯವರ ಸುಖಾಲಿ ಯಾಯೆಕೂ ಬುಡ್ದ್‌ಲೆ. ನಾವ್ ಇನ್ ಯಾಗ ತಿಳ್ಕಂಬದೋ ಏನೊ"ತ ಹೆಣ್‌ಗೆ ಬೊಯ್ತ್. ಆಗ ಅವುಳು ಕೊಸ್ಕ ಕೊಸ್ಕಿತ್ ಮರ್ಟ್‌ಕಂಡ್ ಸುಮ್ಮನಾತ್.

ಆ ಮನೆಲಿ ಕೋವಿ ಉಟ್ಟಾ? ಇಲ್ಲೆ. ಯಾವ್ದೊ ಮನೆಗೆ ಓಡ್ದೊ. ಅಲ್ಲಿ ಎರಡ್ ಕೋವಿ ಇತ್. ಆದರೆ ಅವರ ತೋಟಾ ಕೋವಿ ಸ್ಟೇಷನ್‌ಲಿ ಕುದ್ದುಟು. ಇನ್ನೊಂದ್ ಜೋಡು ಕೊಳ ಕೇಪುನ ಕೋವಿ ಉಟ್ಟು. ಅದರ ತಂದೊ. ಹೆಂಗೂ ಅದ್ ತುಂಬಿಕಂಡಿತ್.

ಮೂಡನ ದಿಕ್‌ಗೆ ಒಂದ್ ಗುಂಡ್ ಹೊಡ್ದೊ. ಇನ್ನೊಂದ್ ಹೊಡೆಕನ ಚಟ್ ಸುರ್‌ಸುರ್ ಡಮ್‌ತ ಸಿಡ್ತ್. ಹಂಗೆ ಸಿಡೆದುಕ್ಕೊ ಹೊಡ್ದಂವ ಅಯ್ಯವೋಂತೇಳ್ವುಕು ಸರಿಯಾತ್. ಯಾಕೆಂತೇಳಿರೆ ಕೇಪು ಬುಡಂದ ಮದ್ ರಟ್ಟಿರೆ ಇಂವನ ಕಣ್‌ಗೆ. ಕೋವಿನ ಅತ್ತ ಹಾಕಿ ಇಂವ ಇತ್ತ ಕುದ್ದತ್. ಶಾಸ್ತ್ರಕೆ ಎರಡ್ ಗುಂಡು ಹೊಡ್ದಲ್ಲಾ, ಅಷ್ಟೇ ಸಾಕ್‌ತ ಜನ ಸಮಧಾನ ಹೇಳ್ದೊ. ಊರಿಡೀ ಸುದ್ದಿಯಂತೂ ಗೊತ್ತಾತ್. ವಾದ್ಯದವರ ಕರ್ಕಂಡ್ ಬಂದೊ. ಅವು 'ದಡ್‌ಬಡ್ ಬಡ್ಕ್'ತ ಬಡ್ಕಂಡ್ ಕುದ್ದೊ.

ದಫನ ಮಾಡ್ವ ಮಾಮೂಲಿ ಚೂಟ್ ಕಳಕೆ ಹೋದೊ. ಸೌದೆ ಮಾಡ್ದೊ. "ಅಲ್ಲಾ, ಈ ಚೂಟ್ ಕಳ ದಾರಿ ಕರೇಲಿ ಆಗೋತಲ್ಲಾ? ಅಯ್ಯೋ ಬುಡಿಯಪ್ಪಾ, ವಯಸ್ ಆದವ್ ಸತ್ತರೆ ಯಾವ ಉಗ್ರ ಇರ್ದುಲೆ. ಎಡೆಯಂತರಲಿ ಸತ್ತರೆ ಮಾತ್ರ ಉಗ್ರ. ಅಲ್ಲ ಭಾವಾ, ಶುದ್ಧ ಮೂರಕ್ಕೆ ಮಾಡಿಬುಡ್ನೊ. ತಿಥಿ ಆಟಿ ತಿಂಗ ಕಳ್ಕಣಲಿ. ಹಂದಿಗೆಂತ ಮಾಡ್ವು? ಆ ಮೋಟಯ್ಯನ ಹಂದಿ ಉಟ್ಟು. ಅದೊಂದು ಹತ್‌ಅರವತ್ ಕೇಜಿ ಆದುಕಂಡದೆ. ಅಷ್ಟ್ ದೊಡ್ಡದ್ ಯಾಕೆ? ಹತ್ ನಲ್ವತ್ ಸಾಲ್ದಾ? ಸಾಕಪ್ಪಾ. ಮಾತ್ರ ಬೇಗ ಮಾತಾಡೊಕು. ಇಲ್ಲರೆ ಕೈಲ್‌ಪೋದಿಗೆ 'ಪಟ್ಟಿ' ಆಬುಟ್ರೆ ನಾವಿಗೆ ಸಿಕ್ಕಿಕಿಲೆ. ನೀವ್ ಏನ್ ಹೇಳ್ರೆ ಸಣ್ಣಪಾ"ಂತ ಮಾತಾಡಿಕಂಡೊ.

ಸೂರ್ಯ ಪಡುದಿಕ್ಕಿಗೆ ಇಳೆಕಾಕನ ಚಾಂಪನ ಮನೆಂದ ಅಂಗಳಕೆ ಇಳ್ಸಿದೊ. ಅಲ್ಲಿಂದ ಹೊತ್ ಚೂಟ್‌ಕಳಕೆ ನಡ್ದೊ. ಮಳೆ ಮಾತ್ರ ಲಂಗು ಲಗಾಮಿಲ್ಲದೆ ಲಗಾಯಿಸ್ತ ಇತ್. ಆ ಮಳೆ ಸದ್‌ನೊಟ್ಟಿಗೆ ಚಾಂಪನ ಸದ್ದೂ ಅಡಂಗಿತ್. ಸೂರ್ಯ ಪೂರ್ತಿ ಅಡಂಗಕನ ಇತ್ತ ಮನೆಲಿ ದೀಪ ಮಂಕಾಗಿ ಗಾಳಿಗೆ ಅತ್ತ ಇತ್ತ ಅಲ್ಲಾಡಿಕಂಡ್ ಹೊತ್ ತಾ ಇತ್. ಚಾಂಪ ಇಲ್ಲದ ಮನೆಲಿ ಈಗ ಚಾಂಪನ ಗ್ಯಾನ ಮಾತ್ರ ಬಾಕಿ.



# 22. ಕಾಮುಣಿ ಗೂಡೆದ್ ಕಂಬುಳಿ ಹರ್ರ್ದೋತ್ ಗಡ!

**ಕಾ**ಮುಣಿ ಗೂಡೆ ಕಾಲ್‌ಲೂ, ಕೈಲೂ ಉಗುರು ಬುಡಿಕೆ ಶುರ್‌ಮಾಡ್ತ್. ಯಾಗ ಅವ್ವು ಉಗುರು ಬುಡಿಕೆ ಶುರು ಮಾಡ್ತ್ಲೋ ಕೆಲ್ಸ ಹಜ ಕಮ್ಮಿ ಮಾಡ್ತ್. ಕಾಫಿ ಪಾತ್ರ ಬೆಳ್ಗವ್ವಾಂತ ಅವ್ವ ಹೇಳ್ರೆ ಕಾಮುಣಿನ ಮುಸುಂಡು ಆ ಪಾತ್ರಕ್ಕಿಂತ ದೊಡ್ಡದಾಗಿ ಊದಿಕಂಬಕೆ ಶುರಾತ್. ಹಟ್ಟಿ ಬಾಚ್‌ಕನ, ಹಂದಿ ಗೂಡ್ ಕಡೆ, ಕೋಳಿ ಗೂಡ್ ಕಡೆ ಹೋದರಂತೂ ಸಂಕಟ ಪಟ್ಕಂಡ್ ಕೆಲ್ಸ ಮಾಡ್ತಿತ್. ಒಂದೊಂದ್ ಕೆಲ್ಸ ಮಾಡ್ವು, ಎಷ್ಟೋ ಹೊತ್ ಮುಟ್ಟ ಉಗುರುಂದ ಜಿಡ್ ತೆಗ್ಯೆದು. ಮೆಣ್ಸ್ ಕಡೆಕನಂತೂ ಹಿಡಿಕಡಿ ಕಡೇಕೆ ಶುರ್ ಮಾಡ್ತ್. ನುಣ್ಣಂಗೆ ಕಡಿನೆ ಕೂಡಿಕಂಡ್ ಕಡಿಂತ ಅವ್ವ ಹೇಳ್ರೆ ಇವ್ವು ಗೋಣಗೋಣಾಂತ ಹೇಳಿಕಂಡ್ ಕಡೇತಿತ್. ಎಲ್ಲಿ ಉಗುರು ಸಮ್ಮದೆಯೋಂತ ಇವ್ವು ಎಚ್ಚರ ಮಾಡಿಕಂಬದು. ಇವ್ವು ಯಾಕೆ ಹಿಂಗೆ ಮಾಡ್ತೇಂತ ಅವ್ವಂಗೆ ಗೊತ್ಲೆ.

ಒಂದಿನ ಇವ್ವು ಮೀನ್ ಹೊರ್ಸ್ ಮಡ್ಗಿತ್. ಆ ಸನಿ ಹಿಡ್ದ ಕೊತ್ತಿ ಒಂದ್ ತುಂಡ್‌ನ ಕಚ್ಚಿಕಂಡ್ ಓಡ್ತ್. ಕಾಮುಣಿ ಆ ಕೊತ್ತಿನ ಓಡ್ಸಿಕಂಡ್ ಹೋತ್. ಹಿಂಗೆ ಓಡ್‌ಕನ ಇವ್ವು ಕಾಲ್ ತೊಡ್ಸಿ (ಕಾಲಿಗೆ ಕಾಲ್ ತಾಂಗಿ) ಬೀತ್. ಬಲಕಾಲ್ ಉಗುರು ಎಡಕಾಲಿಗೆ ತಾಂಗಿ ಗಾಯಾತ್. ಗಾಯ ಸಣ್ಣದಾಗಿದ್ದರೂ ಉರಿ ಜಾಸ್ತಿ ಆತ್. ರಕ್ತ ಸೋರ್ತ್. ಈ ಗಾಯ ಒಂದೆರ್‌ಡ್ ದಿನಾಕನ ಜೋರ್ ಜೋರೇ ಆತ್. ಗಾಯಕ್ಕೆ ಅದಾಕಿತ್, ಇದಾಕಿತ್. ಯಾವ್ದಾಕಿರೂ ಗಾಯ ಗುಣ ಆತ್ಲೆ. ಅವ್ವು ಹೊದೇತಿದ್ದ ಬೆಡ್‌ಶೀಟ್, ಕಂಬ್ಳಿಯೆಲ್ಲಾ ಕಾಲ್ ಉಗುರು ತಾಂಗಿ ತಾಂಗಿ ಇಷ್ಟ್ ಇಷ್ಟೇ ಹರೆಕೆ ಶುರಾತ್. ಹಿಂಗೆಲ್ಲಾದರೂ ಉಗುರುನ ಮಾತ್ರ ತೆಗೆಕೆ ಮನ್ಸಾತ್ಲೆ.

ಅದೆಲ್ಲ ಇರ್ಲಿ. ಇವ್ವ ಗಾಯದ ಕಥೆ ಕೇಳಿ: ಬೆಳೆ ಕೆಲ್ಸ ಬೇರೆ. ಕೂಳೆ ಗುತ್ತಿ ತಾಂಗಿಯೆಲ್ಲಾ ಆಕನ ಗಾಯ ಪೂರ ರೇಸಿ ಕಟ್ಟಿಕಂಡ್ ಕಾಮುಣಿಗೆ ಕುದ್ದರೂ ಒಂಥರ, ನಿತ್ತರೂ ಒಂಥರ, ಏನೋ ಒಂದ್ ರೀತಿ ಕಸಿವಿಸಿ. ಸಿಡ್ತಾಂತೇಳಿರೆ ಸಿಡ್ತ. ಇನ್ ಹಿಂಗೇ ಇದ್ದರೆ ಆಕಿಲೇಂತ ಗ್ಯಾನ ಮಾಡ್ದ ಕಾಮುಣಿ ಸೀದ ಆಸ್ಪತ್ರೆಗೆ ಹೋತು. ಅಲ್ಲಿ ಡಾಕ್ಟ್ರ 'ಗಾಯ ಹೇಗಾಯ್ತು? ಎಷ್ಟ್ ದಿನಾಯ್ತ್'ಂತೆಲ್ಲಾ ಪ್ರಶ್ನೆ ಮಾಡ್ತ್. ಸೌದೆಕೊಳ್ಳಿ ತಗುಲಿದ್ದು ಸಾರ್. ನಾಕೈದು ದಿನ ಆಯ್ತು ಸಾರ್‌ಂತ ಇವ್ವು ಹೇಳಕನ 'ಏ! ಈ ಗಾಯಾಗಿ ತಿಂಗ್ಳೇ ಕಳ್ದಂಗಿದೆ. ನಿನ್ನ ಕಾಲಿನ ಉಗುರು ತಗಲಿದ್ದಲ್ಲಾ?' ಹಿಂಗೆ ಡಾಕ್ಟ್ರ ಕೇಳ್‌ಕನ ಕಾಮುಣಿಗೆ ಎಲ್ಲಾ ಬಂದಂಗಾಗಿ ಈ ಡಾಕ್ಟ್ರಗೆ ಯಾರೋ ಚುಚ್ಚಿಕೊಟ್ಟೋಳೊ ಕಂಡದೆ. ಇಲ್ಲರೆ ಅದೆಂಗೆ ಗೊತ್ತಾಕೆ ಸಾಧ್ಯ? ಇನ್ ಸುಳ್ ಹೇಳಿರೆ ಆಕಿಲೆಂತ ಗ್ಯಾನ ಮಾಡ್ದ ಕಾಮುಣಿ ನಡ್ದ ಕಥೆನ ವಿವರಾಗಿ ಹೇಳ್ತ್. ಆಗ ಡಾಕ್ಟ್ರ ಹೇಳ್ತ್: 'ಉಗುರು ಮತ್ತು ಹಲ್ಲಿನಿಂದಾದ ಗಾಯ ವಿಷದಷ್ಟ್ ಅಪಾಯದ್ದು. ನೀನು ಇವತ್ತೇ ಈ ಕೈ ಉಗುರು, ಕಾಲಿನ ಉಗುರು ಕತ್ತರಿಸು.

ಇಂಜೆಕ್ಷನ್ ಬರ್‍ಸ್ಟಿದ್ದೇನೆ.ಈ ಮಾತ್ರೆನ ಮೂರೊತ್ತು ತಕ್ಕೋ. ಮೂರು ದಿನ ಬಿಟ್ಟು ಬಾಂತ' ಹೇಳ್ತ್.

ಮದ್ದೆಲ್ಲಾ ತಕಂಡ ಕಾಮುಣಿ ಗೂಡೆ ಮನೆಗೆ ಬಂದ್ ಕಣ್ಣೀರ್ ಹಾಕಂಡ್ ಉಗುರುನ ತೆಗ್ತ್. ಮೂರ್ ದಿನ ಬುಟ್ಟ್ ಪುನಾ ಆಸ್ಪತ್ರೆಗೆ ಹೋತು. ಗಾಯ ಹಜ ಬಾಡಿಕಂಡ್ ಬಾತ್. ಪೂರ ಗುಣಾತ್ಲೆ. ಪುನಾ ಹೋತು. ಹಿಂಗೇ ನಾಕೈದ್ ದಪ ಆಸ್ಪತ್ರೆಗೂ ಮನೆಗೂ ಗಾಳಿ ಬೀಸಿ ಆಕನ ಗಾಯ ಗುಣಾತ್.

ಸಾಕಪ್ಪಾ ಈ ಉಗುರು ಸಾಸ. ಇನ್ ಮುಂದೆ ನಾ ಉಗುರು ಬುಡಿಕಿಲೆಂತ ಅಂದೇ ತೀರ್ಮಾನ ಮಾಡ್ತ್. ಅಂದ್‌ನ ಆ ಕಾಮುಣಿ ಗೂಡೆ ಇಂದ್ ಮೂರ್ ಮಕ್ಕಳ ಅಯ್ಯೆ. ಈಗ ತನ್ನ ಮಕ್ಕಳ ಬೆನ್ನಿಗೆ ಗುದ್ದಿ ಉಗುರು ತೆಗ್ಸಿ ಮಕ್ಕಳ ಪೊರ್ಲಾಗಿ ನೋಡಿಕಣ್‌ತಾ ಉಟ್ಟು. ಯಾರಾರ್ ಉಗುರು ಬುಟ್ಟವ್ ಮನಿ ಕಾಮುಣಿ ಮುಂದೆ ದಾಟಿರೆ ಅವರ್‍ನ ನಿಲ್ಸಿಕಂಡ್ ನಾಕ್ ಬುದ್ಧಿಮಾತ್ ಹೇಳಿ ಕಳ್ಸಿದೆ.

ನಿಮ್ಮ ಮಕ್ಕಳ ಕೈಕಾಲ್ ಒಮ್ಮೆ ನೋಡಿ!! ಉಗುರು ಉಟ್ಟಾ? ಬಲಕೈಲೂ ಬುಟ್ಟೊಳನಾ? ಬಳೆ ಉಟ್ಟಾ? ಹಿಂಗೆಲ್ಲಾ ಕಾಮುಣಿ ಕೇಳುವ ಪ್ರಶ್ನೆಗೆ ಸರಿಯಾದ ಉತ್ತರ ಕೊಡಿ. ಸುಮ್ಮಂಗಾರ್ ಅವ್ಳಂದ ಬಯ್ಸಿಕಂಬಡಿ.

---

# 23. ಹ್ಲೂಂವೇ

**ಮುಂಗಾರಿಗೆ** ಮುಂದೇ ಒಂದು ಜೊತೆ ಕೋಣಗಳ ಹಟ್ಟಿಲಿ ಕಟ್ಟೊಕುತ ನಮ್ಮ ಚಾಮಿ ಹೈದಂಗೆ ಗ್ಯಾನ ಆತ್. ಗೊರ್ಜಿ ಗದ್ದೆಗೆ ಕೋಣಗಳೇ ಬೆಸ್ಟ್! ಕಾಲ್ ಊಣೆರೂ ಕಾಲ್ ಎಳ್ಕಂಡವೆ. ಮಳೆಗಿಳೆಲ್ಲ ಅವುಕೆ ಯಾವ ಲೆಕ್ಕ? ಆದರೆ ಭಾಗಮಂಡ್ಲದ ಕೋಟಕ್ಕೆ ಕೋಣಗ ಆದವೆನಾ? ಆಗದೆ ಏನ್. ನೋಡೇ ಬುಡ್ನೊಂತೇಳಿ ಚಾಮಿ ಎರಡ್ ಚೂಡಿ ಹಗ್ಗನ ಜೊತೆ ಮಾಡಿಕಂಡ್ ಆರ್ ಸಾವ್ರ ರುಪಾಯಿನ ಜೋಬಿಗೆ ಇಳ್ಸಿಕಂಡ್ತ್. ಸಿನೇತ ಬೋಜ ಹೈದನ್ನೂ ಕರ್‍ಕಂಡತ್.

ಚಾಮಿಗೆ ಗಣೇಶ ಬೀಡಿ ಚಟ. ಬೋಜಂಗೆ ಎಸ್. ಎ. ಬೀಡಿ ಚಟ. ಒಂದೇ ಬೆಂಕಿಕಡ್ಡಿಂದ ಇಬ್ಬರೂ ಬೀಡಿ ಹೋಸಿದೊ. ಪುಸು ಪುಸು ಹೊಗೆ ಬುಟ್ಟಾಕನ ಆನೆಕಲ್ ಬಸ್ ಬಾತ್. ಇಬ್ಬರೂ ಆ ಬಸ್ ಹತ್ತಿ ಕುಶಾಲನಗರಲಿ ಇಳ್ಕಂಡೊ.

ಟೌನ್‌ಗೆ ಹೋದ ಕೂಡ್ಲೆ ಅಲ್ಲಿ ಬಿದ್ದ ಎರಡ್ ಸಿಗರೇಟ್ ಪ್ಯಾಕೆಟ್ ಎತ್ತಿಕಂಡೊ. ಬೀಡಿನೆಲ್ಲಾ ಸಿಗರೇಟ್ ಪ್ಯಾಕೆಟ್ ಒಳಗೆ ಹಾಕಂಡೊ. ಗೂಡಂಗಡಿಂದ ಒಂದೊಂದು

ಸಿಗರೇಟ್ ತಕ್ಕಂಡ್ ಟೌನ್‌ಲಿ ಸೇದಿದೊ. ಅದೋ ಪೂರಾ ಸೇದಿತ್‌ಲೆ. ಅರ್ಧ ಸೇದಿದೊ. ಮತ್ತೆ ಕೆಡ್ಸಿ ಸಿಗರೇಟ್ ಪ್ಯಾಕೆಟ್ ಒಳಗೆ ಹಾಕಿದೊ. ಇಬ್ಬರೂ ಮೊಕ ನೋಡಿಕಂಡ್ ನಗಾಡ್ರೊ. ಅಷ್ಟೊತ್ತಿಗೆ ಕೊಣ್ಣೂರಿಗೆ ಹೋಗುವ ಸೆಟ್ಲ್ ಬಸ್ ಬಾತ್. ಹತ್ತಿ ಕುದ್ಕಂಡೊ. ಆ ಬಸ್‌ಲಿ ಬರೀ ಮೂಡಿಸಿಮೆಯವೇ ಇದ್ದದ್. ಕಂಡಕ್ಟರ್ ಡ್ರೈವರ್‌ನ ಬುಟ್ಟರೆ ಪ್ಯಾಂಟ್ ಬೂಟವು ಇವಿಬ್ಬರೇ. ಎಲ್ಲವೂ ಇವರ್‍ನೇ ನೋಡ್ತಿದ್ರೊ. ಅಷ್ಟೊತ್ತಿಗೆ ಬೋಜ ಪ್ಯಾಂಟ್ ಜೋಬುಲಿದ್ದ ಸಿಗರೇಟ್ ಪ್ಯಾಕ್‌ನ ತೆಗ್ದ್ ಎದೆ ಜೋಬಿಗೆ ಹಾಕಿತ್. ಆಗ ಜನ ನೋಡ್ರೊ. ಅಷ್ಟೊತ್ತಿಗೆ ಚಾಮಿನೂ ಹಂಗೇ ಮಾಡ್ತ್. ಪ್ಯಾಕ್ ಒಳಗಿದ್ದದ್ ಗಣೇಶ, ಎಸ್.ಎ. ಬೀಡಿಂತ ಆ ಮೂಡಿಸಿಮೆಯವುಕೆ ಗೊತ್ತಾತ್ಲೆ. ಸರಿ, ಬಸ್ ಕೊಣ್ಣೂರ್‌ಗೆ ಎತ್ತಿತ್. ಹಗ್ಗದ ಬ್ಯಾಗ್ ಸಮೇತ ಇಬ್ಬರೂ ಕೆಳಗಿಳ್ದೊ.

ಮಧ್ಯಾಹ್ನದ ಊಟ ಆಗಿತ್ಲೆ. ಸುತ್ತಮುತ್ತ ನೋಡಕನ "ಮಿಲ್ಟ್ರಿ ಹೊಟೆಲ್" ಕಂಡತ್. ನುಗ್ಗಿದೊ. "ಚಿಕನ್ ಬಿರಿಯಾನಿ, ಮಟನ್ ಬಿರಿಯಾನಿ, ಫ್ರೈಡ್ ರೈಸ್, ವೈಟ್‌ರೈಸ್, ರಾಗಿಮುದ್ದೆ, ಚಿಕನ್ ಕಬಾಬ್, ಚಿಲ್ಲಿ ಚಿಕನ್, ಮಟನ್‌ಕರಿ, ತಲೆಕರಿ, ಲಿವರ್ ಫ್ರೈ, ಪಿಷ್ ಫ್ರೈ ಅಂಡ್ ಕರಿ..... ಸೀಗಡಿ ಸ್ಪೆಷಲ್....." ಚಾಮಿ- ಬೋಜಂಗೆ ಯಾವ್ದ ತಕಂಬೊಕು, ಯಾವ್ದ ಬುಡೊಕುಂತ ಗೊತ್ತಾಗದೆ ಮೊಕ ನೋಡಿಕಂಡೊ. ಬೆಳಿಗ್ಗೆ ಕೊಸ್ಲಕ್ಕಿ ಗಂಜಿನೂ ಉಪ್ಪಿನಕಾಯಿನೂ ಉಂಡ್ ಹೊರ್‍ಟವುಕೆ ಈಗ ಕೆಳಗೆ ಮೇಲೆ ನೋಡಂಗಾತ್. ಸಪ್ಲೈಯರ್ ಹೇಳ್ದ ಒಂದೂ ತಲೆ ಒಳಗೆ ನಿತ್ತತ್‌ಲೆ. ಚಾಮಿ ಧೈರ್ಯ ಮಾಡಿ "ವೈಟ್‌ರೈಸ್ ಮತ್ತೆ ಬೈಟೂ ಸೀಗಡಿ ಸ್ಪೆಷಲ್‌ಂತ" ಆರ್ಡರ್ ಮಾಡ್ತ್. ಸಪ್ಲೈರ್ ಸಪ್ಲೈ ಮಾಡಿಕಂಡ್ ಇವರ ಪರಿಚಯ ಮಾಡಿಕಂಡತ್. "ನೀವು ಬಂದ ಕಾರ್ಯವೇನುಂತ" ಕೇಳ್ತ್. ಹ್ಞಾ! ಇವನ್ನೇ ಕೇಳಿರೆ ಆದುತ ಚಾಮಿ ಕೇಳ್ತ್: ನಮ್ಗೆ ಒಂದ್ ಜೊತೆ ಒಳ್ಳೆ ಕೋಣಗಳು ಬೇಕು. ಮಾರುವ ಕೋಣ ಇಲ್ಲಿ ಉಂಟಾ? ಸಪ್ಲೈರ್‌ಗೆ ಒಳಗೇ ನಗೆ. ಇವೇ ಕೋಣಗ. ಇವುಕೆ ಬೇರೆ ಕೋಣ ಬೇಕಾ? ಓಹೋ ಒಬ್ಬನ ನನ್ಗೆ ಗೊತ್ತಿದೆ. ಅಂವ ಇಲ್ಲೆಲೊ ಇದ್ದ. ಹಂಗೆ ಹೇಳಿಕಂಡ್ ಹೊರಗೆ ಇಣೆಕಿತ್. ಅಲ್ಲಿ ಒಬ್ಬ ಕುದ್ದಿತ್. "ಗಿಡ್ಡಪ್ಪಾ......ಓ ಗಿಡ್ಡಪ್ಪ..........ಬಾರ್‍ಲಾ......... ಇಲ್ಲಿ. ಇವ್ರಿಗೆ ಒಂಜೊತೆ ಕೋಣ ಬೇಕಂತೆ." ಆಗ ಗಿಡ್ಡಪ್ಪ "ಕೊಡ್ತಾನ, ಊಟ ಮಾಡಿ ನಂಜೊತೆ ಬನ್ನಿ ಗೌಡ್ರೆತ" ಹೇಳ್ತ್. ಇವು ಊಟ ಮಾಡ್ರೊ. ಕೈ ತೊಳ್ದೊ. ಕಾಗದಲಿ ಕೈ ಪೂಜಿಕಂಡೊ. ಬಿಲ್ ಕೊಟ್ ಹೊರಗೆ ಬಂದೊ. ಗಿಡ್ಡಪ್ಪ ನೆಗಾಡಿಕಂಡ್ ಅಲ್ಲೆ ನಿತ್ತಿತ್.

'ಇಲ್ಲೇ ಬನ್ನಿ ಗೌಡ್ರೆತ' ಹೇಳಿಕಂಡ್ ಗಿಡ್ಡಪ್ಪ ಟವುಲ್‌ನ ಆಚೆ ಹೆಗ್ಲಂದ್ ಈಚೆ ಹೆಗ್ಲ್‌ಗೆ ದಾಟಿಸಿಕಂಡತ್. ನಡ್ದೊ, ನಡ್ದೊ, ನಡ್ದೊ....... ಹೊಲದಾಟಿದೊ. "ಓ......ಅಲ್ಲೀ........ ಅಲ್ಲಿ ಕಾಣುತ್ತಲ್ಲ ಗೌಡ್ರೇ ಅದೇ ಕೋಣಗಳು. ಒಳ್ಳೆ ಕುದ್ರೆ ಕುದ್ರೆಗಳಂಗವೆ. ನಿಮ್ಮ ಗದ್ದೆ ಉಳುಮೆಗೆ ಈ ಜೋಡಿ ಮಾಡ್ಸಿದಂಗದೆ. ರೇಟ್ ಬಗ್ಗೆ

ನೀವ್ ಚರ್ಚೆಮಾಡಂಗೇ ಇಲ್ಲ. ನಿಮ್ಗೆ ರೇಟ್ ಹೆಚ್ಗೆ ಹೇಳಂಗೂ ಇಲ್ಲ. ನೀವು ನಿಯತ್ತಿನ ಜನಾಂತ ನಂಗೊತ್ತಿಲ್ವಾ? ಈ ಕೋಣಗಳಿಗೆ ಯಾವ ಐಬೂ ಇಲ್ಲ"ಂತ ಆ ಕೋಣಗಳ ವರ್ಣನೆ ಮಾಡ್ತ್.

ಕೋಣಗ ಮೇದ್‌ಕಂಡಿದ್ದವು ತಲೆ ಎತ್ತಿದೊ. ಚಾಮಿ ಒಂದರ ಲಾಯ್ಕ ನೋಡ್ತ್. ಎರಡ್ ಕೊಂಬು, ಎರಡ್ ಕೆಮಿ, ನಾಲ್ಕ್ ಕಾಲ್, ಒಂದ್ ಬಾಲ-ಇದೆಲ್ಲಾ ಕರೆಕ್ಟ್ ಉಟ್ಟು. ಆ ಇನ್ನೊಂದು ಕೋಣನೂ ಅಷ್ಟೇ ಅಂಗಾಂಗನ ಹೊಂದಿತ್. ಆದರೆ ಗಿಡ್ಡಪ್ಪ ಹೇಳ್ದಂಗೆ ಕುದ್ರೆಗಳಂಗೆ ಇಲ್ಲೆ. ಚಾಕಲೆ ಹಿಡ್ದ್ ಸರಿಯಾಗಿ ನಡ್ಕಂಬಕ್ಕೆ ಬೊತ್ತ್‌ದಂಗೆ ಒಳೊ. ಗಿಡ್ಡಪ್ಪ ಕುದ್ರೆನ ನೋಡ್ತೇಲೆ ಕಂಡದೆತ ಚಾಮಿಗಾತ್. ಈ ಕೋಣಗ ಬೇಲಿ ನುಗ್ಗಿದವಲ್ಲ. ಹಂಗಾಗಿ ಅವುಕೆ ಎಲ್ಲಾ ಅಂಗಗ ಸರಿಯಾಗುಟ್ಟು. ಕೆಲವು ಕಡೆ ನೀವಿಗೆ ಗೊತ್ತಿದ್ದಂಗೆ ಅರ್ಧಬಾಲ, ಮೂರುಕಾಲ್, ಒಂದೊರೆ ಕೊಂಬು, ತೋಟ ನುಗ್ಗಕನ ಕಡ್ದೊ, ಹೊಡ್ದೊ ಅರ್ಧಂಬರ್ಧ ಮಾಡಿದ್ದವಲ್ಲಾ ಹಂಗೆ ಈ ಕೋಣಗ ಇಲ್ಲೆ.

"ಸರಿ, ಕೋಣ ಯಾರ್ದು"? "ನಂದೇ ಗೌಡ್ರೆ. ನಾನೇಕೆ ಅವುರ್ದು ಇವುರ್ದು ತೋರುಸ್ಲಿ. ಇದು ನಂದೆಯಾತ" ಗಿಡ್ಡಪ್ಪ ಹೇಳ್ತ್. ಸರಿ ರೇಟ್ ಹೆಂಗೆ? "ಅನುಭವ ಇರೋ ನೀವೇ ಹೇಳಿ" ಗಿಡ್ಡಪ್ಪ ಹೇಳ್ತ್. ನನ್ಗೆ ಅನುಭವ ಇರ್ಬೋದು, ಆದ್ರೆ ಮಾಲು ನಿಂದಲ್ವತ ಚಾಮಿ ಹೇಳ್ತ್. ಗಿಡ್ಡಪ್ಪ ಕೆಳಗೆ ನೋಡಿ ಮೇಲೆ ನೋಡಿ ತಲೆ ಕೆರ್ದ್, ಕುಂಡಿ ಕೆರ್ದ್, ಕೆಮ್ಮಿತ್. "ಎಂಟ್ ಸಾವ್ರತ" ಕಡ್ಡಿ ಮುರ್ದಂಗೆ ಹೇಳ್ತ್. ಚಾಮಿದ್ ಮೊಕ ಬೆಳ್ಳೆರ್ಸಿ ಹೋತು. ಬೋಜನ ಹೊಟ್ಟೆಂದ ಮಧ್ಯಾಹ್ನ ಉಂಡ ಸಿಗಡಿ ಮೀನ್ ಬಾಯಿಗೆ ಬಂದಂಗಾತ್. "ಯಾಕೆ ಗೌಡ್ರೆ ಸುಮ್ಕೆ ನಿಂತ್ ಬುಟ್ರಿ? ಹತ್ ಸಾವ್ರ ಹೇಳ್ಬೇಕಾಗಿತ್ತು. ನಿಮ್‌ಗೆ ಎರಡ್ ಸಾವ್ರ ಕಮ್ಮಿ ಮಾಡಿ ಎಂಟ್ ಸಾವ್ರ ಅಂದಿವ್ನಿ". ಚಾಮಿಗೆ ಸಿಗರೇಟ್ ಪ್ಯಾಕೆಟ್, ಅದರ್ಲಿ ಇರುವ ಅರ್ಧ ಸಿಗರೇಟ್, ಬಾಕಿ ಇರುವ ಗಣೇಶ ಬೀಡಿ...........ಈ ಶೋಕಿ ಪೂರಾ ರಟ್ಟೆಹೋದಂಗಾತ್. ಚಾಮಿ ಒಂದ್ ಮಾತ್ ಹೇಳ್ತ್. ನಮ್ಗೆ ಕೋಣಗಳೇ ಬ್ಯಾಡಾ. ಆಗ ಗಿಡ್ಡಪ್ಪನ ಕುತ್ತಿಗೆ ಉದ್ದ ಆತ್. "ಅಯ್ ಗೌಡ್ರೆ..... ವ್ಯಾಪಾರಂತಂದ್ರೆ ಹಿಂಗೆನಾ? ಹೇಳಿ ನೀವೂ ಒಂದು ರೇಟು. ಇದ್ಯಾಕೆ ಅತ್ತೆ ಥರ ಮೊಕ ಊದ್ಸಿಕಂಡ್ರೀ?" ಆಗ ಚಾಮಿನೂ ಬೋಜನೂ ಪಿಸಿಪಿಸಿ ಮಾತಾಡಿಕಂಡೊ. "ಐದು ಸಾವ್ರಕ್ಕೆ ಕೊಟ್ರೆಕೊಡಿ, ಇಲ್ದಿದ್ರೆ ಬ್ಯಾಡ"ಂತ ಹೇಳ್ದೊ. ಗಿಡ್ಡಪ್ಪ ಒಂದ್ ತಿಂಗಳ ಹಿಂದೆ ಮೂರ್ ಸಾವ್ರಕ್ಕೆ ತಕ್ಕಂಡ ಕೋಣಗಿವು. ಇವು ಐದ್‌ಂತ ಹೇಳ್ತಾ ಒಳೊ. ಅಂದರೆ ಎರಡ್ ಸಾವ್ರ ಕುದ್ದಲಿಗೆ ಲಾಭ ಬಂದಂಗಾತ್! ಆದರೂ ಗಿಡ್ಡಪ್ಪ ಕೊಡಿಕೆ ಒಪ್ಪಿತ್ಲೆ. ಬೋಜನೂ ಚಾಮಿನೂ, ಹಿಂದಕೆ ಹೊರ್ಡಿಕೆ ಹೆಜ್ಜೆ ಹಾಕಿದೊ. ಆಗ ಗಿಡ್ಡಪ್ಪ "ಆಯ್ತು ಗೌಡ್ರೆ...... ಹಗ್ಗ ಕೊಡಿ"ಂತೇಳಿ ಕೋಣಗಳ ಕುತ್ತಿಗೆಗೆ ಬಳ್ಳಿ ಹಾಕಿತ್. ಚಾಮಿ ಐದ್ ಸಾವಿರ ಲೆಕ್ಕ ಮಾಡಿ ಕೊಟ್ಟತ್. ವ್ಯಾಪಾರ ಆತ್.

ಮತ್ತೇ?

ಭಾಗಮಂಡಲಕ್ಕೆ ನಡ್ಕಂಡೇ ಹೋದರೆ ಕೋಣಗಳ್ನೇ ಹೊರಿಕೆ ಆದು. ಒಂದು ಮಿನಿ ಲಾರಿನ ಮಾತಾಡ್ನೊತ ಲಾರಿಗಾಗಿ ಅಲ್ಲಿ ಇಲ್ಲಿ ಹುಡ್ಕಿದೊ. ಒಬ್ಬ ಸಿಕ್ಕಿತ್. "ಬನ್ನಿ, ಹೆಚ್ಚು ಕಡಿಮೆ ಮಾಡಾನ . ಬರುವಾಗ ನಾನು ಖಾಲಿ ಬರಬೇಕು. ಹೋಗುವ ಬರುವ ಚಾರ್ಜು ಒಂದ್ ಸಾವಿರ ಕೊಟ್ರೆ ಸಾಕು"ಂತ ಲಾರಿಯಂವ ಹೇಳ್ತ್. ವಾದ ಮಾಡಿ ಎಂಟು ನೂರಕ್ಕೆ ಇಳ್ಸಿದೊ. ಇಷ್ಟೆಲ್ಲಾ ಆಗಿ ಆಕನ ಚಾಮಿ ಕೈಲಿ ನೂರೋ ಇನ್ನೂರೊ ಒಳ್ದಟು. ಸರಿ, ಕೋಣಗಳ ಮಿನಿ ಲಾರಿಗೆ ಲೋಡ್ ಮಾಡ್ಬೊ. ಹಂಗೆ ಮಾಡಕನ ಒಂದ್ ಕೋಣ ಬಾಲ ಎತ್ತದೆ ಸಗಣಿ ಹಾಕಿತ್. ಲಾರಿ ಗುರು ಗುರು ಸದ್ ಮಾಡಿಕಂಡ್ ಹೊರ್ಟ್ತಕನ ಇನ್ನೊಂದ್ ಕೋಣ ಜುಲಾಬು ಮಾಡಿ ಕಂಡತ್. ಕುಶಾಲನಗರ ದಾಟಿ, ಸುಂಟಿಕೊಪ್ಪಕ್ಕಾಗಿ ಮಡಿಕೇರಿಗೆ ಬಂದ್ ಎತ್ತಿತ್. ಡಿಸೇಲ್ ಹಾಕಿಕೆತ ಪೆಟ್ರೊಲ್ ಬಂಕ್‌ಲಿ ನಿಲ್ಸಕನ ಡ್ರೈವರ್ ಐನೂರು ರೂಪಾಯಿ ಕೇಳ್ತ್. ಚಾಮಿ ಐದ್‌ದಪ ಲೆಕ್ಕ ಮಾಡಿ ಕೊಟ್ಟತ್. ರಾತ್ರೆ ಒಂಬತ್ತೋ ಹತ್ ಗಂಟೆಗೂ ಚೇರಂಬಾಣೆಗೆ ಎತ್ತಿದೊ. ಅಲ್ಲೆಲ್ಲಾರ್ ಕಾಫಿ ಕುಡಿಯನೋಂತ ಲಾರಿ ನಿಲ್ಸಿ ಕಾಫಿ ಕುಡ್ಡೊ.

ಕೋಣಗ ಹೆಂಗೆ ಒಳೊ ನೋಣ್ನೊಂತೇಳಿ ಚಾಮಿ ಹಿಂದೆ ಬಂದ್ ನೋಡಕನಾ........!! ಹಿಂದೆದ್ ಡೋರ್ ಓಪನ್ ಆವುಟ್ಟು! ಒಂದ್ ಕೋಣ ನಾಪತ್ತೆ! ಕರಿಗೂಡು ಕತ್ತಲೇಲಿ ಕರಿ ಕೋಣ ಕಾಂಬೊದಾ? ಹಾ! ಚವುಂಡೀ .........ನಿಂಗೆ ನಾಲ್ಕ್ ಕಾಲ್ ಬೇಟಾ ಕೊಟ್ಟನೇಂತ ನಿತ್ತಲ್ಲೆ ಕೆಲವು ಮಿನಿಸ್ಟ್ರಗ ಸ್ಯಾಂಕ್ಷನ್ ಮಾಡುವಂಗೆ ಚವುಂಡಿಗೆ ಚಾಮಿ ಸ್ಯಾಂಕ್ಷನ್ ಮಾಡ್ತ್.

"ಏಯ್ ಬೋಜಾ ಕುಂಬಕರ್ಣ..... ನಿನ್ನ ನಿದ್ದೆನೊ ನೀನೋ. ಥತ್‌ಥೇರಿ..... ಕೋಣ ಹೋತಲ್ಲರಾ........ನೀ ಸೀದಾ ಮನೆಗೆ ಹೋಗು. ಹಟ್ಟಿಲಿ ಈ ಜುಲಾಬು ಕೋಣನ ಕಟ್ಟಿ ಹುಲ್ ಹಾಕ್‌ಬುಡು. ನಾ ಆ ಕೋಣನ ಹುಡ್ಕಿಕಂಡ್ ಬನ್ನೆ"ಂತೇಳಿ ಲಾರಿನ ಮನೆ ಕಡೆ ಕಳ್ಸಿತ್. ಚಾಮಿ ಹಿಂದಕೆ ಹೊರ್ಟತ್. ಕರಿಗೂಡು ಕತ್ತಲೆ ಬೇರೆ. ಟಾರ್ಚೂ ಇಲ್ಲೆ. ಬೀದಿ ಲೈಟೂ ಇಲ್ಲೆ. ಭೂತದಂಗೆ ಒಬ್ಬನೇ ಹಿಂದಕೆ ಬಾತ್. ಮಿಣ್‌ಪುಳಿಗ ಮಿಳ್‌ಮಿಳ್ ಬೆಳಕು ಬುಟ್‌ಕಂಡು ಹಾರ್ತಾ ಒಳೊ. ಚಾಮಿ ಓಡಿಕೆ ಶುರು ಮಾಡ್ತ್. ಜೋಬುಲಿದ್ದ ಸಿಗರೇಟ್ ಪ್ಯಾಕೆಟ್ ಒಳಗೆ ಇದ್ದ ಗಣೇಶ ಬೀಡಿ ಚರಚರ ಚರಚರ ಸದ್ ಮಾಡ್ತಾ ಇತ್. ಇಂವನ ಓಟದ ಕಾಲ್ ಸದ್ದುನೂ ಈ ಗಣೇಶ ಬೀಡಿನ ಚರಚರ ಸದ್ದುನೂ ಕೇಳ್ದ ಬೀದಿ ನಾಯಿಗ ಚಾಮಿನ ಸುತ್ತುವರ್ಕಂಡ್ ಬೊಗಳ್ತಾ ಒಳೊ. ಚೂ..... ನಿಮ್ಮ ಹುಲಿ ಹಿಡಿಯಕೆಂತ ನಾಯಿಗಳಿಗೆ ಬಯ್ಕಂಡ್ ಓಡ್ತಾನೇ ಇತ್. ಹ್ಹೂಂವೇ ಹ್ಹೂಂವೇತ ಕೋಣಗ ಅರಚುವಂಗೆ ಅರ್‌ಚಿಕಂಡ್ ಕರ್ಕಂಡ್ ಬಕ್ಕಕೆ ಬಂದ್ ಎತ್ತಕನ ಸಧ್ಯಬತ್. ಕಾಲ್ಕೈ ಬಿದ್ದು ಹೋತು. ಕೋಣ ಅಲ್ಲೆಲ್ಲೂ ಇಲ್ಲೆ, ಕಣ್ಣೀರ್

ಬಾತ್. ಮೂಗ್ ನೀರ್ ಸುರ್ತ್. ಅಷ್ಪೊತ್ತಿಗೆ ದಿಬ್ಬಣದ ವ್ಯಾನ್ 'ಜೈ' ಹೇಳಿಕಂಡ್ ಬಾತ್. ವ್ಯಾನ್‌ದ್ ಹೆಡ್‌ಲೈಟ್ ಮೊಕಕೆ ಬೀಳ್‌ಕನ ಚಾಮಿ ಮೊಕ ಮುಚ್ಚಿಕಂಡತ್. ಅಷ್ಪೊತ್ತಿಗೆ ಸ್ಕೂಲ್ ಮಕ್ಕಳ ಟೂರ್ ಬಸ್ ದಾಟಿತ್. ಮಕ್ಕ ಚಪ್ಪಾಳೆ ಹೊಡ್ಕಂಡ್ "ಲೇಲೇಲೈಸಾ.......ಲೈಸಾ.......ನಮ್ಮ್ಮಳ ಬಂಡಿ........ ಲೈಸಾ......." ಹೇಳ್ತಾ ಇದ್ದೊ. ಓಡಿ ಓಡಿ ಸುಸ್ತಾಕನ ಚಾಮಿ ಆ ಕೋಣನ ಕೊಟ್ಟ ಗಿಡ್ಡಪ್ಪನ ಕಾಲ್‌ಹಿಡ್ಪ್ ನೆಲಕೆ ಬಡಿಯೊಕುಂತ ಹಲ್‌ಕಚ್ಚಿಕಂಡತ್. ದೊಂಡೆ ಪಸೆ ಆರಿ ಹೋತ್. ಹಿಂಗೆ ಇರಕನ ಸಿಂಗಲ್ ಕೋಣನ ತುಂಬಿಕಂಡ್ ಹೋಗಿ ಮನೆಗೆ ಬುಟ್ ಲಾರಿ ಹಿಂದಕೆ ಬಾತ್. ಆ ಲಾರಿಯವಂಗೆ ಈ ಚಾಮಿ ದಾರಿಲಿ ಎಲ್ಲಾರ್ ಸಿಕ್ಕುದು, ಹಂಗೆ ಸಿಕ್ಕಿರೆ ಅವನ್ನ ಕಂಡೂ ಕಾಣದಂಗೆ ಹೋನೆತ ಗ್ಯಾನ ಮಾಡಿಕಂಡೇ ಬಾತಿತ್. ಹಂಗೆ ಬಾಕನ ದಾರಿಲಿ ಕಾಂಬಕೂ ಸಿಕ್ಕಿತ್. ಲಾರಿ ಹೈ ಸ್ಪೀಡ್‌ಲಿ ಚಾಮಿನ ದಾಟಿ ಮುಂದೆ ಹೋಗೇ ಬುಡ್ತ್!

ಚಾಮಿಗೆ ಮತ್ತೆ ಮುಂದಕ್ಕೆ ಓಡಿಕೆ ಮನ್‌ಸಾತ್‌ಲೆ. ಹಿಂದಕೆ ತಿರ್ಗಿ ಮನೆಕಡೆ ಹೊರ್ಪತ್. ಹಂಗೆ ತಿರ್ಗಿ ಒಂದೆರ್‌ಡ್ ಮೈಲಿ ಹೋಕನ ಹಿಂದೆಂದ ಬಂಡ ಭಾಗಮಂಡ್ಲದ ಬಟ್ಟೆ ಶಾಪಂವ ತನ್ನ ಮಹೇಂದ್ರ ಜೀಪುನ ನಿಲ್ಸಿತ್. "ಏ ಚಾಮಿ ಈ ಕತ್ತಲೆಲಿ ಎಂತರಾ ನಿನ್ನ ಕಥೆ. ಬಾ ಜೀಪ್ ಹತ್‌ತ" ಹೇಳಕನ ಸಾಕ್ಷಾತ್ ಭಗಂಡೇಶ್ವರನೇ ಬಂದಂಗಾತ್. ನಡ್ದ ಕಥೆನೆಲ್ಲಾ ಜೀಪುನವನಕ್ಕಲೆ ಹೇಳಿಕಂಡ್ ಬಾತ್. ಹಂಗೂ ಹಿಂಗೂ ಭಾಗಮಂಡ್ಲಕೆ ಎತ್ತಿದೊ. ಅಲ್ಲೆ ಕರಿಕೆ ರೋಡ್ ಹತ್ರ ಚಾಮಿ ಇಳ್ದ್ ಮನೆಗೆ ಹೋತು. ಮುಂದೇ ಹೋಗಿ ಎತ್ತಿದ ಬೋಜ ಒಂದನೇ ನಿದ್ದೆ ಮಾಡಿ ಎರಡನೇ ನಿದ್ದೆಗೆ ಮಗ್ಗುಲು ಬದಲಾಯಿಸಿ ಮಲಗ್ತಾ ಇತ್. ಚಾಮಿ ಹಟ್ಟಿಗೆ ಹೋಗಿ ನೋಡ್ತ್. ಅಲ್ಲಿ ಒಂಟಿ ಕೋಣನ ಗೂಟಕ್ಕೆ ಕಟ್ಟಿತ್. ಪಿಳಿಪಿಳಿ ಕಣ್ ಬುಟ್‌ಕಂಡ್ ಜುಲಾಬು ಮಾಡಿಕಂಡೇ ಮಲ್ಗಿದ್ದ ಕೋಣ ಈ ಹೊಸಾ ಯಜಮಾನನ ಕಂಡ್ ಎದ್ದತ್‌ಲೆ. ಬೆಳಿಗ್ಗೆ ನೋಡಿನೇಂತೇಳಿ ಚಾಮಿ ಕಾಲ್ ಕೈ ತೊಳ್ದ್ ತಂಗ್ಳ ಉಂಡ್ ಮಲ್ಗಿತ್. ಅತ್ತ ಹೊರಳಿ ಇತ್ತ ಹೊರಳಿ ಹೆಂಗೆ ಮಲ್ಗಿರೂ ನಿದ್ದೆ ಸುತಾರಾಂ ಬಾತ್‌ಲೆ. ಗಣೇಶ ಬೀಡಿ ಕಟ್ ಮುಗಿಯ ಮುಟ್ಟ ಚೈನ್ ಸ್ಮೋಕ್ ಮಾಡ್ತ್.



ಬೆಳಗಾತ್. ಚಾಮಿ ಎದ್ದವ್. ಬೋಜಂಗೆ ಈ ಕೋಣನ ಬಗ್ಗೆ ಹೇಳಿ ತಪ್ಪಿಹೋದ ಕೋಣನ ಹುಡ್ಕಿಕೆ ಮಡ್ಕೇರಿ ಬಸ್ ಹತ್ತಿತ್. ಮಡ್ಕೇರಿಂದ ಕುಶಾಲನಗರ ಬಸ್ ಹತ್ತಿತ್. ಕುಶಾಲನಗರಂದ ವ್ಯಾನ್‌ಲಿ ಸೀದ ಕೊಣನೂರಿಗೇ ಹೋತು. ಗಿಡ್ಡಪ್ಪ ಅದೇ ಮಿಲ್ಟ್ರಿ ಹೋಟ್ಲ್ ಮುಂದೆ ಹೊಸಾ ಟವಲ್ ಹಾಕಂಡ್ ಕುದ್ದಿತ್ "ಓ ಗೌಡ್ರೆ ಯಾಕೆ ಹಿಂದ್ಕೆ ಬಂದ್ರೀ"ಂತ ಗಿಡ್ಡಪ್ಪನೇ ಚಾಮಿನ ಮಾತಾಡ್ಸಿತ್. ಆಗ ಚಾಮಿ ಹಿಂಗಿಂಗೆ ಹಿಂಗಿಂಗೆಂತೆಲ್ಲಾ ಹೇಳ್ತ್. "......ಓ ಹಂಗಾ ಗೌಡ್ರೆ? ನಿಮ್ಗೆ ಕೋಣ ಹುಡ್ಕಕೆ ಬರಾಕಿಲ್ಲ. ಬಸ್ನಲ್ಲಿ ಓಡಾಡಿದ್ರೆ ಕೋಣ ಸಿಕ್ಯಾತಾ? ನಿಮ್ಗೆ ಅದು ಸಿಗಾಕಿಲ್ಲ ಬುಡಿ ಗೌಡ್ರೆ. ಅದ್ನ ಯಾರಾದ್ರು ಕೂದಾಕಿರ್‌ಬೋದು"ಂತ ಹೇಳ್‌ಕನ ಚಾಮಿಗೆ ತಲೆ ಗಿರ್‌ತ ಸುತ್ತಿದಂಗಾತ್. ಮಿಲ್ಟ್ರಿ ಹೋಟ್ಲ್ ಗೋಡೆಗೆ ತಾಂಗಿ ನಿತ್‌ಕಂಡತ್. ಕಣ್ ಕತ್ತಲೆ ಬಂದಂಗಾಗಿ ಮತ್ತೆ ಸರಿಯಾತ್. ಇಲ್ಲಿ ನಿತ್ ಪ್ರಯೋಜ್ನ ಇಲ್ಲೇತ ವ್ಯಾನ್ ಹತ್ತಿ ಕುಶಾಲನಗರಕ್ಕೆ ಬಾತ್. ಅಲ್ಲಿಂದ ಮಡಿಕೇರಿಗಾಗಿ ಭಾಗಮಂಡ್ಲಕೆ ಎತ್ತಿತ್.

ಬೆಳಿಗ್ಗೆ ಜಗ್‌ಲ್‌ಲಿ ಕುದ್ದಿರಕನ ನೆರೆಮನೆಯಂವ "ಈ ಬಾ ಚೋಮಣ್ಣ. ಅರಾ........ಕರಿಯಣ್ಣಾಂತ" ರಾಗ ಎಳ್ಕಂಡ್ ಊಡ್ತಾ ಇತ್. ನಮ್ಮ ಚಾಮಿ ಒಂಟಿ ಕೋಣನ ಕಟ್ಟಿಕಂಡ್ ಊಡ್‌ದು ಹೆಂಗೆ?

ಗೊಡ್ಡಿ ಹಸ್‌ನ ಕೋಣನೊಟ್ಟಿಗೆ ಕಟ್ಟಿತ್. ಗದ್ದೆ ಹಡ್ಲ್ ತೆಗೆಕೆ ಶುರು ಮಾಡ್ತ್. ಆ ಗದ್ದೆ ಪುಣೆಗಾಗಿ ದಾಟಿ ಹೋಗುವ ಇಸ್ಕೂಲ್ ಮಕ್ಕ ಹಸ್‌ನೂ ಕೋಣನೂ ಕಟ್ಟಿಕಂಡ್ ಊಡುವ ಚಾಮಿನ ಪೇಚಾಟ ನೋಡಿಕಂಡ್ ನಗಾಡಿಕೆ ಶುರು ಮಾಡಿಕಂಡೊ. ಸಂತೆಗೆ ಹೋಗವು ಬರೊವುಕ್ಕೆ ಹಸ್‌ನೂ ಕೋಣನೂ ಜೋಡಿಯಾಗಿ ನಡೆದು ನೋಡುವ ಪುಕ್ಸಟೆ ಮನರಂಜನೆ ಆತ್.



# 24. ಸೋಮಣ್ಣನ ಆಸೆ........!

**ಮೊನ್ನೆ** ಸೋಮಣ್ಣನ ಕಾಂಬಕೆ ಸಿಕ್ಕಿತ್. ಅಂವ ನನ್ನ ನೋಡ್ತೋ ಇಲ್ಲೆಯೋ "ಗೋಳೋಂತ" ಮರ್‌ಡಿಕೆ ಶುರ್ ಮಾಡ್ತ್! ಅರರೇ ನಿಂಗೇನಾತ್ ಮಾರಾಯ? ಒಳ್ಳ ಗುಂಡುಕಲ್ ಇದ್ದಂಗೆ ಒಳ. ಹೆಣ್ಣ್ ಇಳ್ಸಿಕಾಕನ (ಕೆಲವು!) ಮರ್‌ಟವಲ್ಲ ಹಂಗೆ ಮರ್‌ತ್ತಾ ಒಳಲ್ಲಾ? ಏನ್ ವಿಷಯ? ಒಮ್ಮೆ ಹೇಳ್. ಕಂಡೊವು ಏನ್ ಹೇಳಿಕಿಲೆಂತ ಕೇಳ್ದೆ. ಅಂವಂಗೆ ಆಗ ಹೇಳಿಕೆ ಬಾಯಿ ಬಾತ್ಲೆ. ಅಂತೂ ನಾ ಒತ್ತಾಯ ಮಾಡ್ದೆ. ಆಗ ಅಂವ ಹೇಳಿಕೆಂತ ಪೇಚಾಡ್ದೆ, ಹೇಳ್ದುಲೆ. ಒಮ್ಮೆ ಬಾಯಿ ಬುಟ್ಟತ್. ಮಾತ್ ಹೊರ್ಟತ್ಲೆ. ಕಡೇಗೆ ಹೇಳ್ತ್. "ನಂಗೆ ಯಾರೂ ಹೆಣ್ಣ್ ಕೊಡ್ದುಲೆ, ನಾ ಈಗ ಒಂಟಿಯಾಬುಟ್ಟೊಳೆ." ನಿಂಗೆ ಹಂಗೇ ಆಕುತ ನಾ ಹೇಳ್ದೆ. "ನಿನ್ನ ದಮ್ಮಯ್ಯತ ಹೇಳಿನೆ. ಹಂಗೆ ಹೇಳ್‌ಬಡ. ಎಲ್ಲಾರ್ ಒಂದ್ ಹೆಣ್ಣ್ ಕೊಡ್ಸು"ತ ಹೇಳ್ತ್. ಆಗ ನಾ ಹೇಳ್ದೆ ಮೊಕಲಿ ಕಣ್ಣಿದ್ದಂವ ನಿಂಗೆ ಹೆಣ್ ಕೊಡಿಕಿಲೆ. ಯಾಕೆಂತೇಳಿರೆ ನೀ ಕಮ್ಮಿಂತೇಳಿರೆ ವರ್ಷಕ್ಕೆ ಇಪ್ಪತ್ ಮನೆಗೆ ಹೆಣ್ ನೋಡಿಕೆ ಹೋಗಂವ. ಒಮ್ಮೆ ನಿಂಗೆ ಕೋಳಿ ತಿಂದ್ ಉಷ್ಣ ಹತ್ತಿಕಂಡ್‌ದ್ ಗ್ಯಾನ ಉಟ್ಟಾ? ಆಸ್ಪತ್ರೆಲಿ ವಾರಗಟ್ಟಲೆ ಬಿದ್ದಿದ್ದಲ್ಲ, ಅದೆಲ್ಲಾ ಮರ್ತ್ತೋತಾ? ಇಷ್ಟೆಲ್ಲಾ ಆದರೂ ನೀ ಮೊದುವೆ ಆನೇಂತೇಳಿ ಯಾರಿಗೂ ಒಪ್ಪಿಗೆ ಕೊಟ್ಟತ್ಲೆ. ಹೆಣ್ ನೋಡಿಕೆ ಹೋದಲ್ಲಿ ಲಾಯ್ಕ ಕುತ್ತಿಗೆ ಮುಟ್ಟ ಮುಕ್ಕುದು, ಯಾವುದಕ್ಕೂ ನಾ ಆಮೇಲೆ ಹೇಳಿನೇಂತ ಹೇಳಿ ಬಂದಂವ ಇನ್ನೊಂದು ಮನೆಗೆ ನುಗ್ಗುದು. ಮತ್ತೆ ಆ ಕಡೆ ತಲೆ ಹಾಕುದ್ಲೆ. ಆ ಗೂಡೆ ಹಂಗೆ, ಈ ಗೂಡೆ ಹಿಂಗೇತ ಸೂನೆ ಹೇಳಿಕಂಡೇ ತಿರ್‌ಗಿಕಂಡ್ ಇರಂವ. ಕಡೆಗೆ ಚಾಕರಿಲಿ ಇರೊ ಗೂಡನೇ ಬೇಕ್‌ಂತ ಹಠ ಮಾಡ್ದಂವ. ನಿನ್ನ ದವಡೆದ್ ಹಲ್ಲ್ ಉದುರಿರೂ ನಿಂಗೆ ಬುದ್ಧಿ ಬಾತ್ಲೆ. ಕೆಲ ನೆರೆಕರೆವ್ ನೆರೆ 'ಹೊರೆ' ಆದವೆ. ಹೆಣ್ ನೋಡಿಕೆ ನಂಟ ಬಂದರೆ ಅಂವನ ದಾರಿ ತಪ್ಪುಸಿ ಹಿಂದಕೆ ಕಳ್ಸಿ ಮಜ ನೋಡುವ ನೆರೆಮನೆವ್ರೂ ಒಳೊ ಮಾರಾಯತಾ ನಾ ಹೇಳ್ದೆ.

"ಹೆಂಗಾರ್ ಆಗಲಿ, ಚಾಕರಿ ಗೂಡೆನೇ ಬೇಕ್"ಂತ ಸೋಮಣ್ಣ ಹಠ ಮಾಡಿಕೆ ಶುರ್ ಮಾಡ್ತ್.

ಆಗ ನಾ ಹೇಳ್ದೆ :

ನೋಡು ಸೋಮಣ್ಣ, ಗಂಡ ಹೆಣ್ ಇಬ್ಬರೂ ಚಾಕರ್‌ಲಿ ಇರೋವು ಹೆಂಗೆ ಒಳೊ? ಬರೀ ಹೆಸ್‌ರ್‌ಗೆ ಮಾತ್ರ ಚಾಕರಿ. ಪಾಪ! ಮಕ್ಕ ಮಾತ್ರ ತಬ್ಬಲಿಗಳಂಗೆ. ಆ ಮಕ್ಕಳಿಗೆ ಊಟ ಕೊಡೊವು ಇಲ್ಲೆ. ಪಾಠ ಹೇಳೋವು ಇಲ್ಲೆ. ಅಪ್ಪಂಗೂ ಅರ್ಜೆಂಟ್ ಅವ್ವಂಗೂ ಅರ್ಜೆಂಟ್. ಈ ಅರ್ಜೆಂಟ್ ಯಾಕೆ? ಸಂಪಾದನೆ ಮಾಡಿಕೆ. ಆ ಸಂಪಾದನೆನ ಅನುಭವಿಸಿಕ್ಕೂ ಸಮಯ ಇಲ್ಲೆ!! ವರ್ಷಕ್ಕೊಮ್ಮೆ ವರ್ಗಾವಣೆ. ಹೆಣ್ ಉಪ್ಪಿನಂಗಡಿಗೆ

ವರ್ಗಾಗಿ ಹೋದರೆ ಗಂಡ ನೆಲ್ಲಿಹುದಿಕೇರಿಗೆ. ಮತ್ತೊಂದ್ ವರ್ಷ ಹೆಣ್ ಕನ್ಯಾಕುಮಾರಿಗೆ, ಗಂಡ ಕಾಶ್ಮೀರಕ್ಕೆ ವರ್ಗ. ಈ ವರ್ಗಾವಣೆನ ರದ್ ಮಾಡ್ಕೆ ಲಂಚ ಕೊಡೊಕು. ಕೆಲವೊಮ್ಮೆ ಲಂಚ ಕೊಟ್ಟರೂ ವರ್ಗಾವಣೆ ರದ್ ಆಕಿಲೆ. ಅಂತೂ ಇಂತೂ ಅವು ಹೇಳ್ದ ಊರಿಗೆ ಗಂಟ್ ಮೂಟೆ ಕಟ್ಟಿಕಂಡ್ ಬಾಡಿಗೆ ಮನೆ ಹುಡುಕಿ ಕಡೇಗೆ ಹೆಂಗೋ ಇರೋ ಮನೆಗೆ ಅಡ್ವಾನ್ಸ್ ಕೊಟ್, ಲಾರಿ ಬಾಡಿಗೆ ಕೊಟ್ ಆಕನ ಇವರ ಪಳ್ ಜೋಡಿ ಚಕ್ಕಳ ಎದ್ದೋದೆ. ಮಕ್ಕಳ ವಿದ್ಯಾಭ್ಯಾಸ? ಆ ಮಕ್ಕಳ ಗೋಳು ಯಾರಿಗೆ ಆದು? ನೀವು ಸಾ ಗ್ಯಾನ ಮಾಡಿ. ಚಾಕರ್ಲಿರೋ ಸುಖ ಜೀವನ ಇದೇನಾ?

ಪ್ರತೀ ವರ್ಷ ಬಾಡಿಗೆ ಮನೆ ಹುಡುಕುದು. ಸಂಪಾದನೆ ಮಾಡ್ದ ಹಣನೆಲ್ಲಾ ಲಂಚಕ್ಕೆ, ಬಾಡಿಗೆಗೆ, ಅಡ್ವಾನ್ಸ್‌ಗೆ, ಕಾಯಿಲೆಗೆಂತ ಖರ್ಚ ಮಾಡಿ ಮಾಡಿ ಕಡೇ ಕಾಲಕ್ಕೆ 'ನಿವೃತ್ತಿ' ಆಕನ "ಹಲ್ಲ್ ಕಟ್ಟಿಸಿಕಂಬಕ್ಕೂ" ಕಾಸ್ ಇರಿಕಿಲ್ಲೆ. ಇನ್ ಸ್ವಂತ ಮನೆ ಕಟ್ಟಿಕಂಬೊದು?! ಸೋಮಣ್ಣ ನೀ ಇನ್ನಾರ್ ಗ್ಯಾನ ಮಾಡ್. ಓದಿದ ಗೂಡೆ ಚಾಕರಿ ಇಲ್ಲದೆ ಮನೇಲಿ ಇದ್ದರೆ ಅಂಥವುಳುನ್ನೇ ಮೊದುವೆ ಆಕು. ಒಬ್ಬ ಚಾಕರ್ಲಿ ಇದ್ದರೆ ಸಾಕ್. ತೋಟ ತೊಡಿಗೆ ಇದ್ದರೆ ಚಾಕರಿಗೆ ಯಾಕೆ ಹೋಕು?

ಚಾಕರ್ಲಿ ಇರುವ ಗೂಡೆನೇ ಹುಡಿಕಿರೆ ಮನೆಲೇ ಇರುವ ಗೂಡೆಗಳ ಕಥೆ ಏನಾಕು? ನಿರುದ್ಯೋಗ ಇರುವ ಈ ಕಾಲಲಿ ಯುವ ಜನಾಂಗ ಸೊಲ್ಪ ಗ್ಯಾನ ಮಾಡೋಕು. ಸೋಮಣ್ಣ ನಂಥವುಕೆ ನಿಮ್ಮಂಥವು ಸೊಲ್ಪ ಬುದ್ಧಿ ಹೇಳೊಕು.



# 25. ಹೇಂಟೆಗೆ ಮೀಸೆ !

**ಸೀತವ್ವಜ್ಜಿ** ಕೋಳಿ ಸಾಂಕುದರ್ಲಿ ಜಾಣೆ. ತನ್ನ ಪಿಳ್ಳಿಕಳ ಮತ್ತೆ ಕೋಳಿ ಪಿಳ್ಳೆಗಳ ಪೊಲ್ರ್ಲಿ ಸಾಂಕ್‌ತಿತ್. ಪಿಳ್ಳಿಕಳಿಗೆ ಮೊಟ್ಟೆ ತಿನ್ಸುದೇ ಕೆಲ್ಸ. ಒಬ್ಬಂಗೆ ಹಸಿ ಮೊಟ್ಟೆ, ಇನ್ನೊಬ್ಬಂಗೆ ಹಸಿಬಿಸಿ ಮೊಟ್ಟೆ, ಇವ್ನಿಗೆ ಲಾಯ್ಕ ಬೆಂದ ಮೊಟ್ಟೆ, ಅವ್ನಿಗೆ ಆಮ್ಲೆಟ್, ಮನೆವ್ಕೆ ಬುಲ್ಸ್ಯೆ ತಪ್ಪಿರೆ ಮೊಟ್ಟೆ ಗೈಪು, ಕೆಲವೊಮ್ಮೆ ಎಗ್‌ಬುರ್ಜಿ ಹೀಂಗೆ ನಾನಾ ನಮೂನೆಲಿ ಮೊಟ್ಟೆದ್ ಉಪಯೋಗ ಆ ಅಜ್ಜಿ ಮನೇಲಿ ಆತಿತ್. ಶಿವನ ತಲೇಲಿ ಹೂ ತಪ್ಪಿರೂ ಅಜ್ಜಿ ಮನೇಲಿ ಮೊಟ್ಟೆ ತಪ್ಪಿಕಿಲೆ.

ಕಾಪುಂದ ಮರಿ ಇಳ್ಸಿದ ಮೇಲಂತೂ ಅಜ್ಜಿಗೆ ನಿದ್ರೆ ಬಾಕಿಲೆ. ನಾಯಿ, ಹಾವು, ಗಿಡ್ಗ, ಕಿರ್ಕೊಟ, ಕಕ್ಕೆ, ಕೀರಿ, ಕುದ್ಕ, ಕೊತ್ತಿ ಇವುಗಳ ಬಾಯಿಂದ ಬಚಾವು ಮಾಡಿ ಪಿಳ್ಳೆಗಳ ದೊಡ್ಡದ್ ಮಾಡ್ಬೇನ್ ಸುಲ್ಬದ ಕೆಲ್ಸನಾ? ನುಚ್ಚಿ, ತೌಡು, ಚಿಂದ್ಲ್, ಅರೆ ಚಟ್‌ಬತ್ತ, ಮಕ್ಕ ಬುಟ್ಟ ಅನ್ನ ಏನಿದ್ದರೂ ಕೋಳಿಗಳ ಕರ್ದ್ ಹಾಕ್‌ತಿತ್. ಆ ಕಡೇ ಕೂಸು ಕುದ್ ಉಂಬಕನ ಕೋಳಿಗ ಆಚೆಂದ ಈಚೆಂದೆಲ್ಲಾ ಬಂದ್‌ಕಂಡ್ ಕೊಟಕೊಟಾಂತ ಕುಕ್ಕಿ ತಿಂದ್‌ಬುಡ್ತಿದ್ದೊ. ಕೂಸು ಕೋಳಿಗಳ್ಗೆ ಹೆದ್ರಿ ಬಟ್ಲ್ ಬುಟ್ ಓಡ್ತಿತ್. ಕೈಲಿ ರೊಟ್ಟಿ ಇದ್ದರೂ ಅದನ್ರ್ಲೂ ಸಾ ಹಾರಿ ಕಚ್ಚಿಕಂಡ್ ಓಡಿ ಹೋತ್ತಿದ್ದೊ. ಅಬ್ಬಬ್ಬಾ ಈ ಕೋಳಿಗಳ ಬಗ್ಗೆ ಎಷ್ಟ್ ಹೇಳಿರೂ ತೀರ್ಕಿಲೆ. ಪಡು ಬಾಗ್ಲ್‌ಂದ ಹೊಕ್ಕಿ ಮೂಡ ಬಾಗ್ಲ್‌ಂದ ದಾಟಿ ಹೋದವೆ. ಹಂಗೆ ಹೋದರೂ ಹೋಗಲಿ. ಅವು ಹೋದಲೆಲ್ಲಾ ಹಿಕ್ಕೆ ಹಾಕಿ ನೋಡಿಕೆ ಬತ್ತದೆ. ಅಂಗ್ಳಂದ ಜಗುಲಿಗೆ ಹಾರಿ, ಜಗಲ್‌ಂದ ಕೈಯ್ಯಾಲೆಗೆ ಹಾರಿ, ಅಲ್ಲಿಂದ ಐಮರ ಮೇಲೆನೋ, ಕುರ್ಚಿ ಮೇಲೆನೋ, ಮೇಜದ ಮೇಲಿಸಿದ ಪುಸ್ತಕದ ಮೇಲೆನೊ ಕುದ್ದ್ 'ಪಚಕ್' ಮಾಡಿ ಹೋದವೆ. ಆ ಸಮಯಲೇ ಮನೆಗೇನಾರ್ ನೆಂಟ್ರ್‌ನಾಡ್ ಬಂದರಂತೂ ಅಯ್ಯೊಯ್ಯೊ ಈ ಕೋಳಿಗಳ್ಗೆ ಮಾರಿ ಬಡಿಯೆಕೆಂತ ಬಯ್ಯಂಡ್ ಪೇಚಾಡ್ತರ್ನ ನೀವೂ ನೋಡಿರುವರಿ.

ಕೆಲವು ಕೋಳಿಗ ಒಳಗೆ ನುಗ್ಗಿ ಹೊರಗೆ ಹೋಕೆ ದಾರಿ ಕಾಣ್ದೆ ಕಿಡ್ಕೆ, ಅಲ್ಲಿ-ಇಲ್ಲಿ ಹಾರಿಕೆ ನೋಡ್ವೆ. ಆಗಂತೂ ಅಲ್ಲಿದ್ದ ದೀಪ, ಎಣ್ಣೆ ಚರ್ಕ್, ಪಾತ್ರಗ, ಕನ್ನಡಿ ಎಲ್ಲಾ ಬಿದ್ ಚೂರ್ ಚೂರ್ ಆದೆ. ಹೂನ ಗಿಡ, ಮತ್ತೊಂದು ಗಿಡ ಬುಡಲೇ ಈ ಕೋಳಿಗಳ್ಗೆ ಮೇಚಿ. ಗಿಡಗಳ ಬೇರೆಲ್ಲಾ ಕೋಳಿ ಕೇರಿ ಮ್ಯಾಲೆ ಬಂದ್‌ಕಂಡ್ ಕೆಲವು ಸತ್ತೇ ಹೋದವೆ. ಅತ್ತ ಗಿಡಗಳೂ ಹಾಳ್, ಇತ್ತ ಅಕ್ಕಿ ಬತ್ತನೂ ಖಾಲಿ. ಆದರೆ ಈ ಅಜ್ಜಿಗೆ ಇದೆಲ್ಲಾ ಗೊತ್‌ಲೆ. ಒಟ್ಟಾರೆ ಮನೇಲಿ ಕೋಳಿ ಬೇಕು. ನೆಂಟಂಗೆ ಹೊಟ್ಟೆ ಒಡ್ದೋಗಂಗೆ ತಿನ್ಸಿರೂ 'ಒಂದು ಕೋಳಿ ಕೊಲ್ಲಿಕೆ ಬೊತ್ತಾತಂತ' ಗೊಣಗಿದೆಲ್ಲಾ! ಈ ಗೊಣ್ಗಾಟ ಸಾವ್ಗೆ ಬಂದ ದೊಡ್ಡ ರೋಗ. ಕೋಳಿ ನೆಂಟಂಗೂ ಬೇಕು, ದೆವ್ವಗಳಿಗೆ ಕೊಡಿಕೂ ಬೇಕು. ಮಳೆಗಾಲಲಿ

ಈ ದೆವ್ವಗಳಿಗೆ ಹೊರಗೆ ಹೋಕಾದ್ಲೆ. ಆಗ ಆ ದೆವ್ವಗಳಿಗೆ ಕಾರೋಣ (ಊಟ) ಕೊಡಿಕೂ ಕೋಳಿ ಬೇಕು. ಏನಿಲ್ಲರೆ ಮನೆಲಿ ಯಾರಿಗಾರ್ ಹೊಟ್ಟೆಬ್ಯಾನೆನೊ ವಾಂತಿನೊ ಆದರೆ ತಲೆ ಸುತ್ ತಂದ್ ಹರ್ಕೆ ಬುಡ್ಕೆನೂ ಕೋಳಿ ಬೇಕು. ಟೌನವು ಸೀದ ಆಸ್ಪತ್ರೆಗೆ ಹೋದವೆ. ಆದರೆ ಈ ದೆವ್ವಗ ಇರ್ದು ಹಳ್ಳಿಲಿ ತಾನೇ? ಟೌನಿಗೆ ದೆವ್ವಗ ಹೋದುಲೆ. ಯಾಕೆ ಗೊತ್ತುಟಾ? ಅಲ್ಲಿ ವಾಹನಗ ವಿಪರೀತ, ಕರೆಂಟ್ ದೀಪ, ಅಶುದ್ಧ ಗಾಳಿ, ಮತ್ತೆ ಅಲ್ಲಿ ಇರೋವು ಯಾಗೋಳು "ಬಿಝೀ" ಪಾಪ! ಈ ದೆಯ್ಯ ಅಲ್ಲಿಗೆ ಹೋದರೆ ಮೂಸವೂ ಇಲ್ಲೆ. ಹಾಂಗಾಗಿ ದೆವ್ವಗ ಹಳ್ಳಿಬುಟ್ ಮಸುಗುದ್ಲೆ. ಈ ಅಜ್ಜಿದ್ ಕೋಳಿ ಕಥೆ ಕೇಳಿ....

ಆ ಚುಳ್ಳುಚುಳ್ಳು ಹೇಂಟೆ ಇಪ್ಪತ್ತೊಂದು ಮೊಟ್ಟೆ ಹಾಕಿತ್. ಇನ್ ಕಾಪು ಕೂರಿಕೆ ಡಕ್‌ಡಕ್‌ಂತೇಳ್ಕಂಡ್ ಕಾಪುಗೆ ಹಾರಿ ಕೂರಿಕೆ ಹೋತು. ಆದರೆ ಅಜ್ಜಿಮಾತ್ರ ಸುತಾರಾಂ ಆ ಹೇಂಟೆನ ಕಾಪು ಕೂರಿಕೆ ಬುಡ್ಕಿಲೆ. ಯಾಕೆ ಗೊತ್ತುಟಾ? ಅದ್ ಕಾಪು ಕುದ್ದರೆ ಮೊಟ್ಟೆ ಹಾಕುದು ತಡಾ ಅದೆಲ್ಲ, ಅದ್ಕೆ.

ಕಾಪು ಕೂರದಂಗೆ ಏನೆಲ್ಲಾ ಉಪಾಯ ಈ ಅಜ್ಜಿನಕ್ಕಲೆ ಉಟ್ಟು, ನೋಡಿ. ಕೆಲವು ಅಯ್ಯೆಕ ಕೂಸಿಗೆ ಹಾಲ್ ಮರ್ಸಿಕೆ ಏನೇನೊ ಮಾಡಿವೆ. ಹುಳಿ ನೀರ್, ಬೇವಿನೆಣ್ಣೆ, ಹಾಗಲ ಸೊಪ್ಪು ರಸ, ಗಿಣಿಕೆ ಸೊಪ್ಪು ರಸನೆಲ್ಲ ಉಜ್ಜಿಕಂಡವೆ. ಕಡೆಗೂ ಈ ಕೂಸು ಹಾಲ್ ಕುಡಿಯಕೆ ಪೇಚಾಡ್ರೆ ದನಗಳ ದೊಡ್ಡಿಗೆ ಹಾಕುವೆಲ್ಲ, ಹಂಗೆ ತಕಂಡೋಗಿ ತೌರು ಮನೆಲಿ ಬುಟ್ಬುಟ್ಟವೆ. ಇಲ್ಲಿ ಕೇಳಿ: ಈ ಅಜ್ಜಿ ಕೋಳಿನ ಹಿಡ್ಕಂಡ್ ಎರ್ಡೂ ರೆಕ್ಕೆಗಳ ಹಿಂದಕ್ಕೆ ಕಟ್ಟಿತ್. ಆ ಹೇಂಟೆ ವಿಮಾನ ನಿತ್ತ ಮೇಲೆ ಕಂಡದಲ್ಲಾ ಹಂಗೆ ಕಾಂಬಕೆ ಸುರಾತ್. ಆ ಬ್ಯಾನೆಲಿ ಅದ್ ಹೆಂಗಿತ್ತೊ? ಈ ಶಿಕ್ಷೆನೂ ಸಾಲ್ದಂತ ಮತ್ತೇನ್ ಮಾಡ್ತ್? ಹೇಂಟೆನ ತಕಂಡೋಗಿ ನೀರ್ಲಿ ಮುಳ್ಗಿಸಿತ್. ಆದ್ರೂ ಹೇಂಟೆ 'ಕೊರ್ರೇ ಕೊರ್ರೇಂ'ತೇಳ್ದು ಬುಟ್ಟತ್ಲೆ. ಮತ್ತೆ ಮನೆ ಹಿಂದೆ (ಉಂಬೊಳಗೆ ಹಕ್ಕಲೆ) ಕೆಸರ್ ನೀರ್ ಇದ್ದದಲ್ಲಾ (ಹಂದಿಗ ಬಿದ್‌ಕಂಡ್ ಇದ್ದವೆ ನೋಡಿ ಅಲ್ಲಿ) ಅಲ್ಲಿ ಹೇಂಟೆನ ಮುಚ್ಚಿತ್. ಪಾಪ, ಆ ಹೇಂಟೆ ಅಲ್ಲಿ ಸಿತ್ ನಿತ್ ಕಾಲ್ ಬಚ್ಚಿ ಹೋತು. ಕೂರಿಕು ಬತ್ತದೆ. ನಿಲ್ಲಿಕೂ ಆಕಿಲೆ. ಆದ್ರೂ ಡಕ್‌ಡಕ್‌ಂತೇಳ್ಕಂಡೇ ಇತ್. ಮತ್ತೆ ಅಜ್ಜಿ ಏನ್ ಮಾಡ್ತ್? ಕೋಳಿನ ಹಿಡ್ಕಣ್ತ್, ಒಂದ್ ರೆಕ್ಕೆಂದ ಒಂದ್ ಗರಿನ ಕಿತ್ತತ್. ಅದೇ ಗರಿನ ಅದ್ರ ಮೂಗಿಗೆ ಅಡ್ಡಡ್ಡ ಚುಚ್ಚಿತ್. ನೀವು ನಾನಾ ನಮೂನೆ ಮೀಸೆ ನೋಡಿರ್ರ್ವರಿ. ಕಡ್ಡಿ ಮೀಸೆ, ಕಂಬಳಿ ಹುಳ ಮೀಸೆ, ಚಾರ್ಲಿ ಚಾಪ್ಲಿನ್ ಮೀಸೆ, ಕೊಂಬ ಮೀಸೆ, ಫ್ರೆಂಚ್‌ಕಟ್ ಮೀಸೆ, ಪೊದೆ ಮೀಸೆ. ಈ ಅಜ್ಜಿನ ಕೋಳಿಗೆ ಬಂದದ್ ಕಡ್ಡಿ ಮೀಸೆ. ಈಗ ಹೇಂಟೆ ಕಾಪುಗೆ ಹಾರಿ ಕೂರಿಕೆ ಬತ್ತದೆ ನರ್ಕ ಬಂದದೆ. ಇದರ್ನ ನೋಡ್ದ ಪಿಳ್ಳೆಕಳಿಗೆ ನಗೆಯೋ ನಗೆ. ಅಜ್ಜಿ ಕೋಳಿಗೆ ಮೀಸೆ ಬಂದುಟು ಢಂ ಢಂ ಢಂ. ಪಾಪ! ಕೋಳಿಗೆ ಪಿಳ್ಳೆಗಳ ಕಾಂಬಾಸೆ, ಅಜ್ಜಿಗೆ ಮೊಟ್ಟೆ ತಿಂಬಾಸೆ.

ಒಂದ್ ಇರ್‍್ಳ ಹುಂಜ ಕೊರ್ರ್ರೇ ಕೊರ್ರ್ರೇಂತ ಕೂಗ್ತಾ ಇತ್. ಆ ಸಮ ಇರ್‍್ಳಲಿ ಅಜ್ಜಿ ಒಬ್ಬಳೇ ಕೋಳಿ ಗೂಡಿಗೆ ಹೋತು. ಹುಂಜ ಗೂಡೊಳಗೆ ಬಿದ್‌ಕಂಡ್ ಒದ್ದಾಡ್ದೆ. ಪೆರ್ಪಣಮನಿ ಬಾತಾಂತೇಳಿಕಂಡ್ ಚೂಕೂಡ್ದೆ. ನಾಯಿಗ ಅಲ್ಲಿ ಇಲ್ಲಿ ಬೊಗಳಿಕಂಡ್ ಓಡಾಡ್ತಾ ಇದ್ದೊ. ಸೊಲ್ಪ ಹೊತ್ತಾತಕನ ಹುಂಜ ಮಾಮೂಲಿ ಕೂರುವಂಗೆ ಕುದ್‌ಕಂಡತ್. ಅಜ್ಜಿ ಕೂಡ್ಲೆ ಒಂದ್ ಲಾಕಿನ ಸಂಚಾರ ಗುಳಿಗಂಗೆ ಹರಿಕೆ ಹೇಳಿಕಂಡತ್. ಅಲ್ಲಿ ಆದ್ ಏನ್‌ಂತೇಳಿರೆ ಆ ಹುಂಜಕ್ಕೆ ಕನ್‌ಸ್ಸ್! ಕುದುಕ ಹಿಡ್ದಂಗೆ ಕನ್‌ಸ್ ಬಿದ್ದಿದ್ದುರ್, ಅಷ್ಟೆ! ನಿವ್‌ಗೆ ನಗೆ ಬಾದು. ಹೋಗಿ ಹೋಗಿ ಕೋಳಿಗೆ ಕನ್ಸ್ ಬಿದ್ದದೆಯಾಂತ. ನಿದ್ದೆ ಮಾಡುವ ಪ್ರತಿ ಜೀವಿಗೂ ಕನಸ್ ಉಟ್ಟೇ ಉಟ್ಟು. ಈ ವಿಚಾರ ಅಜ್ಜಿಗೆ ಗೊತ್ತಾಗದೆ ಸಂಚಾರ ಗುಳಿಗ ಚಾನ್ಸ್ ಹೊಡ್ತ್.

ಅಜ್ಜಿಗೆ ಬೇಜಾರಾತ್. ಯಾಕೆಂತೇಳಿರೆ ಕೋಳಿ ಇಷ್ಟೆಲ್ಲಾ ರಂಪ ಮಾಡ್ಕನ "ಜೀವಂತ ಇದ್ದ ಮನೆಯವು" ಯಾರೊಬ್ಬರೂ ಎದ್ದತ್‌ಲೆ. "ನೀವುಗೆ ಮಾಡಿ ಇಕ್‌ಕನ ತಲೆಬೇಕು, ಕಾಲ್ ಬೇಕು, ಪಟ್ಟೆಕಾಯಿನೇ ಬೇಕು, ಕರಿಯಡನೇ ಬೇಕು, ಪುಕ್ಕಗೆಂಡೆನೇ ಬೇಕು. ನಿಮ್ಮ ದೊಂಡೆಗೇಂತ" ಬಯ್ಕಂಡ್ ಬಂದ ಅಜ್ಜಿ ಸುಮ್ಮನೆ ಮಲಗಿತ್.

*"ದುಡಿಯೊದು ಯಾರೋ, ತಿಂಬೊದು ಇನ್ಯಾರೋ"*

# 26. ಚಾಮೆವ್ವನಕ್ಕಲೆ ನಾಕ್ ಮಾತ್

**ಹಿರಿಯರಕ್ಕಲೆ** ಮಾತಾಡ್ದು, ಅವ್ರ ಅನುಭವನ ಕೇಳ್ದೆಲ್ಲಾ ಒಂಥರಾ ಖುಷೀ ಆದೆ. ಒಂದಿನ ಅವರೊಟ್ಟಿಗೆ ಮಾತಾಡಿರೆ ಒಂದು ಕಾದಂಬರಿ ಓದಿದಂಗಾದೆ. ಹಿಂಗೆ ಗ್ಯಾನ ಮಾಡ್ದ ನಾನ್ ಯಾವ ಹಿರಿಯರೊಟ್ಟಿಗೆ ಮಾತಾಡ್ದಪ್ಪಾಂತ ಹಂಗೇ ಕುದ್ದಿದ್ದೆ. ಆಗ ನಮ್ಮ ಚಾಮೆವ್ವನ ಗ್ಯಾನಾತ್. ಚಾಮೆವ್ವನಲ್ಲಿ ಕರೀ ಕಾಫಿ ಕುಡಿಯದೆ ತುಂಬಾ ದಿನಾಗಿತ್. ಹೆಂಗೂ ಮಳೆ ಬೇರೆ. ಹೋಗಿ ಬಿಸಿ ಬಿಸಿ ಕಾಫಿ ಕುಡ್ದ್ ನಾಕ್ ಲಾಯ್ಕ ಪಟ್ಟಾಂಗ ಹೊಡೆಯಸೋಂತ ಹೋದೆ. ಅವರ ಮನೆನೋ ತುಂಬಾ ದೂರ ಬೇರೆ. ಯಾರ್‍ಯಾರ್ದೋ ಗದ್ದೆ ದಾಟಕು. ಆ ಗದ್ದೆ ಪುಣಿಯೋ ಮಂಡಿಗಂಟ ಹೂಣ್‌ದೆ. ಹೆಂಗೋ ಕಾಲ್ ಎಳ್ಕಂಡ್ ಮುಂದೆ ಹೋದರೆ ಯಾಲ ತೋಟದೊಳಗೇ ಹೋಕು. ಆ ದಾರಿಯೋ ಬರೀ ಉಂಬುಳುಗಳ ಸಾಮ್ರಾಜ್ಯ! ಅಲ್ಲಿಂದ ಮುಂದೆ ಸುಮಾರ್ ಹದ್ನಾಕ್ ಕಡ್ಕಲ್‌ಗಳ ದಾಟೊಕು. ಮಂಟಿ ಹತ್ತಿ ಇಳ್ದ್ ತೋಡು ದಾಟಿ ಹಟ್ಟಿಕರೇಲಿ ಹೋದರೆ ಆಚೆ ಕರೆ ಬೆಟ್ಟದ ಬುಡಾಲಿ ಕಾಂಬೊದೇ ಚಾಮೆವ್ವನ ಮನೆ. ಈ ದಾರಿದ್ ದೂರ ಗ್ಯಾನ ಮಾಡಿರೆ

ಕುದ್ಬಲ್ಲೆ ಜರ ಬಾದು. ನಾನ್ ಉಪ್ ಅಪ್ಪಾಂತ ಬುಸ್‌ಗುಟ್ಟಿಕಂಡ್ ಅವರ ಮನೆ ಅಂಗಳಲಿ ನಿತ್ತೆ. ನಾಯಿ ನನ್ನ ಕಂಡ್ ಬುಕ್ ಬುಕ್ ಬೌವ್ವೋಂತ ಬೊಗಳಿಕಂಡ್ ಹೆದ್ರಿ ಮನೆ ಬುಟ್ ಗದ್ದೆ ಕಡೆ ಓಡಿ ಹೋತು.

ನಾಯಿ ಬೊಗುಳುದು ಕೇಳಿ ಮನೆಯವು ಒಳಗೆಂದ ತಲೆ ಮಾತ್ರ ಹೊರಗೆ ಹಾಕಿ ನೋಡ್ದೊ. ಹಾಳ್ ಸಳಿ ಬೇರೆ. ಮನೆಯವು ಹಸ್ನಕ್ಕಿ ಹೊರಿತಿದ್ದೊ ಏನೋ? ಬಾಯಿ ನೊಣಚಿಕಂಡೇ ಬಂದವ್ ನನ್ನ ಕಂಡ್ ದೆಯ್ಯಬುಟ್ಟವರಂಗೆ ನೆಟ್ಟಂಗಾದೊ. ಓ ಬನ್ನಿ ಬನ್ನಿಂತ ಕರ್ದೊ. ನಾನ್ ಮನೆಗೆ ಹತ್ತಿ ಕುದ್‌ಕಂಡೆ. ಅಷ್ಟೊತ್ತಿಗೆ ನೀರ್‌ಗೀರ್ ಬಾತ್. ಕಾಲ್ ಕೈ ಹಿಡ್ದಾತ್. ಸೌಖ್ಯಾಂತೆಲ್ಲಾ ಕೇಳ್ದೊ.

ನಂಗೆ ಚಾಮೆವ್ವನ ಕಾಂಬ ಆತುರ. ಚಾಂಪ ಆ ಮನೇಲಿಲ್ಲೆ. ದೊಡ್ಡ ಮಜನೊಟ್ಟಿಗೆ ಬೆಂಗ್ಳೂರ್ಲಿ ಇರುದುಂತ ನಂಗೆ ಗೊತ್ತಿತ್. ಅದ್ಕೆ ಚಾಮೆವ್ವ ಎಲ್ಲಿಂತ ಆ ಮನೆ ಸೊಸೆನ ಕೇಳ್ದೆ. "ಬಿದ್‌ಕಂಡುಟ್ಟುಂತ" ಸೊಸೆ ಹೇಳ್ತ್. "ಓಹೋ ಅತ್ತೆಗೂ ಸೊಸೆಗೂ ಯುದ್ಧ ಆಗುಟುಂತ" ನನ್ನ ಪಂಚಾಂಗ ಹೇಳ್ತ್. ಅಷ್ಟೊತ್ತಿಗೆ ಚಾಮೆವ್ವನೇ ಬಗ್ಗಿಕಂಡ್, ದೊಣ್ಣೆ ಕುತ್ತಿಕಂಡ್ ಬಂದ್ "ಯಾರ್? ನಂಗೆ ಗೊತ್ತಾತ್‌ಲೆಂತ" ಕೇಳ್ತ್. ಆಗ ನಾನ್ ಹಿಂಗೆ ಹಿಂಗೆಂತೆಲ್ಲಾ ನನ್ನ ಪರಿಚಯ ಹೇಳಿಕಂಡೆ. ಓ ಬಾಳಾ ದಿನಾತ್ ನಿನ್ನ ನೋಡದೆ. ಹೆಂಗೊಳಾ? ಚಾಕರಿಲಿ ಒಳಾಂತೆಲ್ಲಾ ಕೇಳ್ತ್.

ನೀವ್ ಹೆಂಗೊಳರಿ ಚಾಮೆವ್ವಾಂತ ನಾನ್ ಕೇಳ್ದೆ.

"ಅಯ್ಯೋ ಕಣ್ಣೂ ಕಾಂಬೊದುಲೆ, ಕೆಮಿನೂ ಕೇಳುದುಲೆ. ಊರು ಹೋಗೂಂತ ಹೇಳ್ತಾ ಉಟ್ಟು. ಕಾಡ್ ಬಾಂತ ಕರಿತಾ ಉಟ್ಟು. ಒಮ್ಮೆ ಕಣ್ ಮುಚ್ಚಿದ್ದರೆ ಸಾಕಾಗಿತ್. ಯಾವ ಸುಖಕ್ಕೆಂತ ನಾ ಇನ್ನೂ ಒಳದೋ. ಹರಶಿವಾಂತ ಹೇಳಿರೂ ನಿದ್ದೆ ಬಾದುಲೆ. ಊಟನೂ ಸೇರುದುಲೆ. ಹಾಳ್ ಸೊಂಟ ಬೇರೆ ಬ್ಯಾನೆ. ಚಾಂಪ ಬೇರೆ ಬೆಂಗ್ಳೂರ್‌ಗೆ ಹೋಗಿ ಈ ಕೈಲ್‌ಪೋದ್ ಬಂದರೆ ವರ್ಷ ಎರಡಾತ್. ಇರ್ಲ್ಲಿ ಹಗಲೂ ಆಗಾಗ 'ಹೊರಗೆ' ಹೋಕು. ಈ ವಯಸ್‌ಲಿ ಆಗಾಗ ಹೊರಗೆ ಹೋದು ಕಷ್ಟ ಆದೆ. ಎಲ್ಲಕ್ಕೂ ತೋಟದ ಕಡೆಗೇ ಹೋಕು. ಈ ಮನೆ ಸೋಂಬೇರಿಗಳಿಗೆ ಹೇಳ್ದೆ "ಮನೇಲೇ ಒಂದು ಕಕ್ಕಸ್ ಮನೆ ಕಟ್ಟಿಕಣೀಂತ" "ಥೂ, ಮನೆಯೊಳಗೆ ಹೇಸಿಗೆ ಮಾಡಿಕಂಡಿವೆಯಾಂತ" ಹೇಳಿವೆ. ಇವುಕೆ ಒತ್ತಿಕಂಡ್ ಬಾಕನ ತಿಂಬೊದುನ ಬುಟ್ ತೋಡ್ ಕಡೆ ಓಡಿವೆ. ಅಲ್ಲಿ ಕಲ್ ಮೇಲೆ ಕುದ್ ಬಂದವೆ. ಹರಿವ ನೀರಿಗೆ ಕಟ್ ಇಲ್ಲೆಂತ ನೀರ್‌ನೆಲ್ಲಾ ಗಲೀಜ್ ಮಾಡಿವೆ. ಯಾರ್ ಹೇಳ್ದು ಇವುಕೆ? ಬಚ್ಚಲ್ ಮನೆ ಉಟ್ಟಾ? ಅದೂ ಇಲ್ಲೆ. ತೋಡು ಕರೇಲಿ ನೀರ್ ಕಾಸಿಕೊಂಬೊದು ಕತ್ತಲಾದ ಮೇಲೆ ಮೀಯೊದು. ಮಳೆಗಾಲಲಿ ಇಲ್ಲೆ ಜಗಲಿ ಮೇಲೆ ನಿತ್‌ಕಂಡ್ ನೀರ್ ಹೊಯ್ಕಂಡವೆ........ಅಯ್ಯೋ ಅಣ್ಣಾ ಹೇಳಿಕೆ ಹೋದರೆ ದಿನ

ಬೆಳಗಾದು. ನಾನೆಲ್ಲಾ ಮಾಡ್ತಾ ಇದ್ದ ರೊಟ್ಟಿ ಆನೆ ಮೆಟ್ಟಪ್ಪಗಲ ಇರ್ತಾ ಇತ್ತ್. ಈಗ? ಅಂಗೈ ಅಗಲ. ಅದ್ ಮಿಸ್‌ನ್ ರೊಟ್ಟಿ ಬೇರೆ. ಹತ್ ರೊಟ್ಟಿ ತಿಂದರೂ ಹೊಟ್ಟೆ ತುಂಬಿಕಿಲ್ಲೆ, ಎಲ್ಲಾ ಶೋಕಿ ಆಗೋವುಟು. ಹಣೆಗೆ ಕುಂಕುಮ ಹಾಕ್ತಾ ಇದ್ದೋ. ಈಗ? ಎಂಥದೋ ಅಂಟಿಸಿಕಂಡವೆ. ಮೊಖ ತೊಳೆಕನ ಅದರ್ನ ಕಿತ್ ಮಡಿಕೆಗೋ, ಗೋಡೆಗೋ, ಕನ್ನಡಿಗೋ ಅಂಟಿಸಿಟ್ಟವೆ. ಮತ್ತೆ ಪುನಃ ಅದರ್ನೇ ಕಿತ್ತವೆ. ಹಣೆಗೆ ಅಂಟಿಸಿಕಂಡವೆ. ಕೈಗೆ ಬಳೆ ಉಟ್ಟಾ? ಒಂದ್ ಕೈಗೆ ವಾಚಿ. ಇನ್ನೊಂದ್ ಕೈಗೆ ಒಂದೋ ಎರಡೋ ಬಳೆಗ. ನನ್ನ ಈ ಮಾತ್ ಕೇಳಿರೆ ಈಗನವು "ಆ ಮುದಿಗೇನು ಗೊತ್ತುಂತ" ಬಯ್ಯುವೊ. ಬಯ್ಯಲಿ, ನಾನೇನು ಇಲ್ಲದ್ ಹೇಳ್ತಲೆಲ್ಲಾ?

ನಾ ನನ್ನ ಎಲ್ಲಾ ಮಕ್ಕಳಿಗೆ ಎದೆಹಾಲ್ ಪೂರ್ಲುಲಿ ಕುಡ್ಸಿಯೊಳೆ. ನನ್ನ ಹಿರಿ ಮಜ ಇಸ್ಕೂಲ್‌ಂದ ಬಂದ್ ಸಾನ ಎದೆ ಹಾಲ್ ಕುಡೀತಿತ್. ಕಾಯ್ಲೆಂತೇಳ್ವ ಆ ಹೈದಂಗೆ ಬಾತ್‌ಲೆ. ಈಗ ನೋಡಿ. ಕೂಸ್ ನೆಗಾಡಿಕೆ ಶುರು ಮಾಡ್ರೊತ್ತ ಇಲ್ಲೆಯೋ ಹೊತ್‌ಕಂಡ್ ಹೋಗಿ ತೌರ್‌ಲೋ, ಇನ್ನೆಲ್ಲೋ ಕೂಸ್‌ನ ಹಾಲ್ ಮರ್ಸಿಕೇಂತ ಬುಟ್‌ಬುಟ್ಟವೆ. ಆ ಕೂಸು ಪಾಪ! ಗ್ಯಾನ ಮಾಡಿ ಗ್ಯಾನ ಮಾಡಿ ಮರ್ಪ್ ಮರ್ಪ್ ಲಾಚಾರಾದೆ. ಇತ್ತ ಅಯ್ಯೆ ಎದೆ ಬೇನೆ ಎದೆ ಬೇನೇಂತ ಓಡಾಡ್‌ದೆ. ಇವ್ರ ಒಂದೊಂದ್ ಆಟ ನೋಡಿರೆ ನಗೆ ಬಂದದೆ. ಈಗನ ಜನಗ ಯಾಕಾದವೆ ಹೇಳಿ? ಹೆಣ್ ಅಕ್ಕಿ ಕಡೆಕನ ಗಂಡ ಗಾಳಿ ಹಾಕೋಕು. ಗಂಡ ನಾಟಿ ನೆಟ್ ಬಂದರೆ ಅವನ ಸೊಂಟಕೆ ಹೆಣ್ ರಾಗಿ ಕಲ್‌ನ ಇಸೊಕು. ಈ ಸೊಸೆ ತುಂಬಾ ಸೋಬೆ. ಗೋಣಿಕೊಪ್ಪಲಿ ಮಳೆ ಬಂದರೆ ಬೆಟ್ಟತ್ತೂರ್‌ಲಿ ನೆಗಡಿ! ಪೊನ್ನಂಪೇಟೆಲಿ ಗಾಳಿ ಬೀಸಿರೆ ಸೋಮವಾರಪೇಟೆಲಿ ಚಳಿ. ಹಂಗೆ ಇರುವ ಸೊಸೆ ಇವ್ಳು. ಬೆಳಿಗ್ಗೆ ಇವು ಏಳುದೋ ಬಿಸಿಲ್ ಬಂದ್ ಹಾಸಿಗೆಗೆ ಬಡಿಯೊಕು. ಎದ್ದವು ಅರ್ಧ ಗಂಟೆ ಸುಮ್ಮನೆ ಒಲೆ ಬುಡಲಿ ಕುದ್ದವೆ. ನಿದ್ದೆ ಮಾಡ್ದ ಸುಸ್ತುಗಡ! ವರ್ಷದ ಸೌದೆ ಮಾಡುದು ಮಳೆಗಾಲ ಸುರಾದ ಮೇಲೆ. ಅಲ್ಲಿವರೆಗೆ ಅಲ್ಲಿ ಮೊದುವೆ ಇಲ್ಲಿ ಜಂಬರಂತ ತಿರುಗುದೊಂದೆ. ಕೊಟ್ಟುವ ಸದ್ದು ಕೇಳುವಲ್ಲಿಗೆಲ್ಲಾ ಕಾಲ್ ತೆಗಿತಾ ಇದ್ದವೆ. ಗಂಡನೂ ಹಂಗೆ. ಹೆಣ್ಣೂ ಹಂಗೆ. ತಕ್ಕಡಿಗೆ ಹಾಕಿರೆ ಸಮಾ ಆವೊ. ಇವೆಲ್ಲಾ ಬದುಕ್ ಮಾಡಿಕೆ ಇರೊವಾ?

ಚಾಮೆವ್ವನ ಮಾತ್ ಕೇಳಿ ಕೇಳಿ ನಂಗೆ ಒಂಥರಾ ತಕುಪುಕು ಸುರಾತ್. ನಾ ಬೇರೆ ಅವ್ರ ಮನೆಗೆ ಹೋಗಿ ಸಿಕ್ಕಿ ಹಾಕೊಂಡೊಳೆ. ಚಾಮೆವ್ವನೋ ಆ ಮನೆ ಜನಕ್ಕೆಲ್ಲಾ ಬಯ್ತಾ ಉಟ್ಟು. ನನ್ನಂದಾಗಿ ಈ ಮನೇಲಿ ಜಗಳ ಆದು ಬ್ಯಾಡಂತ ಗ್ಯಾನ ಮಾಡಿ "ಚಾಮೆವ್ವ ನೀವ್ ಸ್ವಲ್ಪ ಸಮಾಧಾನ ತಕಣೊಕು." ಈಗನ ಕಾಲದವು ಮಾಡುದು ನಿಮಿಗೆ ಸರಿ ಕಾಂಬಕಿಲ್ಲೆ. ನೀವು ಹೊಂದಿಕಂಡ್ ಹೋಗಿ. ನಾ ಇನ್ನೊಮ್ಮೆ ಬನ್ನೆಂತೇಳಿ ಹೊರಡ್‌ಕಾಕನ ನಾ ಬಯಸಿದ್ದ ಕರಿ ಕಾಫಿನ ಸೊಸೆ ತಂದ್ ನನ್ನ ಮುಂದೆ ಕುಕ್ಕಿತ್. ಓಹೋ ಎಲ್ಲವೂ ರಾಂಗ್ ಆಗಿಯೊಳೋಂತೇಳಿ ಕೊಟ್ಟದ್‌ರ್ನ ಬೇಗ ಬೇಗ ಕುಡ್‌ದೆ. ಬೆಳಿಗೆ ಕಾಸಿದೋ ಏನೋ. ಜಂಡ್ ಜಂಡಾಗಿತ್.

ನಾ ಒಂದ್ ಕ್ಷಣ ಗ್ಯಾನ ಮಾಡ್ದೆ. ಈ ಚಾಮೆವ್ವಂಗೆ ಇಷ್ಟ್ ಸಿಟ್ ಇವರ ಮೇಲೆ ಯಾಕಾಗಿ? ಏನೋ ಚಿಂತೆ ತುಂಬಿಕಂಡುಟ್ಟು. ಚಾಂಪ ಯಾಗ ಬಾದು ಚಾಮೆವ್ವಂತ ಕೇಳ್‌ಕನ ಚಾಮೆವ್ವನ ಕಣ್‌ಲಿ ನೀರ್ ಬಂದರ ನಾ ನೋಡ್ದೆ. ನನ್ನ ಮನ್ಸಿಗೆ ತುಂಬಾ ಬೇಜಾರಾತ್. ಜೋಡಿ ಹಕ್ಕಿಗ ಕಡೆವರೆಗೂ ಜೋಡಿಯಾಗೇ ಇರೋಕು. ಅಪ್ಪನ ಒಂದ್ ಕಡೆ ಅವ್ವನ ಒಂದ್ ಕಡೇಂತ ಮಕ್ಕ ಪಾಲ್ ಮಾಡಿಕಂಬಕಾಗದ್. ಅವು ಸಾಯೋಮುಟ್ಟ ಒಟ್ಟಿಗೆ ಇದ್ದರೆ ಅವರ ಬಾಳೊಂದು ಚಿನ್ನ. ಮನಶಾಸ್ತ್ರದ ಪ್ರಕಾರ ಅಜ್ಜಿಯಾದರೂ ಅವು ದಂಪತಿಗಳೇ. ಅವು ಕಡೆವರೆಗೂ ಜೊತೆಯಾಗಿಯೇ ಇರೊಕು. ಜಗಳಾಡಿಕಂಡ್, ತಮಾಷೆ ಮಾಡಿಕಂಡ್ ಅವು ಕಾಲ ಕಳೆಯಲಿ. ಅವರ ಆಯುಷ್ಯ ಸೊಲ್ಪ ಹೆಚ್ಚುದು.



# 27. ಅರ್ಧಕ್ಕೆ ಬುಟ್ಟ ಮೀನ್ ಬೇಟೆ

**ಒಂದಿನ** ಒಬ್ಬ ನಂಟ ಮನೆಗೆ ಬಂದಿತ್. ರಾತ್ರೆದ್ ಊಟ ಆತ್. ಎಲಡಿಕೆ ಹಾಕಂಡ್ ಅದ್ ಇದ್ ಮಾತಾಡಿಕಂಡಿರಕನ ನಂಟ ನಾ ಒಂದ್ ಕಥೆ ಹೇಳ್ನೆತ ಬೇಸಗೆಲಿ ಒಮ್ಮೆ ಹೊಳೆಗೆ ಮೀನ್ ಹಿಡೆಕೆ ಹೋದ ಕಥೆನ ಹೇಳಿಕೆ ಸುರು ಮಾಡ್ತ್. ಮಕ್ಕ ಮುದ್ದೆಯಾಗಿ ಅವ್ವಂಗೆ, ಅಪ್ಪಂಗೆ, ನಂಟಂಗೆ ಅಂಟಿಕಂಡ್ ಕುದ್ರೊ.

ನಂಟ ಕಥೆ ಹೇಳಿಕೆ ಸುರ್‌ಮಾಡ್ತ್. ಒಂದ್ ಇರ್ಲ್ಲ ಒಂದ್ ಮನೆವು ಸ್ವಲ್ಪ ಬೇಗ ಊಟ ಮುಗ್ಸಿದೊ, ಮೀನ್ ಬೇಟೆಗೆ ನಾಕ್ ಜನ ಹೊರ್ಟ್ರೊ. ಆದರೆ ಮೀನ್ ಹಿಡೆಕೆ ಸರಿಯಾದ ಬಲೆ ಇತ್‌ಲೆ. ಎಂಥ ಮಾಡ್ದು? ನೈಲಾನ್‌ದ್ ಸೊಳ್ಳೆ ಪರದೆನ ತಕ್ಕಂಡೊ. ದಪ್ಪ ಕಾಣಂಗೆ ಹಣೆಗೆ ವಿಭೂತಿ ಹಾಕಂಡೊ. ಕತ್ತಿ, ಒಂದ್ ಚೀಲ, ಗಾಜಿಪಾತ್ರ ತಕ್ಕಂಡೊ. ಸೂಟೆ ಹೋಸಿಕಂಡೊ. ಊರಿಗೆ ಊರೇ ನಿದ್ದೆ ಮಾಡ್ತಾ ಇರುವ ಹೊತ್ತು. ಈ ಸೂಟೆ ಬೆಳ್‌ಕ್ ಕಾಂಬಕನ ನಾಯಿಗ ರಾಗ ಸುರು ಮಾಡ್ದೊ. ಹೊಳೆ ಕರೆಗೆ ಹೋದೊ. ಇಬ್ಬರು ನೀರಿಗಡ್ಡ ಸೊಳ್ಳೆ ಪರದೆನ ಹಿಡ್ದೊ. ಒಬ್ಬ ಸೂಟೆ ಹಿಡ್ಕಂಡ್ ದೊಣ್ಣೆನ ನೀರೊಳಗೆ ಕುಟ್ಟಿಕಂಡ್ ಕುಟ್ಟಿಕಂಡ್ ಬಲೆ ಹಿಡ್ದವರ ಕಡೆಗೆ ಹೋತಿತ್. ಮೀನ್‌ಗ ಹೆದ್ರಿ ಬಲೆಕಡೆ ಹೋತಿದ್ದೊ. ಬಲೆ ಎತ್ತಿ ನೋಡಿರೆ ಕೆಲವು ಹೊಡಿ ಪೊಡಿ ಮೀನ್‌ಗ ಒದ್ದಾಡ್ತಾ ಇದ್ದೊ. ಹೆರ್ಕಿ ಹೆರ್ಕಿ ಪಾತ್ರೆಗೋ, ಚೀಲಕ್ಕೊ ಹಾಕಣ್‌ತಾ ಇದ್ದೊ. ಹಿಂಗೆ ಸುಮಾರ್ ಒಂದರ್ಧ ಗಂಟೆ ಕಳ್ದಿರ್ದು. "ಆ ಕಡೆ ಗುಂಡಿ ಜಾಸ್ತಿ. ಅತ್ತ ಪೋಯಿ, ಒಳ್ಳ ಬಾಳೆ ಮೀನ್‌ಗ ಸಿಕ್ಕುವೋಂತ" ಒಬ್ಬ ಹೇಳ್ತ್. ಹಂಗೆ ಅತ್ತ ಅತ್ತಳೇ ಹೋಗಿ ಗುಂಡಿಕಡೆ ಎತ್ತಿದೊ. ಇನ್ನೊ ಅತ್ತ ಪೋಯಿತ ಹೇಳ್ತಾ ಇತ್. ಆಸೆ ಮುಂದೆ ಆಳ ಎಷ್ಟಾದರೇನ್? ದೊಡ್ಡ

ದೊಡ್ಡ ಮೀನ್ ಸಿಕ್ಕರೆ ಒಳ್ಳ ಗೌಜಿ ಮಾಡ್ನೊತ ಹೇಳಿಕಂಡ್ ಅತ್ತತ್ತಳೇ ಹೋದೊ. ಹಂಗೇ ಹೋಗ್ತಾ ಇರಕನ ಒಬ್ಬ ಇನ್ನೊಬ್ಬನ ಕಡೆಗೆ ನೀರ್ ಚೇಂಪ್‌ತಾ ಇತ್. "ಏಯ್ ನಿಂಗೆ ಸೊಯ ಉಟ್ಟಾ ಮಾರಾಯ. ಮುಂದೇ ನಾ ಚಂಡಿ ಆಗೊಳೆ. ಪುನಾ ಚಂಡಿ ಮಾಡ್ಬೇಡಾ"ಂತ ಹೇಳ್ತಾ ಇತ್. ಆದರೂ ಅಂವ ನೀರ್ ಚೇಂಪ್‌ತನೇ ಇತ್. ಹಂಗೆ ಚೇಂಪುತಾ ಇದ್ದಂವ ಯಾರ್? ಕತ್ತಲೆ ಇದ್ದ ಕಡೆಂದ ನೀರ್ ಇವನ ಮುಂದೆ ಬೀಳ್ತಾನೇ ಇತ್. ಹಂಗೆ ಚೇಂಪುತಾ ಇದ್ದಂವ ಯಾರ್‌ತ ಸರಿಯಾಗಿ ಕಾಣ್‌ತಾ ಇತ್‌ಲೆ. ಜೊತೆಗಾರರ್ ಮೂರ್ ಜನ ಆ ಕಡೆ ಒಳೊ. ಇವನ ಸೇರಿ ಬಂದವು ಒಟ್ಟು ನಾಕ್‌ಜನ. ಆದರೆ ಈಗ ಐದ್ ಜನ ಆಗೊಳೊ. ಐದನೇಯಂವ ಯಾರ್? ಅರೆ! ನೀರ್ ಚೇಂಪವು ಯಾರ್? ಥೂ ಅವಂಗೇನಾತ್‌ತ ಹೇಳ್ಕಂಡ್ ಬಯ್ಕಂಡ್ ಅವನ ಅತ್ತ ಉಂದಿಕೇತ ಹೋಗಿ ಉಂದಿತ್. ಅಂವ ಕೈಗೆ ಸಿಕ್ಕಿತ್‌ಲೆ. ಮತ್ತೆ ಪುನಾ ನೀರ್ ಚೇಂಪಿತ್. ನಿಂಗೆ ವಿರಡ್ ಬುಟ್ಟನೇಂತ ದೊಣ್ಣೆ ತೆಗ್ದ್ ಬುಟ್ಟತ್. ಆ ಪೆಟ್ ನೀರಿಗೆ ಬಡ್ದ್ ಥಳ್‌ತ ನೀರ್ ಮೇಲೆ ಹಾರ್ತ್. ಅಷ್ಟೊತ್ತಿಗೆ ಆ ಕಡೆ ಇದ್ದ ಮೂರು ಜನ ಇತ್ತ ನೋಡ್ದೊ. 'ಏ ಎಂತರಾ? ಮೀನಿಗೆ ಕಡಿತಾ ಒಳಾ ಹೆಂಗೆತ' ಕೇಳ್ದೊ. ಆಗ ಇಂವ "ಒಮ್ಮೆ ಇತ್ತ ಬನ್ನಿರಾ, ಓಡಿ ಬನ್ನಿ"ಂತ ಕರ್ತ್. ಓ! ದೊಡ್ಡ ಮೀನ್‌ನ ಕಡ್ದಿರೊಕುತ ಅವು ಓಡಿ ಬಂದೊ. ಎಲ್ಲಿ ಎಂತಂತ ಕೇಳಿರೆ ಇಂವ ಮಾತಾಡ್ತ್‌ಲೆ. ಮೈ ಪೂರಾ ಚಂಡಿ ಮಾಡಿಕಂಡುಟ್ಟು. ಸಣ್ಣದಾಗಿ ನಡ್ಗ್‌ತ್ತಾ ಇತ್. ಅವ್ಕೆ ಕೂಡ್ಲೆ ವಿಷಯ ಗೊತ್ತಾತ್. ಇದೇ ಗುಂಡಿ ಹತ್ರ ಒಬ್ಬ ಕಾಲ್ ಜಾರಿ ಬಿದ್ ಸತ್ತುಟುತ ಗ್ಯಾನ ಬಂದ್‌ಬುಡ್ತ್. "ಸಾಕ್ ಪೋಯಿರಾ ಪೋಯಿರಾತ" ಹೇಳಿಕಂಡ್ ಹೊರ್ಟ್ದೊ.

"ಹಾಳಾದಂವನ ಬೀರ್ಯ ಇನ್ನೂ ಹೋತ್‌ಲೆ ಅಲ್ಲಾ. ಆ ಪೀಡೆ ಇವನ ಮೊಕಕೆ ನೀರ್ ಚೇಂಪಿದ್ ಯಾಕೆತ ಗೊತ್ತುಟಾ? ಹಣೆಲಿದ್ದ ವಿಭೂತಿನ ಪೂಜಿಕೆ!! ಹಣೆಲಿ ವಿಭೂತಿ ಇಲ್ಲದೇ ಹೋಗಿದ್ದರೆ ಆ ಕೂಡ್ಲೆ ನೀರಿಗೆ ಮುಳುಗ್ಸಿ ಬುಡ್ತಿತ್‌ಗಡ!"

ಇನ್ ನಮ್ಮ ಜನ್ಮಕೆ ಬೇಡ. ದುಡ್‌ಕೊಟ್ಟರೆ ಸಂತೆಲೆ ಎಷ್ಟೋ ಉಟ್ಟುತ ಉದ್ದೊದ್ದ ಹೆಜ್ಜೆ ಹಾಕಿ ಮನೆ ಸೇರ್ದೊ. ಬೆಳಿಗ್ಗೆ ಆಕನ ನಾಕು ಜನಕೂ ಜರ! ಜಲಪೀಡೆ ಸೋಂಕಿಕಂಡದ್‌ಗಡ!! ನೆಟ್ಟರೆ ಹುಟ್ಟುವ ನಂಟನ ಕಥೆ ಇದ್.



# 28. ಚಪ್ಪಾಂಗಿ ನಾಣಿ

ನಾಣಿ ಭಯಂಕರ ಚಪ್ಪಾಂಗಿ. ಅಂವ ಮಾತಾಡಿಕೆ ಕುದ್ದರೆ ಬೆಳಗಾದ್ ಗೊತ್ತಾಕಿಲೆ ಕತ್ತಲಾದರೂ ಗೊತ್ತಾಕಿಲೆ. ಅಂಥಾ ಮಾತ್‌ಗಾರ. ಯಾವ ಕೆಲ್ಸಲೂ ಅಂವನ ಮುಂದೆ ಯಾರೂ ನಿಲ್ಲಿಕಿಲೆಗಡ. ಗಾಳ ಹಾಕುದರ್ಲಿ, ಕೋವಿ ಬೇಟೆ ಆಡುದರ್ಲಿ, ಜೇನ್ ಕೊಯ್ಯೋದರ್ಲಿ, ನಾಟಿ ನೆಡ್ದರ್ಲಿ, ಗುಂಡಿ ತೆಗೆದರ್ಲಿ, ಅಗತೆ ಮಾಡುದರ್ಲಿ, ಭಾರ ಹೊರುದರ್ಲಿ ಯಾವ್ದೇ ಇರ್ಲಿ, ನಾಣಿ ಅಲ್ಲುಟ್ಟುತಾದರೆ ಜನ ಒಂದ್ ಹೆಜ್ಜೆ ಹಿಂದೆ ನಿಲ್‌ತಿದ್ದೊ ಗಡ.

ಅಂವ ಒಂದು ನಾಯಿ ಸಾಂಕಿತ್ ಗಡ. ಅಬ್ಬಬ್ಬಾ! ಅದ್ ನಾಯಿನೇ ಅಲ್ಲ. ಹುಲಿನಂಗೆ ಇತ್‌ಗಡ. ಅದ್ ಒಮ್ಮೆ ಬೊವ್‌ಂತೇಳಿರೆ ಹ್ವಾ! ಅದ್ ನಾಣಿದೇ ನಾಯಿತ ಜನ ಹೇಳಿಬುಡ್ತಿದ್ದೊ ಗಡ. ಬೇಟೆಗೆ ಮನಿ ಹೋದರೆ ಗುಂಡು ಹೊಡೆಮುಟ್ಟ ಕಾಲ್‌ಬುಡಲಿ ಸುಮ್ಮನೆ ಮಲ್ಗಿದ್ದ ನಾಯಿ ಗುಂಡ್ ಹೊಟ್ಟಕನ ಜಾತಿ ಹತ್ರ ಎತ್‌ತಿತ್‌ಗಡ. ಒಂದ್ ಹಂದಿದ್ ಪಡ್‌ನೆಟ್ಟಿ ಹಿಡ್ದ್ ನಿಲ್ಸಿದ ನಾಯಿ ಆ ಹಂದಿ ಸಾಯಮುಟ್ಟ ಬುಟ್ಟತ್‌ಲೆಗಡ.

ಒಮ್ಮೆ ಒಂದ್ ಕಡುವೆನ ಓಡ್ಸಿತ್‌ಗಡ. ಓಡ್ಸಿ ಓಡ್ಸಿ ಓಡ್ಸಿ ಆಕನ ಕಡುವೆಗೆ ಕಾಲ್ ಬಚ್ಚಿತ್, ನಾಯಿಗೆ ಉಚ್ಚೆ ಬಾತ್. ನಾಯಿದ್ ಉಚ್ಚೆ ಒಯ್ದಾಕನ ಕಡುವೆಗೆ ಓಡಿಕೆ ತಾಕತ್ ಬಾತ್. ಪುನಾ ನಾಯಿ ಓಡ್ಸಿಕೆ ಸುರು ಮಾಡ್ತ್. ಓಡಿ ಓಡಿ ಆಕನ ಒಂದ್ ಹೊಳೆ ಅಡ್ಡ ಸಿಕ್ಕಿ ಬುಡ್ತ್. ಆ ಕಡೆ ಬರೆ ಈ ಕಡೆ ಬರೆ. ಇನ್ನೊಂದ್ ಕಡೆ ನಾಯಿ. ಮತ್ತೊಂದ್ ಕಡೆಲಿ ನಾಣಿ. ನಡೂಲಿ ನೀರೊಳಗೆ ಕಡುವೆ. ನಾಣಿನ ಕೈಲಿ ಅಂದ್ ಕೋವಿ ಉಟ್ಟಾ? ಇಲ್ಲೆ. ನಾಣಿ ಹೋದ್ ಅಂದ್ ಬೆತ್ತ ಕಡೆಕೆತ. ಈಗ ನೋಡಿರೆ ಕಡುವೆ ಸಿಕ್ಕಿಹಾಕಂಡುಟ್ಟು. ಈಗ ಎಂಥ ಮಾಡ್ದು? ಕೋವಿಗೆತ ಮನೆ ಕಡೆ ಹೋದರೆ ಸಿಕ್ಕಿದ ಕಡುವೆ ಓಡಿಬುಟ್ಟದೆ. ಕಡುವೆ ಹೆದ್ರಿಕಂಡ್ ನಾಯಿನೇ ನೋಡಿ ನಿತ್‌ಬುಟ್ಟುಟು. ನಾಯಿಯೋ ಹಾರಿಹಾರಿ ಬೊಗ್‌ಳ್ತಾ ಉಟ್ಟು. ನೀರ್ ಇರುದರ್‌ಂದ ಕಡುವೆನ ಕಚ್ಚಿಕೆ ಆತ್‌ಲೆ. ನಾಣಿನ ತಲೆಗೆ ದೊಡ್ಡ ಉಪಾಯ ಬಾತ್. ಹೆಂಗೂ ಕಡುವೆ ನಾಯಿ ಕಡೆ ಮೊಕ ಮಾಡಿಕಂಡುಟ್ಟು. ಅದ್ ಹಂಗೇ ನೋಡಿಕಂಡಿರಕನ ಇಂವ ಹಿಂದೆಂದ ಹೋತು. ಹಂಗೆ ಹೋದರೂ ಕಡುವೆಗೆ ಗೊತ್ತಾತ್ಲೆ. ಹೆಂಗೂ ಕತ್ತಿ ಹರ್ತ ಇತ್ತಲ್ಲಾ. ಎತ್ತಿ ಕಡುವೆದ್ ಕಾಲ್‌ಗಂಟ್‌ದ್ ಹಜ ಮೇಲೆ ಕಡ್ದೇ ಬುಡ್ತ್. ನರ ತುಂಡಾದ ಕಡುವೆ ನಿಲ್ಲಿಕೆ ಬೊತ್ತದೆ ಹಿಂದೆ ಕುದ್ ಹೋತು. ಇನ್ ಹೆಂಗೂ ಇದ್ ಎಲ್ಲೂ ಹೋಕಿಲ್ಲೆತ ಗ್ಯಾನ ಮಾಡಿ ಮನೆ ಕಡೆ ಓಡ್ತ್. ನಾಕೈದ್ ಜನರ ಕರ್ಕಂಡ್ ಓಡಿ ಬಾತ್. ಅಷ್ಟ್ ಹೊತ್ತಾದರೂ ನಾಯಿನೂ ಅಲ್ಲೇ ಉಟ್ಟು. ಕಡುವೆನೂ ಅಲ್ಲೇ ನಿತ್ತುಟು. ರಕ್ತ ಸೋರಿ ಸೋರಿ ನೀರ್ ರಂಗ್ ರಂಗಾಗಿ ಹರಿತಾ ಇತ್. ಜನ ಅತ್ತಂದ ಇತ್ತಂದ ದೊಣ್ಣೆ ಬಡಿಗೆ ತಕ್ಕಂಡ್ ಬಡ್ದೊ. ಕೊಂದೊ. ಮತ್ತೆ ಅಲ್ಲೇ ಹೊಳೆ ಕರೆಲಿ ಅಚ್‌ಕಟ್ ಮಾಡ್ದೊಗಡ. ಈ ಕಥೆನ ನಾಣಿ ಇಷ್ಟೆ ಸತಿ ಹೇಳಿಟ್ಟುತ್ತಿಲೆ.

ಒಮ್ಮೆ ಜುಲೈ ತಿಂಗಳ ಜಡಿ ಮಳೆ ಗಡ. ಅಮಾಸೆ ಬೇರೆ. ನಡೂ ಇರ್ಳ್. ಮಳೇಂತೇಳಿರೆ ಹುಚ್ಚು ಮಳೆ. ಮಳೆದೇ ಸದ್ ಅಲ್ಲದೆ ಮತ್ತೊಂದಿಲ್ಲೆ. ನಾಣಿ ರಾತ್ರಿ 'ಹೊರಗೆ' ಹೋಕೆಂತ ಎದ್ದತ್‌ಗಡ. ಹಂಗೆ ಎದ್ ಹೊರಗೆ ಬಾತ್. ಹೊರಗೆ ಬಂದವಂಗೆ ತೋಡು ಕರೆಲಿ ಬೆಳ್ಳಂಗೆ ಬೆಳಕ್ ಕಾಣ್ತಾ ಉಟ್ಟು. ಓ! ಯಾರೋ ಮೀನ್ ಹಿಡೆವುಕಂಡದೆ. ಹಾಳಾದವು ನಮ್ಮ ತೋಡಿಗ್ಯಾಕೆ ಬರೊಕು. ನಮ್ಮ ತೋಡ್‌ದ್ ಮೀನ್ ನಮ್ಮದ್. ಅವುಕೆ ನಾಕ್ ಜೋರಾಕಿ ಬನ್ನೆತ ಗೊರ್ಗ ಹಾಕಂಡ್ ಲೈಟ್ ಹಿಡ್ಕಂಡ್ ಅತ್ತಹೋತು. ಹಲ್‌ಸ್‌ನ ಮರದ ಹತ್ರ ಸುಮ್ಮನೆ ನಿತ್ತತ್. ಆ ಬೆಳಕ್ ಅತ್ತ ಅತ್ತಳೇ ಹೋತು. ಅವರ್ನ ಅಡ್ಡ ಹಾಕಿನೇಂತ ನಾಣಿ ಇನ್ನೊಂದ್ ಕಡೆಂದ ಓಡ್ತ್. ಅಲ್ಲಿ ತೋಡು ಗದ್ದೆ ಎಲ್ಲಾ ಒಂದೇ ಸಮ ಆಗಿ ನೀರ್ ಹರಿತಾ ಉಟ್ಟು. ಓಡಿ ಹೋಗಿ ಒಂದ್ ಕರೇಲಿ ನಿತ್‌ಕಂಡತ್. ಆಗ ಅತ್ತಂದ ಬಾತಿದ್ದ ಬೆಳ್‌ಕ್ ಇತ್ತಳೇ ಇತ್ತಳೆ ಬರ್ತಾ ಇತ್. ಹಂಗೇ ನೋಡ್ತಾ ಇರಕನ ಇಂವನ ಕಣ್ಣಿಗೆ ಬರೀ ಬೆಳಕ್ ಮಾತ್ರ ಅಲ್ಲ "ಡೊಂಯ್ ಡೊಂಯ್ ಡೊಂಯ್ ಜಾಗಟೆ ಸದ್ !! ಗಲ್‌ಗಲ್‌ತ ಗೆಜ್ಜೆ ಸದ್. ಗಣ ಗಣ ಗಣತ ಗಂಟೆ ಸದ್!! ಓವ್! ದೇವತೆಗಳ ಪೋಕ್. ಅಲ್ಲ, ಕಡಾಯ! ಅಮಾಸೆ ಕರಿಗೂಡು ಕತ್ತಲೆಲಿ ಹಣದ ಕಡಾಯ ಹೋಗ್ತಾ ಉಟ್ಟು. ಹ್ಞಾ! ಅದೆಂತಾ? ಕಡಾಯದ ಮೇಲೆ ! ಒಂದ್, ಎರಡ್, ಮೂರು. ಹೌದು ಮೂರು ಹೆಡೆ ಬಿಚ್ಚಿಕಂಡ್ ಮಲ್ಗಿದ ನಾಗಪ್ಪಾ! ಅಯ್ಯಪ್ಪಾ ನಂಗೆ ಬೇಡ. ನಾ ಕೆಲ್ಸ ಮಾಡಿ ಸಂಪಾದ್ನೆ ಮಾಡ್ದೇ ಸಾಕ್. ಈ ಹಣದ ಕಡಾಯ ಬೇಡಪ್ಪೋ ಬೇಡಾ"ಂತ ಕೈ ಮುಗ್‌ತ್ತಗಡ. ಬಂದ್ ಮಲ್‌ಗಿದಂವ ಎದ್ದದ್ ನಾಕ್ ದಿನದ ಮೇಲೆ. ಅಂಥಾ ರಣ ಜರ. ಜಲ ದೇವತೆಗೆ ಹೇಳಿಕಂಡ ಮೇಲೆ ಜರ ಇಳ್ತ್‌ಗಡ. ಇಂಥಾ ಕಡಾಯ ಕಾಂಬದ್ 'ಚಪ್ಡಾಂ'ಗಿಗಳಿಗೆ ಮಾತ್ರತ ಜನ ಮಾತಾಡ್ತಿದ್ದೊ.

ನಾಣಿ ರಾತ್ರೆ ಮಲ್ಗಿದ ಮೇಲೆ ಮನೆಯೊಳಗೇನಾರ್ ಸದ್ದಾದರೆ 'ನೋಣ್ಣೆ ಎಂತದೋ ಸದ್ದಾತ್. ದೀಪ ಹೋಸಿ ನೋಡುತ' ಹೇಳ್ದಲ್ಲದೆ ಈ ಭೂತ ಮಾತ್ರ ಮಸ್‌ಗಿಕಿಲೆ. ರಾತ್ರೆ ಮನೆ ಸುತ್ತ ಏನಾರ್ ಓಡಾಡುವ ಸದ್ ಕೇಳಿರೆ ಸಾಕ್ ಅಮಾಸೆ ಹತ್ರ ಹತ್ರ ಬಾಕನ ಅಥವಾ ಹುಣ್ಣಮೆ ಹತ್ರ ಹತ್ರ ಬಾಕನ ನಮ್ಮ ಮನೆ ಸುತ್ತನೇ ಇವು ಓಡಾಡ್ದು ಯಾಕೆ? 'ಮನೆಗೆ ತಡೆ' ಮಾಡೊಕುತ ತಡೆ ಮಾಡ್ಸಿತ್. ಯಾವ ತಡೆ ಮಾಡಿರೂ ಇಲಿಗ, ಹೆಗ್ಗಣಗ ರಾತ್ರೆ ಓಡಾಡ್ದು ಕಮ್ಮಿ ಆತ್‌ಲೆ! ಪೇರ್ಲ ಮರಕ್ಕೆ ಬಾತಿದ್ದ ಬಾವುಲಿಗ ಕಮ್ಮಿ ಆತ್‌ಲೆ.

ಇನ್ನೊಮ್ಮೆ ಹಿಂಗಾತ್: ನಾಣಿ ಮಲ್ಗಿತ್. ಮಕ್ಕಳೂ ಮಲ್ಗಿದೊ. ಹೆಣ್ ಮಲ್ಗಿಕೆ ಹಜ ಹೊತ್ ಇತ್. ಪಾತ್ರೆಗಳ ಕರೆಮರೆ ಮಾಡಿ ಕೆಂಡಕ್ಕೆ ಬೂದಿ ಮುಚ್‌ತಾ ಇರಕನ "ಏನೇ ಬಾನೇ, ಬಂದಾ? ಬೇಗ ಬಾನೇ, ದೀಪ ತಕ ಬಾನೇತ" ಬೊಂಬ್ಡಿ ಹೊಡಿತಾ ಇರಕನ ಹೆಣ್‌ಗೆ ಗಾಬರಿ ಆತ್. ಇವುಕೆ ಏನಾತ್‌ತ ಓಡಿ ಬಾತ್. ಎಂತದ್ ನಿಮ್ಮದ್‌ತ ಕೇಳ್ತ್. "ಅಯ್ಯೋ ಮಾರೀ ಎಂತದ್‌ತಾ ಕೇಳ್ತಾ ಒಳಲ್ಲಾ. ನನ್ನ ಕಾಲ್ ಮೇಲೆದ್

ಹೊದಿಕೆನ ಎತ್‌ನೇ ಬೇಗ. ಬೇಗ ಎತ್‌ನೇ ಕಾಲ್‌ಗೆ ಅಡ್ಡ ತಣ್ಣಗೆ ಮಲ್ಕಂಡುಟ್ಟು. ಕಟ್ಟ ಹಾವುತ ಕಂಡದೆ. ಕೋಟ ಕೋಟ ಆಗ್ತಾ ಉಟ್ಟು. ಹರಿತಾ ಉಟ್ಟು." ಹಂಗೆ ಹೇಳಕನ ಹೆಣ್ ಮೆಲ್ಲ ಮೆಲ್ಲ ಹೊದಿಕೆನ ಎತ್ತಿತ್. ಅಬ್ಬಬ್ಬಾ! ಅಲ್ಲಿ ನೋಡಿರೆ ಗೊಣ್ಣೆ ಹುಳ! ಗಾಬರಿಲಿ ಎದ್ ಕುದ್ದಿದ್ದ ಮಕ್ಕ ಅಡ್ಡಡ್ಡ ಬಿದ್ ನಗಾಡ್‌ಕನ ನಾಣಿಗೆ ಏನಾಗ್‌ಬೇಡ? "ಬಾಯಿ ಮುಚ್ಚಿ ಮಲ್ಗಿನೆ ಮಕ್ಕಳೆ. ಏನೋ ನನ್ನ ದೆಸೆಫಲ ಒಳ್ಳದಿತ್. ಹಾವಾಗಿ ಬರುವ ಬದ್ಲ್ ಗೊಣ್ಣೆ ಹುಳಾಗಿ ಬಂದುಟು. ಹಾ! ಶ್ರೀ ಸುಬ್ರಮಣಿ-ನೀನೇ ಕಾಪಾಡಿಯೊಳ. ನಿಂಗೆ ಸರ್ಪದ್ ರೂಪ ಮಾಡಿ ಒಪ್ಪಿಸಿನೇ"ಂತ ಕೈಮುಗ್ದ್ ಹೇಳಿ ಕಂಡ್ ಗುಡಿ ಹೊದ್ ಮಲ್ಗಿತ್. ಇಂಥಾ ಪುಕ್ಕುಲ ನಾಣಿ. ಹೇಳ್ದು ಮಾತ್ರ ಭಾರಿ ಕಥೆ!

ಇನ್ನೊಂದಪ ನಾಣಿ ಸಂತೆಂದ ಬಾಕನ ಕತ್ತಲೆ ಕತ್ತಲೆ ಆಗ್ತಾ ಇತ್ ಗಡ . ಇಂವ ನಶ್ಯ ಸೇದಿಕೆತ ಜೋಬಿಗೆ ಕೈ ಹಾಕಿ ಡಬ್ಬಿನ ತೆಗ್ತ್. ಮುಚ್ಚೊಳಕೆ ಒಮ್ಮೆ ಟಕ್‌ತ ಹೊಡ್ದ್ ಮುಚ್ಚಳ ತೆಗ್ತ್. ಒಂದು ಚಿಟಿಕೆ ನಶ್ಯನ ತಕ್ಕಂಡ್ ಸೊರ ಸೊರತ ಎಳ್ತ್. ಹಂಗೆ ಎಳಿತಾ ಇರಕನ ಆ ಪಣ್‌ಪುಳಿ ಮರದ ಹಕ್ಕಲೆ ಎಂತದೋ ಬೆಳ್ಳಂಗೆ ಕಂಡತ್. ಅರೆ! ಅದೆಂತದ್ ಆ ಬಿಳೀ ಆಕಾರ? ಅದ್ ಇಂವನ ಹಕ್ಕಲೆ ಬಾತ್‌ಗಡ. ಇಂವನ ಎದ್‌ರ ನಿತ್ತತ್‌ಗಡ. ನೋಡಿರೆ ಇಂವಂಗಿಂತಲೂ ಎತ್ತರ! ಇಂವನ ಎದ್‌ರ ಕೈ ನೀಂಡಿತ್‌ಗಡ. ಓಹೋ ಇದ್ ನಶ್ಯ ಕೇಳಿಕೆ ಬಂದ ದಾರಿ ದೆವ್ವತ ಗೊತ್ತಾಗಿ ಬಡ್ತ್. ಕೂಡ್ಲೆ ಜೋಬಿಗೆ ಕೈ ಹಾಕಿ ನಶ್ಯನ ಎದ್ರ ಕಾಂಬತಿದ್ದ ಅಂಗೈಗೆ ಹಾಕಿತ್‌ಗಡ. ಆಗ ಆ ಅಂಗೈ ನಡೂಲಿ ತೂತ ಇದ್ದರ ಕಂಡತ್‌ಗಡ. ಹಾಕಿದ ನಶ್ಯ ಪೂರಾ ಕೆಳಗೆ ಬೀಳ್ತಾ ಇತ್‌ಗಡ. ಈಗ ಎಂಥ ಮಾಡ್ದು? ಇದ್ ಅಂತಿಂಥಾ ದೆವ್ವ ಅಲ್ಲಕಂಡದೇತ ಗ್ಯಾನ ಮಾಡಿ ಇಡೀ ಡಬ್ಬಿನೇ ಆ ಅಂಗೈ ಮೇಲೆ ಮಡ್ಗಿತ್‌ಗಡ. ಆಗ ಅದ್ ಕಟಕಟಾಂತ ಸದ್ ಮಾಡಿ ಮಾಯ ಆತ್‌ಗಡ. ಅಂದ್ ನಾಣಿ ಬುಟ್ಟ ನಶ್ಯ ಇಂದ್‌ವರೆಗೂ ಮುಟ್ಟಿತ್‌ಲೆಗಡ.



# 29. ಮಣಿನ ಹಂದಿ ಮರಿ

**ಒಂದ್** ಒಳ್ಳ ಹೈಬ್ರೀಡ್ ಗಂಡ್ ಹಂದಿ ಸಾಂಕೊಕುತ ಮಣಿ ಗ್ಯಾನ ಮಾಡ್ತ್. ಆದ್ರೆ ಅಂಥಾ ಮರಿ ಎಲ್ಲಿ ಸಿಕ್ಕದೆ? ಅವ್ರ ಇವ್ರಲ್ಲೆಲ್ಲಾ ಕಂತ್ರಿ ಹಂದಿಗಳೇ ಇರ್‍ವು. ಸೀದ ಕೂಡಿಗೆಗೆ ಹೋದೇ ಸರಿಂತ ಗ್ಯಾನ ಮಾಡ್ತ್. ಯಾರೋ ಹೇಳ್ತಿದ್ರೊ 'ಕೂಡಿಗೆಲಿ ಒಂದೊಂದ್ ಹಂದಿಗ ಕೋಣ ಮರಿಗಳಂಗೆ ಬೆಳ್ದವೆ. ಒಂದ್ ಗೂಡಿಗೆ ಒಂದೇ ಹಂದಿ ಸಾಕ್, ನೀ ಅಂಥರ್‍ನೇ ಸಾಂಕ್‍ಂತ.' ಈ ಮಾತ್ ಕೇಳಿ ಮಣಿದ್ ಕೆಮಿ ಅರಳಿತ್, ಕೂಡಿಗೆಯತ್ತ ಮನ್ಸ್ ಹೊರಳಿತ್. ಗೋಣಿ ಚೀಲ ತಕಂಡ್ ಹೊರ್‍ಟತ್. ಮಣಿದ್ ಊರ್ ಪಾಲೂರ್. ಪಾಲೂರೆಲ್ಲಿ, ಕೂಡಿಗೆ ಎಲ್ಲಿ? ಹಠವಾದಿ ಮಣಿ ಕೂಡಿಗೆಗೆ ಹೋತು. ಅಲ್ಲಿ ಹಂದಿ ಮರಿಗಳ್ನ ನೋಡ್ರೆ ಹೊಟ್ಟೆ ತುಂಬಿದಂಗೆ ಆಗೋತು. ಯಾವುದರ ಹಿಡಿಯೊದು, ಯಾವುದರ ಬುಡ್ದು? ಅಂತೂ ಇಂತೂ ಒಂದರ ಆಯ್ಕೆ ಮಾಡ್ತ್. ಹಿಡ್ದ್ ಕೊಟ್ರೊ. ಕಾಲ್‍ಕಟ್ಟದೆ ಚೀಲಕೆ ತುಂಬಿಕಂಡತ್. ದುಡ್ಡ್ ಕೊಟ್ಟತ್. ನೇಚಿ ಹೆಗಲ್‍ಲಿ ನೇತಲಾಡಿಸಿಕಂಡ್ ರಸ್ತೆ ಕರೆಗೆ ಬಾತ್. ಯಾವ್ದಾರ್ ವ್ಯಾನ್‍ಗೀನ್ ಸಿಕ್ಕುದಾತ ಪಾರಕಾತ್. ಒಂದ್ ವ್ಯಾನ್‍ಲಿ ಕುಶಾಲನಗರ ಮುಟ್ಟ ಬಾತ್. ಅಲ್ಲಿಂದ ಮುಂದೆ ಹೆಂಗೆ ಹೋದು?

ಬಸ್‍ನವು ಹಾಕಂಬಕಿಲ್ಲೆ. ಲಾರಿಯವೂ ಅಷ್ಟೇ. ಅಂತೂ ನೋಣ್ನೋಂತೇಳಿ ಜನರ ನೂಕಾಟಲಿ ಒಂದ್ ಬಸ್‍ಗೆ ಹತ್ತಿ ಹಿಂದೆ ಸೀಟ್‍ಲಿ ಕುದ್‍ಕಂಡತ್. ಮಡಿಕೇರಿಗೆ ಟಿಕೇಟ್ ತಕ್ಕಂಡತ್. ಸೀಟ್ ಕೆಳಗೆ ಹಂದಿ ಮರಿ, ಮೇಲೆ ಮಣಿ. ಆಚೆ ಈಚೆ ಯಾರ್‍ಯಾರೋ ಕುದ್ದೊಳೊ. ಬಸ್ ಹೊರಡ್‍ಕನ ಹಂದಿ ಮರಿ ಸಣ್ಣದಾಗಿ 'ಗುರ್ ಗುರ್' ಸುರ್‍ಮಾಡ್ತ್. ಬಸ್‍ನ ಸದ್‍ಲಿ ಈ ಸದ್ ಯಾರಿಗೂ ಗೊತ್ತಾತ್‍ಲೆ. ಬಸ್ ತಾವರೆ ಕೆರೆ ದಾಟಿ, ಮರ ಮಿಲ್ ದಾಟಿ ರುಮ್‍ಂತ ಹೋಗ್ತಾ ಇರ್‍ಕನ ಯಾವನೋ ಒಬ್ಬ ಹಂದಿ ಮರಿ ಇರುವ ಚೀಲನ್ನ ಮೆಟ್ಟಿಬುಡ್ತ್. ಕಿರಿಂಯೋಂತ ಮರಿ ಕಿರ್‍ಚ್‍ಕನ ಆಚೆ ಈಚೆ ಇದ್ದವು ಹದ್ಕಿ ಹದ್ಕಿ ಬಿದ್ ಎದ್ ನಿತ್ರೊ. ಮಣಿ ಮಿಣಿ ಮಿಣಿ ಕಣ್ ಮಾಡಿ ಕಂಡ್ ಏನೂ ಆಗದವನಂಗೆ ಕುದ್‍ಕಂಡಿತ್. 'ಇದ್ರ ದೊಂಡೆ ಕಟ್ಟಿಕೆ, ಸತ್ತಂಗೆ ಬಿದ್‍ಕಂಬಕ್ಕೇನ್ ರೋಗ ಇದ್ಕೆತ' ಬಯ್ಕಂಡತ್. ಅಷ್ಟೊತ್ತಿಗೆ ಕಂಡಕ್ಟರ್ ಹಂದಿಗಿಂತ್ಲೂ ಜೋರಾಗಿ ಕಿರ್‍ಚಿಕಂಡ್ ಜನ್ರ ಸೀಳಿಕಂಡ್ ಸೀಳಿಕಂಡ್ ಈಜಿಕಂಡ್ ಈಜಿಕಂಡ್ ಬಂದಂಗೆ ಬಂದೇ ಬುಡ್ತ್. "ಯಾರ್‍ದ್ರಿ ಅದೂಂತ" ದಪ್ಪ ದೊಂಡೆಲಿ ಕೇಳ್ತ್. ಬಸ್ ನಿತ್ತೇಹೊತು. 'ಇಳ್‍ಸ್ರೀ ಅವುನ್ನ, ಇದೇನ್ ಬಸ್ಸೋ ಗೂಡ್ಸ್ ಲಾರಿಯೋಂತ' ಡ್ರೈವರ್ ಬಯ್ದಾಡ್ಕನ ಪಾಪದವನಂಗೆ ಕುದ್ದ ಮಣಿ ಚೀಲ ತಕ್ಕಂಡ್ ಬಸ್‍ಂದ ಇಳ್ದೇ ಬುಡ್ತ್. ಜನ ಕಿಡಿಕೆಂದ ತಲೆ ಹಾಕಿ ನೋಡ್ತಾ ಇದ್ರೊ. ಕಂಡಕ್ಟರ್ ಡಬ್ಬಲ್ ಸದ್ ಬರ್‍ವಂಗೆ ಪೀಪಿ ಊದಿತ್. ಬಸ್ ಬುಸುಗುಟ್ಟಿ ಹೊರ್‍ಟತ್. ಮಣಿ ಹಂದಿ ಮರಿನ ಹಾಕಂಡ್ ರಸ್ತೆ ಕರೆಲಿ ಕುಕ್ಕರ್‍ಸಿ ಕುದ್ದತ್.

ಹಿಂಗೆ ಕುದ್‌ಕಂಡಿರ್‍ಕನ ಒಂದರ ಹಿಂದೆ ಇನ್ನೊಂದ್, ಮತ್ತೊಂದ್ ಲಾರಿ ಬರ್‍ತಾ ಇತ್. ಮಣಿ ಕೈ ಅಡ್ಡ ಹಿಡ್ತ್, ಕ್ಲೀನರ್ ಎಡಗೈ ಕೊಣ್ಸಿತ್. ಮಣಿ ಇಸ್ಕೂಲ್ ಮಕ್ಕ ಬಸ್ಸಿ ಹೊಡ್ದಂಗೆ ಏಳುದು, ಕೂರುದು ಮಾಡ್ತಾ ಇತ್. ಅಷ್ಟೊತ್ತಿಗೆ ಇನ್ನೊಂದ್ ಲಾರಿ ಬಾತ್. ಕೈ ಅಡ್ಡ ಹಿಡ್ತ್. ಲಾರಿ ನಿತ್ತತ್. ಹತ್ತಿ ಕುದ್ದಾಕನ ಲಾರಿಯವು ದುಡ್ ಕೇಳ್ರೊ. ಕೊಟ್ಟತ್. ದುಡ್ಡೆಲ್ಲಾ ಕೊಟ್ ಇನ್ನೇನ್ ಗುಡ್ಡೆಹೊಸೂರಿಗೆ ಬಾತೋ ಇಲ್ಲೆಯೋ ಹಂದಿ ಮರಿ ಮಿಸ್‌ಕಾಡ್ತ್. ಸಣ್ಣದಾಗಿ ಗುರ್ ಗುಟ್ಟಿತ್. 'ಥೂ ಇದೆಂತದ್‌ರ್ರೀಂತ' ಲಾರಿ ಕ್ಲೀನರ್ ಕೇಳ್ತ್. ಆಗ ಮಣಿ "ಅದೂ ಅದು.....ಇದೂ...... ಇದು..... ಏನ್ರೀ ಮಾತು ಬರಕಿಲ್ಲೆನ್ರೀ.....ಅದೂ ಇದು, ಇದೂ ಅದುಂತ ಹೇಳ್ತೀರಲ್ಲ. ಚೀಲ್ದೊಳಗಿರೋದೇನ್ರಿ? ಸರಿಯಾಗಿ ಹೇಳ್ರೀ"ಂತ ಡ್ರೈವರ್ ಬೊಬ್ಬೆ ಹಾಕ್‌ಕಾಕನ ಹಂದಿ ಮರಿಗೆ ಹೆದ್ರಿಕೆ ಆಗಿಯೋ ಏನೋ ಕಿರಿಂಯೋಂತ ಕಿರ್‌ಚಿಕಂಡತ್. ಡ್ರೈವರ್ ಮೈಮೇಲೆ ಹಾವು ಬಿದ್ದಂಗೆ ಕೊಣ್ತ್. ಲಾರಿನ ನಿಲ್ಸಿತ್. ಮಣಿನ ಕುತ್ತಿಗೆ ಪಟ್ಟಿ ಹಿಡ್ದ್ ಕೆಳಗೆ ತಳ್ಳಿತ್. ಮಣಿ ಮೊಕ ಪೂಜಿಕಂಡ್ ಚೀಲ ಹಾಕಂಡ್ ಕುದ್ದತ್. ಅಲ್ಲಿಂದ ಮುಂದೆ ಒಂದೇ ಒಂದು ಲಾರಿಯಾಗಲಿ, ವ್ಯಾನಾಗಲಿ ನಿತ್ತತೇ ಇಲ್ಲೆ. ಇನ್ನೇನ್ ಮಾಡ್ದು? ಕತ್ತಲೆ ಬೇರೆ ಆಗ್ತಾ ಉಟ್ಟು. ಮಳೆ ಮೋಡ ಬೇರೆ. ಇನ್ ನಡೇದೇ ಸರಿತ ನಡೆಕೆ ಸುರ್ ಮಾಡ್ತ್. ಶುಂಠಿಕೊಪ್ಪ ಹೊಟೇಲ್‌ಲಿ ಏನೋ ತಿಂತ್. ಮರಿ ಮಾತ್ರ ಉಪಾಸ. ಮತ್ತೆ ಅಲ್ಲಿಂದ ಹೊರ್ಟತ್. ಬೋಯಿಕೇರಿಗೆ ಎತ್‌ಕಾಕನ ಹಿಂದೆಂದ ಒಂದ್ ಲಾರಿ ಬಾತ್. ಕೈ ಅಡ್ಡ ಮಾಡ್ಕನ ನಿತ್ತತ್. ಆ ಲಾರಿಯವು ಗೊತ್ತಿರವೇ. ಸಧ್ಯ ಬಚಾವಾದೆತ ಮಣಿ ಹತ್ತಿ ಕುದ್ ಮೀಸೆ ಮೇಲೆ ಕೈ ಆಡ್ಸಿತ್. ಲಾರಿಯವುಕೆ ದುಡ್ ಕೊಡಿಕೆ ಹೋದರೆ ಅವು ತಕ್ಕಂಡ್‌ತ್ಲೆ. ಲಾರಿ ಬೋಯಿಕೇರಿ ಚಡಾವು ಎತ್ತಿತ್. ಆ ದೊಡ್ಡ ತಿರ್‌ಗಾಸ್‌ಲಿ ಒಂದ್ ಲಾರಿ ಕಾಲ್ ಮೇಲೆ ಮಾಡಿಕಂಡ್ ಉಪ್ಪ್ ಟೀ ಟೀ ಹಕ್ಕಿ ಮಲ್‌ಗಿದೆಲ ಹಂಗೆ ಮಲ್‌ಗಿತ್. ಕೆಳಗೆ ಹಂಚಿ ಮೇಲೆ ಲಾರಿ. ಅದೆಲ್ಲಾ ನೋಡಿಕಂಡ್ ಈ ಲಾರಿ ಬರೂಂತ ಹೋಗ್ತಾ ಇತ್. ಏನಾತೋ ಏನೋ. ಈ ಲಾರಿ ಸೊಲ್ಪ ದೂರ ಎತ್ತಿದ ಮೇಲೆ ಬುರ್ ಬುರೂಂತ ಸದ್ ಮಾಡ್ತಲ್ಲದೆ ಏನೇನ್ ಮಾಡಿರೂ ಮುಂದೆ ಹೋಕಿಲೆ. ಕ್ಲೀನರ್ ಹೈದ ಇಳ್ದ್ ಚಕ್ರಕ್ಕೆ ಕಟ್ಟೆ ಕೊಟ್ಟತ್. ಲಾರಿ ಪುನಾ ಸದ್ ಮಾಡ್ತ್. ಗಡಗಡ ಸದ್ ಮಾಡಿ ಗಡಕ್‌ಂತ ನಿತ್ತೇ ಹೋತು. ಮಣಿ ಮೀಸೆಂದ ಕೈ ತೆಗ್ತ್. ಚೀಲ ತಕ್ಕಂಡ್ ಇಳ್ತ್. ಲಾರಿಯವುಕೆ ಸಮಾಧಾನ ಹೇಳಿ ನಡೆಕೆ ಸುರ್ ಮಾಡ್ತ್.

ಒಂದ್ ಹತ್ ಮಾರ್ ನಡ್ತೋ ಇಲ್ಲೆಯೋ ಎಲ್ಲಿದ್ದೋ ಏನೋ ಎರಡ್ ನಾಯಿಗ! ಬೊಗಳಿಕಂಡ್ ಬಂದೇ ಬುಟ್ರೊ. ಮಣಿನ ಹಿಂದೆ ಮುಂದೆ ಸುತ್ತಾ ಒಳೊ. ಹಸ್ ಕರ್ ಹಾಕ್‌ಕಾಕನ ಸೂರೂಲಿ ಕರ್‌ನ ತಲೆನೀರ್ ಒಡ್ಡದೆ. ಆಗ ಹಸ್ ಸುತ್ತ ಮುತ್ತ ತಿರ್‍ಗಿದೆ. ಹಂಗೆ ಮಣಿ ಬೆನ್ ಮೇಲೆ ಚೀಲನ ಹೊತ್‌ಕಂಡ್ ಅತ್ತ ಇತ್ತ ತಿರ್‌ಗಾಡ್ತಾ ಇತ್. ಅಷ್ಟೊತ್ತಿಗೆ ಸರಿಯಾಗಿ ಮರಿ ಹುಟ್ಟಿಕಾಕನ ಸುರೂಲಿ ಮುಂದೆದ್ ಕಾಲ್ ಹೊರಗೆ

ಬರುವ ಹಂಗೆ ಮಣಿದ್ ಚೀಲದ ಮೂಲೆಂದ ಹಂದಿ ಮರಿದ್ ಕಾಲ್ ದಾಟಿಕಂಡತ್. ಚೀಲ ಕುಂಬಾಗಿತ್ ನೋಡಿ. ಮಣಿ ಯಾಕೋ ಚೀಲನ ನೋಡ್ಕನ ಕಾಲ್ ಒಟ್ಟಿಗೆ ಮರಿದ್ ದುಂಡೂ ಹೊರಗೆ ಬರ್ತಾ ಉಟ್ಟು! ಹಾಳಾದ ನಾಯಿಗ ಬೇರೆ. ಇನ್ನೇಸ್ ಮರಿ ಚೀಲಂದ ಹೊರಗೆ ಬೀಳಿಕೇ ಬಾಕಿ ಇರ್ದು. ತಕ್ಷಣ ಆ ತೂತದ ಕಡೆ ಹಿಡ್ಡ್ ಮರಿನ ಉಂದಿ ಒಳಗೆ ಹಾಕಿತ್. ಹೆಂಗೋ ಗಂಟ್ ಹಾಕಿತ್. ಆ ನಾಯಿಗ ನಾಲಿಗೆ ನೆಕ್ಕಿಕಂಡ್ ಬೊಗಳ್ತಾ ಒಳೊ. ಮಣಿ ಕೂಡ್ಲೆ ಬಗ್ಗಿದಂಗೆ ಮಾಡಿ ಎಂಥದೋ ಎತ್ತಿದಂಗೆ ಮಾಡಿ ನಾಯಿಕಡೆ ಬಿಸಾಕಿದಂಗೆ ಮಾಡ್ಕನ ನಾಯಿಗ ಹೆದ್ರಿಕಂಡ್ ಕಚ್ಚೆಬಾಲ ಹಾಕಂಡ್ ಅತ್ತ ಹೋದೊ. ಹಂಗೂ ಹಿಂಗೂ ಮಡಿಕೇರಿ ಸುದರ್ಶನ ಸರ್ಕಲ್ ಹತ್ರ ಎತ್‌ಕಾಕನ ರಸ್ತೆಲಿ ದೀಪ ಬೆಳಗ್ತಾ ಇತ್. ಅಷ್ಟೊತ್ತಿಗೆ ಒಬ್ಬ ಮರದ ಬುಡಂದ ದಡ್‌ಬಡ್‌ತ ಓಡಿ ಇವನ ಹತ್ರ ಬಾತ್. ಕೈಲಿ ದೊಣ್ಣೆ, ಕಾಲ್‌ಲಿ ಬೂಟ್, ತಲೆಗೆ ಎಂತದೋ ಸುತ್ತಿಕಂಡ ಆ ಮನುಷ್ಯ ಮಣಿನ ಹತ್ರ ಬಂದ್ 'ಏಯ್ ಏಯ್ ಏನೋ ಅದು? ಕಳ್ಳತನ ಮಾಡಿದ್ವೇನೊಂತ' ಜಬರದಸ್ತ್ ಮಾಡ್ತ್. ಆಗ ಮಣಿ 'ಸಾರ್ ಇದು ಹಂದಿ ಮರಿ ಸಾರ್. ಕೂಡಿಗೆಂದ ತರ್ತಾ ಇದ್ದೀನಿ ಸಾರ್. ಬುಟ್ಟ್ ಬುಡಿ ಸಾರ್, ನಿಮ್ಮ ದಮ್ಮಯ್ಯ ಸಾರ್‌ಂತ' ಬೇಡಿಕಂಡತ್. ಏಯ್ ತೆಗಿಯೋ ರಶೀತಿಂತ ಅಂವ ಹೆದ್ರಿಸಿತ್. ಹಂದಿ ಮರಿಗೆ ಯಾರ್ ರಶೀತಿ ಕೊಟ್ಟವೆ ಹೇಳಿ? 'ಸ್ವಾಮಿ, ರಶೀತಿ ಇಲ್ಲ.' ಓಹೋ ನೀನ್ ಕಳ್ಳನೇ ಹೌದು. ಒದ್ದು ಒಳಗಾಕ್ತೀನಿಂತ ಆ ದಢೂತಿ ಆಸಾಮಿ ನೆಲಕ್ಕೆ ಒದ್ ದೊಣ್ಣೆ ಎತ್ತಿತ್. ಮಣಿ ಜೋಬಿಗೆ ಕೈ ಹಾಕಿ ಬಂದಷ್ಟ್ ದುಡ್ಡುನ ಮುದ್ದೆ ಮಾಡಿ ಕೊಟ್ಟತ್. ಹೋಗ್ ಇನ್ನೊಮ್ಮೆ ಕದ್ದು ಸಿಕ್ಕಿ ಹಾಕೋಬ್ಯಾಡಂತ ಬುದ್ಧಿ ಹೇಳ್ತ್. ಮಣಿ ಆಯಿತು ಆಯಿತುಂತ ಹೇಳಿ ಚೀಲ ನೇಚಿಕಂಡ್ ಮರ್ಟ್‌ಕಂಡ್ ಹೊರ್ಟತ್. ಸುತ್ತ ಯಾರೂ ಇತ್ತ್‌ಲೆ.

ಗಂಡ್ ಜನ ಮರ್ಟವೆಯಾ? ದುಃಖಕ್ಕೆ ಗಂಡ್ ಹೆಣ್ ಭೇದ ಉಟ್ಟಾ?

ಮಣಿ ಬೆಟ್ಟಗೇರಿ ರಸ್ತೆಲಿ ನಡಿತಾ ಇತ್. ಹೆಜ್ಜೆ ಹೆಜ್ಜೆಗೂ ಚೀಲದ ತೂಕ ಜಾಸ್ತಿ ಆದಂಗೇ ಆತಿತ್. ಎಲ್ಲಾ ಅಷ್ಟೇ. ಸುರೂಲಿ ಹೊರೆ ಹಗುರ ಕಂಡದೆ, ಮತ್ತೆ ಮತ್ತೆ ತೂಕ ಜಾಸ್ತಿ. ಕೆಲವುಕೆ ಸಂಸಾರದ ತೂಕ ದಿನಂದ ದಿನಕ್ಕೆ ಜಾಸ್ತಿ ಆದಂಗೆ, ಮಣಿದ್ ಚೀಲನೂ.........



# 30. ಗುಡ್ ನೈಟ್ !

"ಓ! ದೊಡ್ಡವ್ವಾ? ದೂರ ಹೊರ್ಟದ್?"

"ನೀ ಯಾರ್? ಓಹೋ ನಮ್ಮ ಸೀತೆ. ಇಂದ್ ರಾಣಿ ಗೂಡೆದ್ ಕೂಸುನ ತೊಟ್ಟಿಗಿಲಿಗೆ ಹಾಕುದಲಾ. ಹಂಗೆ ಅಲ್ಲಿಗೆ ಪೋಯಾಂತ ಹೊರ್ಟೆ."

"ನೀ ದೂರ?"

"ನಾನೂ ಅಲ್ಲಿಗೆ ಹೊರ್ಟದ್ ದೊಡ್ಡವಾ".

"ಏನಾರಾಗಲಿ. ಒಬ್ಬಳೇ ಹೋಕಲ್ಲಾಂತ ಬೇಜಾರಾಗಿತ್. ಹೆಂಗೂ ನೀನೂ ಅಲ್ಲಿಗೆ ಹೋದುತಾದವೇಲೆ ನಾವಿಬ್ಬರೂ ಮಾತಾಡಿಕಂಡ್ ಪೋಯಿ. ಹೋದೊರ್ಸ ಮದುವೆ, ಈ ವರ್ಷ ನಾಮಕರಣ. ಈ ವರ್ಷ ಮದುವೆ ಮುಂದ್‌ನೊರ್ಸ ನಾಮಕರಣ. ನಂಗೆ ಬೊತ್ತಪಾ. ಎಲ್ಲ ಕಡೆಗೂ ನನ್ನನೇ ದೂಡುವೆ. ನಮ್ಮ ಇವು ಒಳೊ. ಮನೆ ಮಸ್ಗಿರೂ ಇವು ಮಸ್ಗಿಕಿಲೆ. ಸೀತೆ, ನನ್ನ ಮೊಕ ನೋಡು. ಬೂದಿ ಬೂದಿ ಉಟ್ಟಾ? ನಾ ಬ್ಯಾಡ ಬ್ಯಾಡಾಂತೇಳಿರೂ ನನ್ನ ಎರಡ್ನೇ ಮಗ್ಳು ಪೌಡರ್ ಹಾಕಿತ್. ಈ ಹಾಳ್ ಚಪ್ಪಲ್ ಹಾಕಿ ಅಭ್ಯಾಸನೂ ಇಲ್ಲೆ. ಕಾಲ್ ಎಳ್ಕಂಡ್ ಎಳ್ಕಂಡ್ ನಡೆಂಗಾತ್. ನೋಡವು ನಗಾಡವೊ. ಈ ಅಜ್ಜಿನ ಕೋಲ ನೋಡಿ ಬೊತ್ತಪ್ಪಾಂತೇಳುವೊ. ನೀ ಕೂಸ್ನ ಕೈಗೆ ಕೊಡಿಕೆ ಎಂತನೂ ತಕಂಡತಲೆಯಾ? ನಾ ಕವರ್ ಕೊಡ್ತುತ ಮಡ್ಚಿ ಹಿಡ್ಕಂಡೊಳೆ. ಅಲ್ಲಾ ಈಗೆಲ್ಲಾ ಜೋಗುಳ ಹಾಡೆಲ್ಲಾ ಕಾಡ್ ಹತ್ತಿತ್. ನಾ ಏನಾರ್ ಪದ ಹೇಳಿನೇಂತ ಸುರು ಮಾಡಿರೆ 'ನಿನ್ನ ಹಳೆರಾಗ ನಿಲ್ಸವ್ವಾ. ಹೊಸ ಟೇಪು ತಂದೊಳೊ'ಂತೇಳಿಕಂಡ್ ಎಂತಂತದೋ ಪದ ಹಾಕಂಡ್ ಕೊಣ್ದವೆ. ನೀವ್ ಹೆಂಗಾರ್ ಹಾಳಾಗಿತ ನಾನೂ ಪದ ಹೇಳ್ದು ಬುಟ್ ಬುಟ್ಟೆ. ಓಹೋ! ನಾವ್ ಆ ರಸ್ತೆಲೇ ಹೋಕಾಗಿತ್. ಗದ್ದೆಗಾಗಿ ಹೋದರೆ ಹತ್ರಂತ ನಾ ನಿನ್ನ ಇಲ್ಲೆ ಕರ್ಕಂಡ್ ಬಂದೆ. ಗದ್ದೆ ಪುಣಿ ಪೂರಾ ಕೆಸ್ರ್. ಹಾಳ್ ಚಪ್ಪಲ್ ಬ್ಯಾರೆ. ಆ ದೊಡ್ಡಗದ್ದೆ ಕರೆಗಾಗಿ ಪೋಯಿ" ದೊಡ್ಡವ್ವ... ಹಿಂಗೆ ಮಾತಾಡಿಕಂಡೇ ಇತ್. ಸೀತೆ ಹ್ಹಾ ಹೂಂತ ಹೇಳ್ತಾ ಇತ್.

ಇಬ್ಬರೂ ಕೊಡೆ ಬುಳ್‌ಗಿಕಂಡ್ ಪುಣಿಲೇ ನಡ್ಕಂಡ್ ಹೋಗ್ತಾ ಇದ್ದೊ. ಹಿಂಗೆ ಇರಕನ ತುಂಟ ಮಕ್ಕಳೋ ಯಾರೊ ಪುಣಿ ಹುಲ್‌ಗೆ ಗಂಟ್ ಹಾಕಿ ಇಸಿದ್ದೊ. ದೊಡ್ಡವ್ವಂಗೆ ಗೊತ್ತಾತ್‌ಲೆ. ಆ ಹುಲ್‌ಗಂಟ್ ಕಾಲಿಗೆ ಸಿಕ್ಕಿ ದೊಡ್ಡವ್ವ ಎಡಗಡೆ ಗದ್ದೆಗೆ ಹೊಣ್ಕಿ ಬೀತ್. ಕೊಡೆ ಪುಣಿ ಮೇಲೆ. ಅಜ್ಜಿ ಗದ್ದೆ ಒಳಗೆ. ಒಂದ್ ಕಾಲ್‌ಲಿ ಚಪ್ಪಲ್ ಉಟ್ಟು. ಇನ್ನೊಂದ್ ಎತ್ತಲೋ ರಟ್ಟಿ ಹೋತ್. ಅದೋ ಆ ಗದ್ದೆಗೆ ಬಗಲೆ ತೆಗ್ಗಿದ್ದೊ. ಹಂದಿ ಪಳ್ಳ ಬಿದ್ದಂಗಾತ್. ಪೌಡರ್‌ಗಿವ್‌ಡರ್ ನಾಪತ್ತೆ. ಸೀತೆ ಗೂಡೆ ಬಾಯಿ ಬಾಯಿ ಬಡ್ಕಂಡ್ ದೊಡ್ಡವ್ವಂಗೆ ಕೈ ಕೊಟ್ ಪುಣಿಕಡೆ ಎಳ್ದ್ ಹಾಕಿತ್. ದೊಡ್ಡವ್ವನ ಸೀರೆಗೀರೆ

ಪೂರಾ ಕೆಸ್ರೋ ಕೆಸ್ರ್. ಸೀತೆಗೆ ಪಜೀತಿ. ಊಡಿ ಎತ್ ಬುಡಕನ ತೋಡೊಳಗೆ ಎತ್‌ಗಳ ನಿಲ್ಸಿಕಂಡ್ ಮೈ ತೊಳ್ದವೆಲ್ಲಾ ಹಂಗೆ ದೊಡ್ಡವ್ವನ ನಿಲ್ಸಿಕಂಡ್ ಸೀರೆನೆಲ್ಲಾ ಸೀತೆ ತೊಳ್ತ್. ಸೀತೆಗೆ ನಗೆ ತಡೆಕೆ ಬೊತ್ತದೆ. ದೊಡ್ಡವ್ವಂಗೆ ಒಂದ್ ಕಡೆಂದ ಸಿಟ್. ಇನ್ನೊಂದ್ ಕಡೆಂದ ಅವಮಾನ ಆದಂಗಾತ್. ಇಬ್ಬರೂ ಅಲ್ಲೇ ಪುಣೆಲಿ ಕುದ್ದೊ. ಒಳ್ಳ ಬಿಸ್‌ಲ್ ಇತ್. ಸೀರೆ ಪೂರಾ ಒಣಂಗಿತ್. ಮತ್ತೆ ಗುಣು ಗುಣು ಮಾತಾಡಿಕಂಡ್ ಹೊರ್‍ಟೊ. ಮನೆಗೆ ಎತ್ತಿದೊ. ಮನೆವು ನೀರ್ ಕೊಟ್ಟೊ. ಕಾಲ್ ತೊಳ್ಕಂಡ್ ಒಳಗೆ ನುಗ್ಗಿದೊ. ಗಂಡ್ ಜನ ಕೈಯಾಲೆಲಿ "ಡಲ್" ಆಗಿ ಕುದ್ದಿದ್ದೊ.

ಒಳಗೆ ಜೋಗುಳಗೀಗುಳ ಯಾವ್ದೂ ಇಲ್ಲೆ. ಹೆಣ್ ಮಕ್ಕಳ ನೆಗೆ ಮಾತ್‌ನೆಲ್ಲ ಮೀರಿಕಂಡ್ ಆ ಕೂಸ್‌ದ್ ಸೈರನ್ ಕೇಳ್ತಾ ಇತ್. ದಮ್‌ಕಟ್ಟಿ ಮರ್‍ಡ್ತಾ ಇದ್ದ ಕೂಸುಗೆ ಅಯ್ಯೆ ಬೋಜಿ "ನೋಡು ಅಲ್ಲಿ ಅತ್ತೆ. ಇಲ್ಲಿ ನೋಡು ಆಂಟಿ, ಅಲ್ಲಿ ನೋಡು ಅಕ್ಕ, ಇಲ್ಲಿ ನೋಡು ಅಜ್ಜಿ"ಂತೆಲ್ಲಾ ತೋರ್‌ಸಕನ ನೀ ಬೇಕರೆ ನೋಡಿಕಂತೇಳುವಂಗೆ ಕೂಸು ರಂಪ ಮಾಡಿಕಂಡ್ ಮರ್‍ಡ್ತಾ ಇತ್.

ಕೂಸುನ ಬಾಯಿಗೆ "ಅನ್ನ" ಕೊಡಿಕೆ ಸುರು ಮಾಡ್ದೊ. ಕೈ ತೊಳ್ದವು ತೊಳೆದೇ ಇರವು ಪೂರಾ ಅದರ ಬಾಯಿಗೆ ಅನ್ನ ಕೊಟ್ಟೊ. ಆಶೀರ್ವಾದ ಮಾಡ್ದೊ. ನೀ ದೊಡ್ಡ ಕೆಲ್ಸಕೆ ಹೋಗುತ ಒಬ್ಬ ಹೇಳ್ತ್. ಇನ್ನೊಬ್ಬ ನೀ ಡಾಕ್ಟರ್ ಆಗ್‌ತ ಹೇಳ್ತ್. ಮತ್ತೊಬ್ಬ ನೀ ಇಂಜಿನಿಯರ್ ಆಕುಂತ ಹೇಳ್ತ್. ಇನ್ನೊಬ್ಬ ನೀ ಓದಿಕೆ ಫಾರಿನ್‌ಗೆ ಹೋಗಿ ಅಲ್ಲೆ ಚಾಕ್ರಿ ಮಾಡ್‌ತ ಹೇಳ್ತ್. ಕೂಸು ಮಾತ್ರ ಒಂದೇ ಸಮ ಮರ್‍ಟ್‌ಕಂಡೇ ಇತ್. ಸುಸ್ತು ಆಗಿ ಆಕನ ಕೂಸು ಮರ್‍ದುದ್ ಕಮ್ಮಿ ಮಾಡ್ತ್. ಈ ಗಲಾಟೆಲಿ ಕಟ್ಟಿಕಂಡೇ ಇದ್ದ ಕೂಸು ಚೊಳ್‌ಂತ ಸ್ಪ್ರಿಂಕ್ಲರ್ ಹಾರ್‍ಸಿತ್. ಅದ್ ಹಾರ್‍ದ್ದ ಅದರ ತಲೆ ಕಡೆಗೆ. ಗಂಡ್ ಕೂಸು ಒಯ್ಯೊದೇ ಹಂಗೆತ ಅಜ್ಜಿ ಬೊಚ್ ಬಾಯಿ ಬುಟ್‌ಕಂಡ್ ನಗಾಡ್ತ್. ಸುತ್ತ ಇದ್ದ ಎಲ್ಲವ್ ಒಟ್ಟಿಗೆ ನಗಾಡಕನ ಕೂಸು ಸೆಕೆಂಡ್ ರೌಂಡ್ ಸೈರನ್ ಸುರು ಮಾಡ್ತ್. ರಾತ್ರೆ ಹುಟ್ಟಿದ ಕೂಸು ಹಗ್ಲ್ ಮರ್‍ದುದು, ಹಗ್ಲ್ ಹುಟ್ಟಿದ ಕೂಸು ರಾತ್ರೆ ಮರ್‍ದುದುಂತೆಲ್ಲಾ ಹೇಳಿಕಂಡ್ ಕಾರ್ಯ ಮುಂದೊರ್‍ಸಿದೊ.

"ಓಹೋ, ತೊಟ್ಲ್ ಕರೆಲಿ ಪುಸ್ತಕ ಇಸಿತ್ಲೆಲಾ. ಯಾವ ಪುಸ್ತಕ ಇಸುದು? ರಮೇಸನ ನಾಕನೇ ಕ್ಲಾಸ್ ಕನ್ನಡ ಪುಸ್ತಕನ ಇಸನೋ. ನಿಂಗೆ ಸೊಯ ಉಟ್ಟಾ. ಅಕ್ಕುಣಿದ್ ಹತ್ತನೇ ಇಂಗ್‌ಲೀಸ್ ಪುಸ್ತಕ ಇಸಿ"ಂತೇಳಿಕಂಡ್ ತೊಟ್ಲು ಕರೇಲಿ 'ಇಂಗ್ಲಿಷ್' ಪುಸ್ತಕನೇ ಇಸಿದೊ. "ಇಂಗ್‌ಲೀಸ್ ಪುಸ್ತಕನೇ ಇಸಿದ್ ಒಳ್ಳೆದಾತ್‌ತ" ಯಾವ ಭಾಷೆನೂ ಓದದ ಅಜ್ಜಿಗೆ ಕುಸೀ ಆತ್!

ಒಳಗೆ ಹಿಂಗೆಲ್ಲಾ ಆಕನ ಹೊರಗೆ ಕೈಯಾಲೆಲಿ "ಡಲ್" ಆಗಿ ಕುದ್ದ ಜನ "ಬ್ರೈಟ್" ಆಬುಟ್ಟೊಳೊ. ಮಾತೊ ಮಾತ್. ನಗೆಯೋ ನಗೆ!

ಮೊಕನೆಲ್ಲಾ ಕೆಂಪು ಕೆಂಪು ಮಾಡಿಕಂಡ್ ನೀರ್ ಹಾಕಂಡೊ ಹಾಕದೆಯೋ ಏರ್‌ಸ್ತಾ ಇದ್ದೊ. "ಊಟಕ್ಕೇಳಿತ" ಮನೆ ಯಜಮಾನನ ಪ್ರೀತಿಯ ಕರೆಗೆ ಜನ ಎಲೆ ಮುಂದೆ ಕುದ್ದೊ. ಕುಸೀಲಿ ಉಂಡೊ. ಕೈ ತೊಳ್ದೊ. ಎಲೆ ಅಡಿಕೆ ಅಗ್ದೊ. ಜಗಲ್ ಕರೆಗೆ ಉಗ್ದೊ. ಹೂ ಗಿಡನೆಲ್ಲಾ ಮೆಟ್ಟಿಕಂಡ್ ಹಾರ್‍ದೊ. ಸಿಕ್ಕಿದ ಚಪ್ಪಲ್ ಒಳಗೆ ಪಾದ ನುಗ್ಗಿಸಿದೊ."ಪೋಯಲ್ಲ, ಪೋಯಲ್ಲಂತ" ಹೇಳಿಕಂಡ್ ಅಲ್ಲೇ ನಿತ್ತೊ. ಹೆಣ್ ಮಕ್ಕಳೂ ಹೊರ್‍ಟೊ. ಒಂದ್ ರೌಂಡ್ ಕೈಕಾಲ್ ಹಿಡ್ದ್ ಅಂಗಳಕ್ಕೆ ಇಳ್ದೊ. ಪುನಾ ಅಲ್ಲೇ ಗುಂಪುಕೂಡಿ ಮಾತಾಡಿಕೆ ಸುರು ಮಾಡ್ದೊ. ಗಂಟೆ ಎರಡ್ ಕಳ್ತ್. "ನಮ್ಮ ಇವು ಬಾಕಾತ್" ಪೋಯಿ ಪೋಯಿಂತ ಹೇಳಿ ಇನ್ನೊಮ್ಮೆ ಎಲೆ ಅಡಿಕೆ ಅಗ್ದೊ.

ಅಲ್ಲೆ ಕರೆಲಿ ನಿತ್ತಿದ್ದ ಅಜ್ಜಪಂಗೆ "ಅಜ್ಜಪ್ಪಾ ನಾವ್ ಹೋಗಿ ಬಂದವೇ"ಂತ ಹೇಳಿ ಕಾಲಿಗೆ ಬಿದ್ದೊ. ಅಜ್ಜಪ್ಪ "ಆತ್ ಹೋಕಂಡ್ ಬನ್ನಿ...... ಗುಡ್ ನೈಟ್"ತ ಹೇಳ್ತ್!! ಮಟ ಮಟ ಮಧ್ಯಾಹ್ನ ಅಜ್ಜಪ್ಪ ಗುಡ್ ನೈಟ್‌ಂತ ಹೇಳ್ದು ಕೇಳಿ ಜನ ಪೂರಾ ಹೊಟ್ಟೆ ಹಿಡ್ಕಂಡ್ ನಗಾಡ್ದೊ. ಅಷ್ಟೊತ್ತಿಗೆ ಅಜ್ಜವ್ವ ಓಡಿ ಬಂದ್ "ನೀವಿಗೆ ಹೊತ್ತು ಗೊತ್ತು ಒಂದೂ ಗೊತ್ತಿಲ್ಲೆನಾ? ಗುಡ್ ನೈಟ್ ಗಡ ಗುಡ್‌ನೈಟ್‌ಂತ" ಸವಾ ದಬಾಯ್ಸಿತ್. ನೈಂಟಿ ನೈಂಟಿ ಎರಡ್‌ದಪಾ ಹಾಕಿದ ಅಜ್ಜಪಂಗೆ ನಗೆಯೋ ನಗೆ.

ನೆಂಟ್ರ್ ಬಂದೊ......ತಿಂದೊ. ಕುಡ್ದೊ. ಹೋದೊ. ಕೂಸುನ ಹೆಸ್ರ್ ಎಂತಾ? ಡಿಂಪಲೊ, ಸಿಂಪಲೊ. ಎಂತದೊ ಉಮ್ಮಾ.........ಮರ್‍ತೇ ಹೋತು...........ಮನೇಲಿ ಕೇಳಿರೆ ಎಂತಾಂತ ಹೇಳ್ದು?



# ಅರ್ಥಕೋಶ

| | | | |
|---|---|---|---|
| ಅಚ್‌ಕಟ್ | - ಅಣಿಮಾಡು | ಚಾಮೆವ್ವ | - ಅಜ್ಜಿ |
| ಅಂಬಟೆ ಕಚ್ | - ಅವುಡು ಕಚ್ಚು | ಚಿರಿ | - ಚಿಗುರು |
| ಅಮ್‌ತ್‌ಕಂಡ್ | - ಅವಿತುಕೊಂಡು | ಜಡ್ | - ಕೊಳೆತ ಸ್ಥಿತಿಯ ಮಾಂಸ |
| ಅಯ್ಯೆ | - ಅಮ್ಮ | ನೀಂಬು | - ಉಜ್ಜು |
| ಉಂದು | - ತಳ್ಳು | ಪಜ್ಜಿ | - ಚಟ್ನಿ |
| ಕರ್ಟ್ | - ಮಿಡಿಯೂ ಅಲ್ಲದ ಬಲಿತದೂ ಅಲ್ಲದ | ಪಿಳ್ಳಿ | - ಮೊಮ್ಮಗು |
| ಕಟ್ಲ್ | - ಮಂಚ | ಪೀಂಕಿಕೆ | - ಕೀಳಲು |
| ಕಡ್ಪ | - ತೀಕ್ಷ್ಣ | ಪುಣಿ | - ಏರಿ |
| ಕಡಾವು | - ಮರದ ಪಾದರಕ್ಷೆ | ಬರ್ಕಚ್ಚಿ | - ಪಕ್ಕೆಲುಬು |
| ಕಂಪರ | - ಕವುಚಿ | ಬೀರ | - ವೀರ |
| ಕಾಂಕ್ರಿಸಿ | - ಕ್ಯಾಕರಿಸಿ | ಬಾವಡೆ | - ಮುಚ್ಚೊಳ |
| ಕುರೇಂಗಿ | - ಕಾಡುಕುರಿ | ಮರ್ಟ್‌ಕಂಡ್ | - ಅಳುತ್ತಾ |
| ಕೆಕ್ಕರ್ಸಿ | - ದುರುಗುಟ್ಟಿ | ಮಂಟಿ | - ದಿಬ್ಬ |
| ಕೊದಿ | - ಆಸೆ | ಮಡೆ | - ಎಂಜಲು |
| ಕೊಸ್ಕ್ | - ತಲೆಸಿಡುಕು | ಮಾಡಿ | - ಮಹಡಿ |
| ಗನ್ನೆ, ಗೋಚರ | - ಪ್ರಜ್ಞೆ | ಮುಕುಡ | - ಕುಳಿತಲ್ಲೆ ನಿದ್ದೆ ತೂಗು |
| ಗಡಿಹಾಕ್ | - ಕತ್ತಿ ಅಥವಾ ಕೊಡಲಿಯಿಂದ ಕಡಿ | ಲೋಲುಗಾರಿಕೆ | - ಇಚ್ಛಾನುಸಾರ |
| ಚಕ್ಕಳ | - ಚರ್ಮ | ಸೊಯ | - ಪ್ರಜ್ಞೆ |
| ಚಪ್ಡಾಂಗಿ | - ಕೆಲಸಕ್ಕೆ ಬಾರದ ಮಾತುಗಾರ | ಸ್ಟಾಟ್ | - ಸ್ಟಾರ್ಟ್ |
| ಚಾಕಲೆ | - ಲಾಚಾರು | ಹಕ್ಕಲೆ | - ಹತ್ತಿರ |
| ಚಾಂಪ | - ಅಜ್ಜ, ತಾತ | ಹೀಂಪು | - ಚೀಪು |

**ಸೂಚನೆ :**

ಮಂಞ, ಕುಂಞಪ್ಪ ಪದಗಳ್‌ಲಿ ಅನುಸ್ವರ ಬೇಡ. ಮಞ, ಕುಞಪ್ಪ ಸರಿ.

ಎತ್ತ್, ಮದ್ದ್, ನಿಲ್ಲ್ ಪದಗಳ್‌ಲಿ ಸಜಾತಿಯ ಸಂಯುಕ್ತಾಕ್ಷರ ಬೇಡ. ಎತ್, ಮದ್, ನಿಲ್ ಸರಿ. ಇದ್ ನನ್ನ ಅಭಿಪ್ರಾಯ. ನಿಮ್ಮ ಅಭಿಪ್ರಾಯಕ್ಕೆ ಸ್ವಾಗತ ಉಟ್ಟು.



*ಶ್ರೀ ಬಾರಿಯಂಡ ಆರ್. ಜೋಯಪ್ಪನವು* ಕಳ್ದ ಕೆಲವು ವರ್ಷಗಳ್‌ಂದ ನಮ್ಮ ಭಾಷೆಲಿ ಸಾಹಿತ್ಯ ರಚನೆ ಮಾಡ್ತಾ ಒಳೊ. ಅರೆಕನ್ನಡ ಭಾಷೆ ಗದ್ಯ ಸಾಹಿತ್ಯ ಇಲ್ಲಿವರೆಗೆ ಸಂಕಲನ ರೂಪಲಿ ಹೊರಗೆ ಬಾತ್ಲೆ. ಸಾಹಿತ್ಯ ಅಂದರೆ ಅದೊಂದು ಮಾಯಾಮೃಗ ಅಲ್ಲ, ನಮ್ಮ ಮನೆ ಕೈಯಾಲೆ, ಕೋಂಬರೆಗಳಲ್ಲಿನೂ ಅದ್ ಹುಟ್ಟುದು, ನಮ್ಮ ಮನೆಮಾತ್‌ಲಿ ಅದ್ ಅಭಿವ್ಯಕ್ತಿ ಪಡ್ಕಂಬುದು ಅಂತ ನಾವು ತಿಳ್ಕಂಡೊಳೊ! ಹಾಂಗೆ ಶ್ರೀ ಬಾರಿಯಂಡ ಆರ್. ಜೋಯಪ್ಪನವರ ಬರಹಗಳ ಸಂಕಲನ ತಾವ ಜವಾಬ್ದಾರಿಗೆ ನಾವ್ ಕೈ ಹಾಕೊಳೊ. ಈ ಕೃತಿ ನಮ್ಮ ಸಮುದಾಯದ ಜನಕ್ಕೆ, ಅದರ್ಲಿನೂ ಹೊಸ ತಲೆಮಾರ್‌ನವ್ಕೆ, ಸಾಹಿತ್ಯದ ಮೇಲೆ ಆಸಕ್ತಿ, ಪ್ರೀತಿ ಹೆಚ್‌ಸಲೀಂತ ನಮ್ಮ ಹಂಬಲ.

ಶ್ರೀ ಬಾರಿಯಂಡ ಆರ್. ಜೋಯಪ್ಪನವು ಮದೆನಾಡ್‌ನ ಮದೆ ಮಹೇಶ್ವರ ಜೂನಿಯರ್ ಕಾಲೇಜ್‌ಲಿ ಪ್ರಿನ್ಸಿಪಾಲರಾಗಿ ಸೇವೆ ಸಲ್‌ಸ್ತಾ ಒಳೊ. ಇವು1998ರ್ಲಿ ಬರ್ದ 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು' ಪುಸ್ತಕ ತುಂಬಾ ಹೆಸ್‌ರ್ ಪಡ್ದುಟು. ಈಗ ಇವು ಬರ್ದ ಈ ಎರಡನೇ ಪುಸ್ತಕ ಈ ನಾಡಿಗೆ ಸಲ್ಲುವ ಮತ್ತೊಂದು ಅಮೂಲ್ಯ ಕಾಣಿಕೆ.

*ಹೊಸೂರು ರಮೇಶ ಜೋಯಪ್ಪ*
ಅಧ್ಯಕ್ಷರ್
ಮತ್ತೆ
ಸದಸ್ಯರ್
ಕೊಡಗು ಗೌಡ ವಿದ್ಯಾಸಂಘ, ಗುಡ್ಡೆಮನೆ ಅಪ್ಪಯ್ಯ ಗೌಡ ದಾರಿ,
ಮಡಿಕೇರಿ - 571 201, ಕೊಡಗು ಜಿಲ್ಲೆ.